# ಹೊಸತು

ನೆಮ್ಮದಿಯ ನಾಳೆ ನಮ್ಮದು




ಡಿಸೆಂಬರ್ ೨೦೦೦
ಬೆಲೆ : ರೂ. ೧೦





ಮುಂದಿನ ಸಂಚಿಕೆ
ವಾರ್ಷಿಕ ವಿಶೇಷಾಂಕ
ನಿಮ್ಮ ಪ್ರತಿಯನ್ನು
ಕಾದಿರಿಸಿಕೊಳ್ಳಿ

# ಹೊಸತು

## ಒಳಗೇನಿದೆ.....




*ಚಿತ್ರಗಳು : ಪ್ರಕಾಶ್ ಶೆಟ್ಟಿ, ರವಿಕುಮಾರ್ ಅಜ್ಜೀಪುರ, ಹರಿಣಿ ಹರಿ, ವಸಂತ ಹೊಸಬೆಟ್ಟು, ಜಿ. ಎಂ. ಬೊಮ್ಮಳ್ಳಿ*

*ಮುಖಪುಟ ಮತ್ತು ಮೂರನೇ ರಕ್ಷಾಪುಟದ ಚಿತ್ರಗಳು : ಕೆ. ಪಿ. ಸ್ವಾಮಿ*

*ವಿನ್ಯಾಸ : ನವಕರ್ನಾಟಕ ವಿನ್ಯಾಸ ಕಚೇರಿ ಸಹಕಾರ : ಜಿ. ವಿ. ತೇಜೋವತಿ*


**ಹ**ತ್ತು ಹದಿನೈದು ವರ್ಷಗಳ ಹಿಂದಿನ ಮಾತು. ಕಲ್ಕತ್ತೆಯಲ್ಲಿ ಕಾರ್ಲ್ ಮಾರ್ಕ್ಸ್ ಪ್ರತಿಮೆಯೊಂದನ್ನು ಸ್ಥಾಪಿಸುವುದಿತ್ತು. ಆ ಬಗ್ಗೆ ಮುಖ್ಯಮಂತ್ರಿ ಜ್ಯೋತಿ ಬಸು ಅವರೊಡನೆ ಚರ್ಚಿಸಲು ಭಾರತ - ಜಿ. ಡಿ. ಆರ್. ಮೈತ್ರಿಕೂಟದ ಕೆಲವು ಸದಸ್ಯರು ಅವರ ಕಚೇರಿಗೆ ಒಂದು ಮಧ್ಯಾಹ್ನ ಹೋದರು. ನಿಯೋಗದಲ್ಲಿದ್ದವರೆಲ್ಲಾ ಶ್ರೀ ಬಸು ಅವರ ಸ್ನೇಹಿತರೇ : ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಗೀತಾ ಮುಖರ್ಜಿ, ಫುಲರೇಣು ಗುಹಾ ಮುಂತಾದವರು. ಅಂದು ಯಾವುದೋ ಕ್ರಿಕೆಟ್ ಆಟ ದೂರದರ್ಶನದಲ್ಲಿ ಪ್ರಸಾರವಾಗುತ್ತಿತ್ತು. ಮೂರು ಗಂಟೆಗೆ ಬಸು ಅವರು ಕಚೇರಿಗೆ ಬಂದಾಗ ಸರ್ಕಾರಿ ನೌಕರರು ಪಡಸಾಲೆಗಳಲ್ಲಿ ನಿಂತು ಟಿ. ವಿ. ನೋಡುತ್ತಿದ್ದರು. ಇದನ್ನು ಕಂಡ ಬಸು ಅವರಿಗೆ ಕೋಪ ಉಕ್ಕಿ ಬಂತು: ಕೆಲಸಗಳಲ್ಲಿ ನಿರತರಾಗಬೇಕಾಗಿದ್ದವರು ಆಟ ನೋಡುತ್ತಾ ಕಾಲ ಕಳೆಯುವುದೆ? ಕೂಡಲೆ ಟಿ. ವಿ. ಗಳನ್ನು ಆರಿಸಿ ಅವರವರ ಸ್ಥಾನಗಳಿಗೆ ಹೋಗಬೇಕೆಂದು ಬಸು ಹೇಳಿದರು. ನೌಕರರು ಕೇಳಬೇಕಲ್ಲ! ಅವರು ಬಸು ವಿರುದ್ಧ ತಿರುಗಿಬಿದ್ದರು, ಘೋಷಣೆ ಕೂಗಿದರು, ಘೇರಾವ್ ಮಾಡುವುದಾಗಿ ಬೆದರಿಕೆ ಹಾಕಿದರು. ಕ್ರಿಕೆಟ್ ವ್ಯಾಮೋಹವು ಎಂತಹ ಕೆಡುಕನ್ನು ತರಬಹುದೆಂಬ ನೇರ ಪರಿಚಯ ಬಸು ಅವರಿಗಾಯಿತು. "ನನಗೆ ನೀವು ಮುತ್ತಿಗೆ ಹಾಕಿದರೂ ಸರಿಯೆ, ಕೆಲಸದ ವೇಳೆಯಲ್ಲಿ ಕೆಲಸ ಮಾಡದಿರಲು ನಿಮಗೆ ಹಕ್ಕಿದೆಯೆಂದು ನಾನು ಒಪ್ಪಲಾರೆ", ಎಂದು ಜ್ಯೋತಿ ಬಾಬು ಗುಡುಗಿ ನೌಕರರನ್ನು ಬಾಯಿಮುಚ್ಚಿಸಿದರು. ಅವರ ಕೊಠಡಿಗೆ ಹೋಗುವಾಗ್ಗೆ ಮುಖ ಕೆಂಪೇರಿತ್ತು. ನಿಯೋಗದಲ್ಲಿ ತೆರಳಿದ್ದವರು ಅವರನ್ನು ಭೇಟಿಯಾಗಿ 'ಇಂದಲ್ಲದಿದ್ದರೆ ಇನ್ನೊಂದು ದಿನ ಭೇಟಿಯಾಗೋಣ, ಈಗ ನೀವು ಸ್ವಲ್ಪ ವಿಚಲಿತರಾಗಿದ್ದೀರಿ, ಈ ಘಟನೆ ನಮಗೂ ಘಾಸಿ ತಂದಿದೆ', ಎಂದಿತ್ಯಾದಿಯಾಗಿ ಹೇಳಿದರು. 'ನಮ್ಮ ಮಾತುಕತೆಗೆ ಇದು ಅಡ್ಡಿಯಾಗಬಾರದು, ಕುಳಿತುಕೊಳ್ಳಿ, ಸ್ವಲ್ಪ ಟೀ ಕುಡಿದು ಮಾತಾಡೋಣವಂತೆ', ಎಂದು ಹೇಳಿ ಬಸು ಅವರು ಲಗುಬಗೆಯಿಂದ ಯಥಾಪ್ರಕಾರ ಕಾರ್ಯಮಗ್ನರಾದರು.

ಇದು ಕಾಮ್ರೇಡ್ ಜ್ಯೋತಿ ಬಸು ಅವರ ಶೈಲಿಗೆ ಒಂದು ಚಿಕ್ಕ ಉದಾಹರಣೆ. ಯಾವುದಕ್ಕೆ ಘೋಷಣೆ, ನೇರ ಕಾರ್ಯಾಚರಣೆ ಎಂಬುದರ ಬಗ್ಗೆ ಅವರಿಗೆ ಖಚಿತವಾದ ನಿಲುವಿದೆ; ಅದರಿಂದ ವಿಮುಖರಾಗುವುದು ಅವರಿಗೆ ತಿಳಿದಿಲ್ಲ. ರಾಜಕಾರಣವು ಪ್ರಜಾಕಾರಣ ಎಂಬುದನ್ನು ವಾಸ್ತವಿಕವಾಗಿ ತೋರಿಸಿಕೊಟ್ಟಿರುವ ಅವರು ಈಗ ನಿವೃತ್ತಿ ಘೋಷಿಸಿ ಮುಖ್ಯಮಂತ್ರಿ ಸ್ಥಾನವನ್ನು ಬಿಟ್ಟಿದ್ದಾರೆ. ತನ್ನ ಧೀರತ್ವಕ್ಕೆ ಹೆದರಿ ಓಡಿಹೋದರೆಂದು ಮಮತಾ ಬ್ಯಾನರ್ಜಿ ಬಡಬಡಿಸಿರುವುದು ಆಕೆಯ ಎಳೆ ನಿಂಬೇಕಾಯಿತನಕ್ಕೆ ನಿದರ್ಶನ. ಭೀಷ್ಮರನ್ನು ಶರಶಯ್ಯೆಗೆ ಕಳಿಸಿದ ಶಿಖಂಡಿ ತಾನೆಂಬ ಹಮ್ಮು ಮಮತಾ ಅವರನ್ನು ಕಾಡುತ್ತಿದ್ದರೆ ಜ್ಯೋತಿ ಬಾಬು ಶಸ್ತ್ರಸನ್ಯಾಸ ಸ್ವೀಕರಿಸಿಲ್ಲವೆಂಬುದು ಹತಾಶೆಯನ್ನು ತಂದಿರಬೇಕು. ಇಂಥವರನ್ನು ಕಂಡು ಕಾಲಿಗೆ ಬುದ್ಧಿ ಹೇಳಬೇಕಾದ ಪ್ರಸಂಗ ಬಸು ಅವರಿಗಿಲ್ಲ; ಏಕೆಂದರೆ ಜನಸಮೂಹದ ಆಕಾಂಕ್ಷೆಗಳನ್ನು ತಮ್ಮದನ್ನಾಗಿಸಿಕೊಂಡು ಶ್ರಮಿಸಿದ ಕೀರ್ತಿ ಅವರದಾಗಿದೆ. ಮಾತಿನಿಂದ ಮರುಳಾಗಿಸಿ ನಾಯಕತ್ವವನ್ನು ಭದ್ರಪಡಿಸಿಕೊಳ್ಳುವ ಮಮತಾಗೆ ತಾನು ಇಂದಿನಿಂದ ಆರು ದಶಕಗಳ ನಂತರ ಎಲ್ಲಿರುತ್ತಾರೆಂಬುದರ ಕಲ್ಪನೆ ಬರಲಾರದು. ಆರು ದಶಕಗಳ ಸತತ ಪರಿಶ್ರಮ ಜ್ಯೋತಿ ಬಸು ಅವರಿಗೆ ಅನಂತ ಶ್ಲಾಘನೆಯನ್ನು ತಂದಿದೆಯೆಂಬ ಪರಿವೆ ಮಮತಾಗಿಲ್ಲದಿದ್ದರೆ ಬೇಡ, ಜನರಿಗಿದೆ; ಅದೇ ಬಸು ಅವರು ಕಮ್ಯುನಿಸ್ಟರಾಗಿ ಗಳಿಸಿರುವ ಶುಭ್ರ ಕಿರೀಟ.

ಗುಜರಾತಿನ ಭಾರತೀಯ ಜನತಾ ಪಕ್ಷದ ಇಬ್ಬರು ಕ್ಷುದ್ರ ರಾಜಕಾರಣಿಗಳು ತಮ್ಮ ಮಂತ್ರಿ ಪದವಿಗಳಿಗೆ ರಾಜಿನಾಮೆ ಕೊಟ್ಟಿರುವುದು ಮಮತಾಗೆ ದಿಕ್ಸೂಚಿಯಾಗಬೇಕು. ಹದಿನೈದು ವರ್ಷಗಳ ಹಿಂದೆ ಮತೀಯ ಘರ್ಷಣೆಗಳ ಹಿನ್ನೆಲೆಯಲ್ಲಿ ಒಬ್ಬ ಪೊಲೀಸ್ ಅಧಿಕಾರಿಯನ್ನು ಹತ್ಯೆ ಮಾಡಿಸಿದ ಆಪಾದನೆ ಈ ಗುಜರಾತಿನ ಮಂತ್ರಿಗಳ ಮೇಲಿದೆ: ಕೇಂದ್ರ ಸಚಿವರೊಬ್ಬರು, ರಾಜ್ಯ ಸಚಿವರೊಬ್ಬರು. ದೇಶಕ್ಕೆ ಎಂತಹ ರಾಜಕೀಯ ಬೇಕೆಂಬುದಕ್ಕೆ ಜ್ಯೋತಿ ಬಸು ಪ್ರತೀಕವಾದರೆ, ಎಂಥದ್ದು ಬೇಡ ಎಂಬುದಕ್ಕೆ ಮಮತಾ, ಹರಿನ್ ಪಾಠಕ್ ಮತ್ತು ಅಶೋಕ್ ಭಟ್ ವಿಕೃತ ಮುಖಗಳನ್ನು ತೋರಿಸುತ್ತಾರೆ.

* * *

ಡೀಗೋ ಗಾರ್ಸಿಯಾ ಭಾರತದ ದಕ್ಷಿಣದ ಎಲ್ಲೆಯಿಂದ ಬಹುದೂರವಿಲ್ಲ. ಆ ದ್ವೀಪಗಳಲ್ಲಿ ಅಮೆರಿಕಾದ ಅಣ್ವಸ್ತ್ರ ಶೇಖರಣೆ ಇದೆ, ಯುದ್ಧ ನೌಕೆಗಳಿವೆ. ಇಪ್ಪತ್ತು ವರ್ಷಕ್ಕೂ ಹೆಚ್ಚು ಕಾಲದಿಂದ ಅದರಿಂದ ನಮಗಿರುವ ಅಪಾಯವನ್ನು ಕುರಿತಂತೆ ಭಾರತದ ಶಾಂತಿ ಚಳುವಳಿ ಎಚ್ಚರಿಕೆ ನೀಡುತ್ತಾ ಬಂದಿದೆ. ನಮ್ಮ ಮಾಧ್ಯಮಗಳ ದೊರೆಗಳಿಗೆ ಅದು

*(೧೬ನೇ ಪುಟದಲ್ಲಿ ಮುಂದುವರೆದಿದೆ)*

ತಿಂಗಳ ಪತ್ರಿಕೆ

ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨ ಸಂಚಿಕೆ - ೫ ಡಿಸೆಂಬರ್ ೨೦೦೦

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಬಿ. ಜಿ. ಗುಜ್ಜಾರಪ್ಪ
ಎಸ್. ಗುರುದತ್
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ,
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೮೨೬

*ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೮೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in


# ಮಾನವ ಹಕ್ಕುಗಳು

**ಮಾ**ಧ್ಯಮಗಳ ಅಂತರರಾಷ್ಟ್ರೀಯ ಜಾಲದ ಸ್ವರೂಪ ವಿಚಿತ್ರವಾಗಿದೆ : ಕೆಲವು ಸಂಗತಿಗಳಿಗೆ ವಿಶೇಷ ಪ್ರಚಾರ, ಇನ್ನು ಕೆಲವಕ್ಕೆ ಬೆಳಕಿಗೇ ಬಾರದಿರುವಂಥ ಸಂದರ್ಭ. ಇದಕ್ಕೆ ಕಾರಣ ಮಾಧ್ಯಮಗಳ ಒಡೆಯರ ಒಲವುಗಳು, ನಿಲುವುಗಳು. ಎಪ್ಪತ್ತರ ದಶಕದಲ್ಲಿ ಚಿಲಿಯಲ್ಲಿ ನಡೆಸಲಾದ ಹತ್ಯೆಗಳ ಆಯೋಜನೆ ನಡೆಸಿದ್ದು ಅಮೆರಿಕಾದ ಗೂಢಚಾರ ಸಂಸ್ಥೆ ಎಂದು ಇಂದು ಬಹಿರಂಗವಾಗಿದೆ. ಅದು ಜರುಗುತ್ತಿದ್ದಾಗ ಮಾಧ್ಯಮಗಳಿಗೆ ಅದು ತಿಳಿದಿರಲಿಲ್ಲವೆಂದಲ್ಲ. ಚಿಲಿಯ ಸಂಪತ್ತು ತಮ್ಮ ಅನುಭೋಗಕ್ಕೆ ದಕ್ಕಲು ಹತ್ಯೆಗಳಿಗೆ ಬೆಂಬಲ ನೀಡಿದ್ದ ಅಮೆರಿಕಾದ ಅಧಿಪತಿಗಳು ಆಗ ಮಾನವ ಹಕ್ಕುಗಳ ಉಲ್ಲಂಘನೆಯಾಗಿದ್ದಿತೆಂದು ಹೇಳಲು ಸಿದ್ಧರಿರಲಿಲ್ಲ. ಈಗ ಹಾಗೆ ಹೇಳುವುದರಿಂದ ಚಿಲಿಯ ಇಂದಿನ ಆಳುವ ಪ್ರತಿನಿಧಿಗಳ ಮನವೊಲಿಸಿಕೊಳ್ಳಲು ಯತ್ನಿಸಬಹುದು ಎಂಬುದು ಅಂದಿನ ದೌರ್ಜನ್ಯಗಳ ಪ್ರಕಟಣೆಗೆ ಕಾರಣ. ಅಂದೇ ಈ ಘೋರ ಪಾತಕಗಳನ್ನು ಪಟ್ಟಿ ಮಾಡಿ ಪ್ರತಿಭಟಿಸಿದವರಿದ್ದಾರೆ. ಅವರಿಗೆ ಮಾಧ್ಯಮಗಳು ಮನ್ನಣೆ ನೀಡಲಿಲ್ಲ, ಅಷ್ಟೆ. ಇಂದಿನ ಪಾತಕಗಳು ಬಹಿರಂಗವಾಗಲು ಇಪ್ಪತ್ತು ವರ್ಷ ಕಾಯಬೇಕೇನೋ! ಇಲ್ಲದಿದ್ದರೆ ಇರಾಕ್, ಯುಗೋಸ್ಲಾವಿಯಾ, ಪ್ಯಾಲಸ್ಟೈನ್, ಸಿಯಾರಾ ಲಿಯೋನ್, ಮುಂತಾದ ದೇಶಗಳ ಸಂಪತ್ತಿಗಾಗಿ ವಿದೇಶಿ ರಾಷ್ಟ್ರಗಳು ಅಮೆರಿಕಾದ ನಾಯಕತ್ವದಲ್ಲಿ ಎಷ್ಟೆಷ್ಟು ಹುನ್ನಾರಗಳನ್ನು ನಡೆಸಿ ವಿಪತ್ತನ್ನು ಹೇರಿದ್ದಾರೆ, ಹೇರುತ್ತಿದ್ದಾರೆ ಎಂಬುದು ಸಾರ್ವಜನಿಕರ ಗಮನಕ್ಕೆ ಬರುತ್ತಿತ್ತು. ಸಂಪತ್ತಿನ ಲೂಟಿಯು ಮಾನವ ಹಕ್ಕುಗಳ ದಮನಕ್ಕಿರುವ ಅತಿಮುಖ್ಯವಾದ ಪ್ರೇರಣೆಯಾದ್ದರಿಂದ ಅದನ್ನು ತಪ್ಪಿಸದೆ ಸರ್ವಾಂಗೀಣವಾಗಿ ಹಕ್ಕುಗಳ ಆಚರಣೆ - ಅನುಭವಗಳನ್ನು ನಿರೀಕ್ಷಿಸುವಂತಿಲ್ಲ.

ಮಾನವನು ಮಾನವನ ಮೇಲೆ ಎಸಗುವ ದೌರ್ಜನ್ಯವನ್ನು ಸಹಜವಾಗಿಯೇ ಮಾನವ ಖಂಡಿಸುತ್ತಾನೆ. ದಮನವು ಅಸಹಜವಾದ ಕ್ರಿಯೆ. ಅದರಿಂದ ಜೀವನ ಸೌಂದರ್ಯ ನಾಶವಾಗುತ್ತದೆ, ಕ್ರಿಯಾಶಾಲಿತ್ವ ಕುಂಠಿತವಾಗುತ್ತದೆ, ಮೇರುವ್ಯಕ್ತಿತ್ವದ ಹೊಮ್ಮುವಿಕೆ ನಶಿಸಿಹೋಗುತ್ತದೆ. ಮಾನವ ಹಕ್ಕುಗಳ ಉಗ್ರ ಪ್ರತಿಪಾದನೆ ಮಾಡುತ್ತಲೇ ಅವಕ್ಕೆ ಪ್ರತಿಬಂಧಕಗಳನ್ನೊಡ್ಡುವುದು ಇಂದಿನ ಒಂದು ವಿಪರ್ಯಾಸ. ನಾಗರಿಕತೆ ವಿಕಾಸ ಹೊಂದುತ್ತಾ ಹೆಚ್ಚು ಹೆಚ್ಚು ಹಕ್ಕುಗಳು ಮಾನವನಿಗೆ ಲಭ್ಯವಾಗಿವೆ; ಅಂತೆಯೇ ಹೊಸ ಹೊಸ ಅಡಚಣೆಗಳೂ ಆವಿರ್ಭವಿಸಿವೆ. ನರ್ಮದಾ ನದಿಯ ನೀರಿನ ಹಕ್ಕನ್ನು ಮರುಭೂಮಿಯ ಪ್ರದೇಶದಲ್ಲಿರುವವನು ಪಡೆದುಕೊಳ್ಳುವ ಸಾಧ್ಯತೆಗಾಗಿ ನದಿಯ ತೀರದಲ್ಲಿ ನೆಲೆಯುಳ್ಳವನು ನಿರ್ವಸಿತನಾಗಬೇಕು ! ವಾಷಿಂಗ್‌ಟನ್ನಿನ ಶ್ವೇತಭವನದ ಅಹಂಕಾರ ಮೆರೆಯಬೇಕಾದರೆ ಇರಾಕಿನ ಹಸುಳೆ ಔಷಧಿ, ಹಾಲು ಇಲ್ಲದೆ ಅಸುನೀಗಬೇಕು !

೧೯೪೮ರ ಡಿಸೆಂಬರ್ ೧೦ರಂದು ವಿಶ್ವಸಂಸ್ಥೆಯು ಮಾನವ ಹಕ್ಕುಗಳ ಸಾರ್ವತ್ರಿಕ ಘೋಷಣೆಯನ್ನು ಅಂಗೀಕರಿಸಿತು. ಆಗ್ಗೆ ಅದನ್ನು ವಿರೋಧಿಸಿದವರು ಯಾರೂ ಇಲ್ಲ ; ಆದರೆ ಅದರ ಆಚರಣೆಯು ಅಷ್ಟೇ ಗಂಭೀರವಾಗಿ, ಅಚ್ಚುಕಟ್ಟಾಗಿ ಆಗಿಬಂದಿಲ್ಲ. ಜನರ ಮನಸ್ಸು ಪರಿವರ್ತನೆಯಾದರೆ ಎಲ್ಲಾ ಸುಗಮವಾಗುತ್ತದೆಂಬ ಮಾತೊಂದಿದೆ. ''ಯುದ್ಧವು ಮನುಷ್ಯನ ಮನಸ್ಸಿನಲ್ಲಿ ಹುಟ್ಟುತ್ತದೆ'' ಎಂಬ ಯುನೆಸ್ಕೋ ಹೇಳಿಕೆಯು ಇದನ್ನೇ ಸಮರ್ಥಿಸುತ್ತದೆ. ಇಂತಹ ಪರಿವರ್ತನೆಗೆ ಯಾವ ರಸತಂತ್ರವೂ ಶೋಧನೆಯಾಗಿಲ್ಲದಿರುವುದು ಶೋಚನೀಯ! ನೊಬೆಲ್ ಪುರಸ್ಕಾರ ಪಡೆದಿದ್ದ ಭೌತಶಾಸ್ತ್ರಜ್ಞ ಪಿ. ಎಂ. ಎಸ್. ಬ್ಲಾಕೆಟ್ ವಿಶ್ವದ ಸನ್ನಿವೇಶವನ್ನು ಬೇರೆ ರೀತಿಯಲ್ಲಿ ವ್ಯಾಖ್ಯಾನಿಸಿದ್ದುದುಂಟು : ''ಸಂಪತ್ತಿನ ಹಾಗೂ ಅಧಿಕಾರದ ಹಂಚಿಕೆಯಲ್ಲಿನ ತಾರತಮ್ಯ, ವಿವಿಧ ರಾಷ್ಟ್ರಗಳ ಆರೋಗ್ಯ ಮತ್ತು ಅನುಕೂಲಗಳಲ್ಲಿನ ತಾರತಮ್ಯ - ಇವು ಆಧುನಿಕ ವಿಶ್ವದ ಅನೇಕ ಘರ್ಷಣೆಗಳಿಗೆ ಕಾರಣ; ಅದೊಂದು ದೊಡ್ಡ ಸವಾಲು ಸಹ. ಇದನ್ನೆದುರಿಸದಿದ್ದರೆ ವಿಶ್ವದ ನೈತಿಕ ಪತನ ಕಟ್ಟಿಟ್ಟದ್ದು .''

ಆತ್ಮನಿಷ್ಠ ಆಶಯಗಳು ಎಷ್ಟು ಪ್ರಬಲವಾಗಿದ್ದರೂ ಅದರಿಂದಲೇ ಮಾನವ ಹಕ್ಕುಗಳು ಸಿದ್ಧಿಸಲಾರವೆಂಬುದು ಸ್ಪಷ್ಟವಿದೆ. ಹಳೆಯ ಪದ್ಧತಿಗಳನ್ನು ಉಳಿಸಿಕೊಳ್ಳುವ ಸಲುವಾಗಿ ಸಮುದಾಯದ ಆಕಾಂಕ್ಷೆಗಳನ್ನು ಹೊಸಕಿಹಾಕುವ ದುರ್ನಡತೆಯು ರಕ್ತದ ಕೋಡಿ ಹರಿಯಲು ಕಾರಣವಾಗಿರುವುದು ಚರಿತ್ರೆಯ ಪುಟಗಳಲ್ಲಿ ಕೆಂಪಾಗಿ ಉಳಿದಿದೆ. ಗುಲಾಮಿ ಪದ್ಧತಿ, ಅಸ್ಪೃಶ್ಯತೆ, ಮತಧಾರ್ಮಿಕ ಸಮಸ್ಯೆಗಳ ಅಟ್ಟಹಾಸ, ವಸಾಹತುಶಾಹಿಯ ದರ್ಪ, ಸಾಮ್ರಾಜ್ಯಶಾಹಿಯ ವಿಧ್ವಂಸಕ ಕೃತ್ಯ, ಇವುಗಳನ್ನು ವಿರೋಧಿಸಿದವರೆಲ್ಲಾ ಮಾನವ ಹಕ್ಕುಗಳಿಗಾಗಿಯೇ ಸೆಣಸಿದ್ದು. ಈಚಿನ ದಿನಗಳಲ್ಲಿ ಪೊಲೀಸ್ ದೌರ್ಜನ್ಯ, ಕೊಳೆಗೇರಿಗಳ ದುಃಸ್ಥಿತಿ, ಜನರ ಎತ್ತಂಗಡಿ, ಮುಂತಾದುವುಗಳು ಪ್ರಮುಖವಾಗಿ ಮಾನವ ಹಕ್ಕುಗಳ ಹಿನ್ನೆಲೆಯಲ್ಲಿ ಚರ್ಚೆಗೆ ಬಂದಿವೆ. ಇಲ್ಲೆಲ್ಲಾ ಮೂಲಭೂತ ಅಸ್ತಿತ್ವ ಹಾಗೂ ನಾಗರಿಕ ಹಕ್ಕುಗಳಿಗೆ ಚ್ಯುತಿಯುಂಟಾಗಿರುವುದು ನಿಜ; ಆದರೆ ಅವುಗಳ ಮೂಲೋತ್ಪಾಟನೆಯಾಗಲು ಸಾಂಸ್ಥಿಕ ಬದಲಾವಣೆಗಳು ಅಗತ್ಯ. ಬಹುರಾಷ್ಟ್ರೀಯ ಕಂಪೆನಿಗಳ ಧಾಳಿಗೆ ಅವಕಾಶ ಮಾಡಿಕೊಟ್ಟು ಅವು ಲಾಭ ಮಾಡಿಕೊಳ್ಳಲು ನಮ್ಮ ದೇಶದ ಜನರ ಹಕ್ಕುಗಳನ್ನು ತುಳಿದುಹಾಕಬಾರದೆಂಬ ಅಪೇಕ್ಷೆ ಹಸನಾದ್ದು, ಆದರೆ ಅವ್ಯಾವಹಾರಿಕವಾದ್ದು ಕೂಡ.

ಅಮೆರಿಕಾದ ಸ್ವಾತಂತ್ರ್ಯ ಘೋಷಣೆಯನ್ನು ಕುರಿತು ಲಿಂಕನ್ ಒಮ್ಮೆ ಹೇಳಿದ್ದಿದು : ''ನಾವೆಲ್ಲಾ ಸಮಾನತೆಯನ್ನು ಅನುಭವಿಸುತ್ತಿದ್ದೇವೆಂಬುದು ಹಸಿ ಸುಳ್ಳು. ನಾಳೆಯೇ ಅದು ಆಗಿಬರುತ್ತದೆಂಬ ಆಸೆಯೂ ಬೇಡ. ಆ ವರವನ್ನು ದಯಪಾಲಿಸಲು ಘೋಷಣೆ ಸಿದ್ಧಪಡಿಸಿದವರಿಗೆ ಅಧಿಕಾರವೇ ಇರಲಿಲ್ಲ. ಹಕ್ಕಿದೆಯೆಂದು ಹೇಳಿದಾಗ ಅದನ್ನು ಜಾರಿಗೊಳಿಸುವ ಸುಸಮಯ ಬೇಗನೆ ಬರಲೆಂಬ ಆಸೆಯಿತ್ತು. ಸ್ವತಂತ್ರ ಸಮಾಜದ ಲಕ್ಷಣ ಹೇಗಿರಬೇಕೆಂಬ ಸೂಚನೆಯೇ ವಿನಾ ಅದು ಗಳಿಸಲಾಗಿರುವ ಸಾಧನೆಯಲ್ಲ, ಅದು ಸದಾ ನಮ್ಮ ಆದರ್ಶ, ಅದಕ್ಕಾಗಿ ನಮ್ಮ ಶ್ರಮ.'' ವಿಶ್ವಸಂಸ್ಥೆಯ ಮಾನವ ಹಕ್ಕು ಘೋಷಣೆಯ ವಿಷಯದಲ್ಲೂ ಇದು ನಿಜ. ಅದಕ್ಕೆ ಅಂತರರಾಷ್ಟ್ರೀಯ ಕಾನೂನಿನ ಬಲವಿಲ್ಲ, ಎಲ್ಲ ದೇಶಗಳೂ ಅದನ್ನು ಅಳವಡಿಸಿಕೊಳ್ಳಲೆಂಬ ಮಹದಾಕಾಂಕ್ಷೆ ಇದೆ, ಅಷ್ಟೆ. ಅದರ ಈಡೇರಿಕೆಗೆ ಒಂದು ಸನ್ನಿವೇಶ ರಚನೆಗೊಳ್ಳಬೇಕು. ಘೋಷಣೆಯ ೨೮ನೆಯ ವಿಧಿ ಇದನ್ನು ಗಣನೆಗೆ ತೆಗೆದುಕೊಂಡಿದೆ: ''ಇಲ್ಲಿ ನಮೂದಿಸಿರುವ ಹಕ್ಕುಗಳು ಹಾಗೂ ಸ್ವಾತಂತ್ರ್ಯಗಳನ್ನು ಅನುಭೋಗಿಸಲು ಅಗತ್ಯವಾದ ಸಾಮಾಜಿಕ ಮತ್ತು ಅಂತರರಾಷ್ಟ್ರೀಯ ವ್ಯವಸ್ಥೆಯು ಎಲ್ಲರ ಹಕ್ಕೂ ಆಗಬೇಕು.'' ಆ ವ್ಯವಸ್ಥೆಯನ್ನು ರೂಪಿಸಬೇಕಾದ್ದು ಆಯಾ ದೇಶದ ಜನಸಮುದಾಯ.

ಘೋಷಣೆಯ ೨೩ನೆಯ ವಿಧಿಯ ಪ್ರಕಾರ ಎಲ್ಲರಿಗೂ ಉದ್ಯೋಗದ ಹಕ್ಕಿದೆ, ಉದ್ಯೋಗದ ಆಯ್ಕೆಯ ಹಕ್ಕಿದೆ, ದುಡಿಮೆಗೆ ನ್ಯಾಯಯುತ ಚೌಕಟ್ಟಿನ ಹಕ್ಕಿದೆ ಮತ್ತು ನಿರುದ್ಯೋಗದ ವಿರುದ್ಧದ ಹಕ್ಕಿದೆ. ನಿರುದ್ಯೋಗ ನಿವಾರಣೆಯು ಮೂಲಭೂತ ಆದ್ಯತೆಯೆಂದು ಕೇಂದ್ರದ ಎಲ್ಲಾ ಸರ್ಕಾರಗಳೂ ಹೇಳಿಕೊಂಡಿದ್ದು ಮರೆತುಹೋದ ವಿಷಯವಲ್ಲ. ಸದ್ಯದ ವಾಜಪೇಯಿ ಸರ್ಕಾರವು

ವರ್ಷಕ್ಕೆ ಒಂದು ಕೋಟಿ ಉದ್ಯೋಗ ಸೃಷ್ಟಿಸುವುದಾಗಿ ಹೇಳಿಕೊಂಡಿತ್ತು. ಉದ್ಯೋಗ ಹುಡುಕುವ ಉದ್ಯೋಗವೊಂದು ಸೃಷ್ಟಿಯಾಗಿದೆ; ಅದೂ ಹೊಸದಾಗಿ ಸೃಷ್ಟಿಯಾದುದಲ್ಲ! ಇದ್ದ ಉದ್ಯೋಗಗಳೂ ಮುಚ್ಚಿಹೋಗುವಂತಹ ಆರ್ಥಿಕ ನೀತಿಯಿಂದ ಹೊಸ ಉದ್ಯೋಗಗಳು ಹುಟ್ಟಿಕೊಳ್ಳಲಾರವು. ಘೋಷಣೆಯ ೨೬(೧)ನೇ ವಿಧಿಯ ಪ್ರಕಾರ ಎಲ್ಲರಿಗೂ ಶಿಕ್ಷಣದ ಹಕ್ಕಿದೆ; ''ಪ್ರಾಥಮಿಕ ಮತ್ತು ಮೂಲಭೂತ ಹಂತಗಳಲ್ಲಾದರೂ ಶಿಕ್ಷಣವು ಶುಲ್ಕರಹಿತವಾಗಿರಬೇಕು. ಅದು ಕಡ್ಡಾಯವೂ ಆಗಿರಬೇಕು''. ಪ್ರಾಯೋಗಿಕವಾಗಿ ಇದು ಯಾವ ದುರಂತದ ಸ್ಥಿತಿಯಲ್ಲಿದೆ ಎಂಬುದು ಸರ್ವವಿದಿತ.

ಲಿಯೋ ಟಾಲ್‌ಸ್ಟಾಯ್ ಒಂದೆಡೆ ಬರೆಯುತ್ತಾರೆ: ''ನಾನೊಬ್ಬನ ಬೆನ್ನಮೇಲೆ ಕೂತು ಅವನ ಉಸಿರುಕಟ್ಟಿಸುತ್ತಿದ್ದೇನೆ. ಅವನು ನನ್ನನ್ನು ಹೊರಬೇಕು. ಆದಾಗ್ಗ್ಯೂ ನನಗೆ ನಾನೇ ಭರವಸೆ ಕೊಟ್ಟುಕೊಳ್ಳುತ್ತೇನೆ ಮತ್ತು ಇತರರಿಗೂ ಕೊಡುತ್ತೇನೆ : ಅವನಿಗೆ ನನ್ನ ಸಾಂತ್ವನವಿದೆ, ಅವನ ಹೊರೆ ಕಡಿಮೆ ಮಾಡಬೇಕೆಂಬ ಸದಿಚ್ಛೆ ಇದೆ, ಅದಕ್ಕಾಗಿ ಏನಾದರೂ ಪ್ರಯತ್ನ ಅಗತ್ಯವಿದೆ. ಅವನ ಬೆನ್ನಿನಿಂದ ಕೆಳಗಿಳಿಯುವುದೊಂದನ್ನು ಬಿಟ್ಟು ಬೇರೇನನ್ನಾದರೂ ಮಾಡಲು ಸಿದ್ಧ.'' - ಹೀಗಿದೆ ನಮ್ಮ ಪರಿಸ್ಥಿತಿ. ಬೆನ್ನಮೇಲಿಂದ ಇಳಿಯುವ ಹಾಗೆ ಮಾಡುವುದು ಹೇಗೆ? ಆಂತರಿಕವಾಗಿ ಬಡತನದ ರೇಖೆಗಿಂತ ಕೆಳಗಿರುವ ಜನಸಂಖ್ಯೆಯ ಶೇ. ೫೦ರಷ್ಟು ಮಂದಿಯ ಮೇಲೆ ಮೇಲುಸ್ತರದ ಶೇ. ೧೦ರಷ್ಟು ಮಂದಿ ಸವಾರಿ ಮಾಡುತ್ತಿದ್ದರೆ, ಅಂತರರಾಷ್ಟ್ರೀಯವಾಗಿ ಪಶ್ಚಿಮದ ಏಳೆಂಟು ರಾಷ್ಟ್ರಗಳು ವಿಶ್ವದ ನೂರಕ್ಕೂ ಹೆಚ್ಚು ರಾಷ್ಟ್ರಗಳ ಜನತೆಯನ್ನು ಸುಲಿದು ನುಂಗುತ್ತಿವೆ. ಅಭಿವೃದ್ಧಿ ಹೊಂದಿದ ಅಮೆರಿಕಾದಂತಹ ರಾಷ್ಟ್ರಗಳಲ್ಲಿ ಕರಿಯರು, ಅಮೆರಿಕಾದ ಮೂಲನಿವಾಸಿಗಳು, ಮುಂತಾಗಿ ಕೆಳವರ್ಗದವರು ಜನಾಂಗೀಯ ಭೇದದಂತಹ ಪಿಡುಗುಗಳಿಗೆ ತುತ್ತಾಗಿ ಮಾನವ ಹಕ್ಕುಗಳಿಂದ ವಂಚಿತರಾಗಿದ್ದಾರೆ. ಈ ದೇಶಗಳ ಹತ್ತಾರು ನಗರಗಳಲ್ಲಿ ಮುಕ್ತವಾಗಿ ಎಲ್ಲ ಕಡೆ ಓಡಾಡಿಕೊಂಡಿರಲು ನಾಗರಿಕರಿಗೆ ಸಾಧ್ಯವಿಲ್ಲ. ಚಿಕಾಗೊ, ಫಿಲಡೆಲ್ಫಿಯಾ, ವಾಷಿಂಗ್‌ಟನ್ ಮುಂತಾದ ನಗರಗಳ ಕೆಲವು ಭಾಗಗಳಿಗೆ ಬಹುಪಾಲು ಜನ ಕಾಲಿಡುವಂತಿಲ್ಲ. ಬಡತನದ ಬೇಗುದಿಗೆ ಬಿದ್ದ ಅಲ್ಲಿಯ ಜನ ಎಲ್ಲ ರೀತಿಯ ಹಿಂಸೆಗಳಲ್ಲಿ ತೊಡಗುತ್ತಾರೆ. ಅವರಿಗೆ ಮಾನವ ಹಕ್ಕುಗಳ ಸ್ಪರ್ಶವಿಲ್ಲ ಮತ್ತು ಅವರಿಂದ ಇತರರ ಹಕ್ಕುಗಳೂ ಮೊಟಕುಗೊಳ್ಳಲ್ಪಟ್ಟಿವೆ.

ಭಾರತದಂತಹ ದೇಶಗಳ ಸಂದರ್ಭದಲ್ಲಿ ಮಾನವ ಹಕ್ಕುಗಳ ಪ್ರಶ್ನೆ ಅತಿ ಪ್ರಮುಖವಾದುದು ಮತ್ತು ಜಟಿಲವಾದುದು. ಅತ್ಯಂತ ಪ್ರಾಥಮಿಕ ಹಕ್ಕುಗಳಿಂದ ವಂಚಿತರಾಗಿರುವವರು ಸಹ ಸಭ್ಯತೆಯಿಂದ ತಮ್ಮ ಸ್ಥಾನವನ್ನು ಒಪ್ಪಿಕೊಂಡು ತೆಪ್ಪಗಿರಬೇಕೆಂದು ಉಪದೇಶಿಸುವುದು ನಮ್ಮ 'ಸುಸಂಸ್ಕೃತ' ನಾಯಕರ ಸಂಸ್ಕಾರ. ಇತ್ತೀಚೆಗೆ ಆಂಧ್ರಪ್ರದೇಶದ ಪೊಲೀಸ್ ವರಿಷ್ಠನೊಬ್ಬ ಹೇಳಿದ ಮಾತಿದು: ''ನಕ್ಸಲೀಯರ ಚರಮಗೀತೆ ಹಾಡಿದ್ದಾಗಿದೆ. ಇನ್ನು ರಾಜ್ಯದ ಜನರೆಲ್ಲಾ ನಿಸೂರಾಗಿ ಬಾಳಬಹುದು.'' ಏಳು ಮಹಿಳೆಯರೂ ಸೇರಿದಂತೆ ಹಲವು 'ತೀವ್ರಗಾಮಿ'ಗಳು ಹತ್ಯೆಗೊಂಡ ನಂತರ ಈ ಹೇಳಿಕೆ ಬಂತು. ಪ್ರಭುತ್ವವು ಅವರನ್ನು ಸದೆಬಡಿಯಬಹುದು, ಆದರೆ ಅವರು ಸಮಾಜದಲ್ಲಿ ನಿಕೃಷ್ಟ ಸ್ಥಾನಕ್ಕೆ ತಳ್ಳಲ್ಪಟ್ಟಿದ್ದರೂ ಕೈಮಾಡಬಾರದು. ಅವರನ್ನು ಬಗ್ಗುಬಡಿಯಲು ತುಪಾಕಿ, ಜೀಪು, ಎಲ್ಲಾ ಕೊಡಲು ಕೇಂದ್ರದ ಅದ್ವಾನಿ ಸಿದ್ದರಿದ್ದಾರೆ. ನಮ್ಮ ಜನರ ಆರ್ಥಿಕ-ಸಾಮಾಜಿಕ ಜೀವನ ಸುಧಾರಿಸಲು ಮಾತ್ರ ಹಣದ ಕೊರತೆ ಎದ್ದುಕಾಣುತ್ತದೆ. ಹಿಂಸೆಯನ್ನು ತನ್ನ ಅಬಾಧಿತ ನಿಯಮವನ್ನಾಗಿ ಮಾಡಿಕೊಂಡಿರುವ ನಮ್ಮ ಹೀನ ಪ್ರಭುತ್ವವು ಮರ್ದಿತ ಜನರ ಮೇಲೆ ಹಿಂಸೆಯನ್ನು ಹರಿಬಿಡುವುದಲ್ಲದೆ ಅವರನ್ನು ಹಿಂಸಾಮಾರ್ಗಕ್ಕೆ ತಳ್ಳುತ್ತದೆ ; ಆಮೇಲೆ ಅವರಿಂದ ಇತರರ ಹಕ್ಕುಗಳಿಗೆ ಚ್ಯುತಿ ಬಂದಿದೆಯೆಂದು ಘೀಳಿಡುತ್ತದೆ. ಮೊದಲಿಗೆ ಅವರ ಹಕ್ಕುಗಳನ್ನು ಕಿತ್ತುಕೊಂಡದ್ದು ಯಾರು ಮತ್ತು ಹೇಗೆ ಎಂಬ ಪ್ರಶ್ನೆಗಳನ್ನು ಹಾಕಿಕೊಳ್ಳುವುದೇ ಇಲ್ಲ. ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗಕ್ಕೆ ಈ ಪ್ರಶ್ನೆಗಳೆಲ್ಲಾ ಅಪ್ರಸ್ತುತ. ಅಲ್ಲಿನ ನಿಪುಣ ಸದಸ್ಯರಿಗೆ ದೇಶದೊಳಗಿನ ಕ್ಷೋಭೆ ಕಣ್ಣು ಕುಕ್ಕುವುದಿಲ್ಲ. ಸಮಸ್ಯೆಗಳನ್ನು ಆಯೋಗದ ಗಮನಕ್ಕೆ ತಂದರೆ ಪರಿಹಾರ ಕೊಡುವ ಯೋಗ್ಯತೆಯೂ ಈ ಆಯೋಗಕ್ಕಿಲ್ಲ.

ಆರೋಗ್ಯ, ಶಿಕ್ಷಣ, ವಸತಿ, ಉದ್ಯೋಗ, ಇವುಗಳ ಹಕ್ಕು ಇಲ್ಲದಿದ್ದಾಗ ಮಾನವ ಹಕ್ಕುಗಳು ಊರ್ಜಿತವಾಗಲಾರವು. ಸುಮ್ಮನೆ ಹಕ್ಕುಗಳ ಬಗ್ಗೆ ಉದ್ದುದ್ದದ ಉಪನ್ಯಾಸ ನೀಡುವ ಜನ ಕೇವಲ ಅಮೂರ್ತವಾದ ಹಕ್ಕುಗಳ ಕಲ್ಪನೆ ಇಟ್ಟುಕೊಂಡಿದ್ದಾರೆ; ನಾವು ಇಚ್ಛಿಸಿದರೆ ಆ ಹಕ್ಕುಗಳನ್ನು ಅನುಭವಿಸಬಹುದು ಎಂಬ ಮೂರ್ಖತನದ ಭಾವನೆಗಳನ್ನು ಪ್ರಚುರಪಡಿಸುತ್ತಾರೆ. ನಮ್ಮ ದೇಶದ ಅನೇಕ ನಾಗರಿಕ ಹಕ್ಕುಗಳ ವೇದಿಕೆಗಳು ಹಾಗೂ ಎಡ ರಾಜಕೀಯ ಪಕ್ಷಗಳು ಈ ಪ್ರಶ್ನೆಯನ್ನು ಆಮೂಲಾಗ್ರವಾಗಿ ಪರಾಮರ್ಶಿಸಿ ನಮ್ಮ ದಾರಿ ಯಾವುದಾಗಬೇಕೆಂಬುದನ್ನು ಪ್ರಕಟಪಡಿಸಿವೆ. ಕೆಟ್ಟ ಬಿತ್ತನೆ ಬೀಜಗಳನ್ನು ಸರಬರಾಜು ಮಾಡಿ ರೈತರನ್ನು ಆತ್ಮಹತ್ಯೆಗೆ ತಳ್ಳುತ್ತಿರುವ ನಮ್ಮ ವ್ಯವಸ್ಥೆಯಲ್ಲಿ ಮಾನವ ಹಕ್ಕುಗಳ ಮಾತು ಒಂದು ಕ್ರೂರ ನಗೆಪಾಟಲು. ನಮ್ಮ ಭವ್ಯ ಕರ್ನಾಟಕದಲ್ಲಿ ಕಳೆದ ಒಂದು ತಿಂಗಳಲ್ಲಿ ರೈತರ ಮೇಲೆ ಐದಾರು ಕಡೆಗಳಲ್ಲಿ ಲಾಠಿ ಪ್ರಹಾರ ನಡೆದಿದೆ. ಪೊಲೀಸರ ಗುಂಡುಗಳಿಗೆ ಬಲಿಯಾದವರೂ ಇದ್ದಾರೆ. ಕಪಟದಿಂದ ಕೂಡಿದ ಮುಕ್ತ ಮಾರುಕಟ್ಟೆಯ ದ್ರೋಹದಿಂದ ತಮ್ಮನ್ನು ಪಾರುಮಾಡಿಕೊಳ್ಳಲು ಹೋರಾಟಕ್ಕಿಳಿದ ರೈತರಿಗೆ ಪ್ರಭುತ್ವ ನೀಡಿರುವ ಉದಾತ್ತ ಹಕ್ಕುಗಳ ಮಾದರಿ ಇದು. ಅಂದರೆ, ನಮ್ಮ ಆರ್ಥಿಕ ಸೂತ್ರಗಳು ಮಾನವ ಹಕ್ಕುಗಳ ಅಸ್ತಿತ್ವಕ್ಕೆ ಸಂಚು ತರುವಂತಹವು. ಇದು ಹಕ್ಕುಗಳ ವಿಸ್ತರಣೆಯ ಮಾರ್ಗವಲ್ಲ, ಹಕ್ಕುಗಳನ್ನು ನೇಣುಗಂಬಕ್ಕೇರಿಸುವ ಅಮಾನವೀಯ ಘೋರಪಥ.

೧೯೭೭ರಷ್ಟು ಹಿಂದೆ ''ಶಾಂತಿ ಸಂಸ್ಥಾಪನೆಗೆ ವಿಶ್ವ ಸಮಾವೇಶ'' ಎಂಬ ಬೃಹತ್ ಸಭೆ ಜರುಗಿತ್ತು. ಅಲ್ಲಿ ಸ್ವೀಕರಿಸಲಾದ ಒಂದು ನಿರ್ಣಯದ ಕೆಲವು ಭಾಗಗಳು ಮಾನವ ಹಕ್ಕುಗಳ ಹೋರಾಟಕ್ಕೆ ದಾರಿದೀಪವಾಗಬಹುದು: ''...... ಅನೇಕ ಸಾಮಾಜಿಕ ಸಮಸ್ಯೆಗಳು ಪರಿಹಾರವಾಗದೆ ಉಳಿದಿವೆ. ಅನೇಕ ದೇಶಗಳಲ್ಲಿ ಮಾನವ ಹಕ್ಕುಗಳನ್ನು ತುಳಿದು ಧ್ವಂಸ ಮಾಡಲಾಗುತ್ತಿದೆ. ಸಮಕಾಲೀನ ನಾಗರಿಕತೆಯು ಒಂದುಕಡೆ ಅತಿಹೆಚ್ಚಿನ ಮಟ್ಟಕ್ಕೆ ಅಭಿವೃದ್ಧಿ ಹೊಂದಿದೆ; ಅದಕ್ಕೆ ವಿರುದ್ಧ ದಿಕ್ಕಿನಲ್ಲಿ ಇನ್ನೊಂದೆಡೆ ಕೋಟಿಗಟ್ಟಲೆ ಜನ ದೈಹಿಕ ಮತ್ತು ನೈತಿಕ ನೋವುಗಳಿಗೆ ತುತ್ತಾಗಿದ್ದಾರೆ. ವಿಶ್ವದ ಅರ್ಧಭಾಗದಷ್ಟು ಜನಕ್ಕೆ ಹಸಿವು, ಅಪೌಷ್ಟಿಕತೆಗಳ ಬಾಧೆ; ಕೋಟಿಗಟ್ಟಲೆ ನಿರುದ್ಯೋಗಿಗಳು, ಅನಕ್ಷರಸ್ಥರು. .......ಪ್ರಜಾಪ್ರಭುತ್ವ ಮತ್ತು ಸ್ವಾತಂತ್ರ್ಯ ಈ ಹಿನ್ನೆಲೆಯಲ್ಲಿ ವಿಕಾಸವಾಗುವುದಿಲ್ಲ. ಅನಿವಾರ್ಯವಾಗಿ ಎಲ್ಲರಿಗೂ ದೊರಕಬೇಕಾದ ಮೂಲಭೂತ ಮಾನವ ಹಕ್ಕುಗಳಲ್ಲಿ ಉದ್ಯೋಗ, ಶಿಕ್ಷಣ, ಆರೋಗ್ಯ, ಸಾಮಾಜಿಕ ಸುಭದ್ರತೆ, ಇವು ಸೇರಿವೆ. ಜನಾಂಗ, ಭಾಷೆ, ಮತಧರ್ಮ, ಲಿಂಗ, ಸಾಮಾಜಿಕ ಅಂತಸ್ತು, ಇವುಗಳ ಆಧಾರದ ಮೇಲೆ ಜರುಗುವ ಎಲ್ಲ ವಿಧದ ತಾರತಮ್ಯಗಳೂ ಮಾನವ ಹಕ್ಕುಗಳಿಗೆ ಚ್ಯುತಿಯುಂಟುಮಾಡುತ್ತವೆ. ಆಯಾ ದೇಶಗಳ ರಾಷ್ಟ್ರೀಯ ಆರ್ಥಿಕ ನೀತಿಗಳನ್ನು ರೂಪಿಸುವಲ್ಲಿ ದುಡಿಯುವ ಜನ ಪಾಲ್ಗೊಳ್ಳಬೇಕು; ಯಾರು ಸರಕು-ಮೌಲ್ಯಗಳ ಸೃಷ್ಟಿಕರ್ತರೋ ಅವರು ಆಡಳಿತಗಾರರಾಗಬೇಕು, ಪ್ರಬಂಧಕರಾಗಬೇಕು. ಆಗ ತಾನೆ ಮಾನವ ಹಕ್ಕುಗಳು ಊರ್ಜಿತಗೊಳ್ಳಲು ಸಾಧ್ಯ.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

ಬಿಡಿ ಸಂಚಿಕೆ ರೂ. ೧೦/-
ವಾರ್ಷಿಕ ಚಂದಾ ರೂ. ೧೦೦/-
ಎರಡು ವರ್ಷಗಳಿಗೆ ರೂ.೧೮೦/-
ಮೂರು ವರ್ಷಗಳಿಗೆ ರೂ. ೨೫೦/-

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ✆ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ✆: ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ✆ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ✆ : ೪೨೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ✆ : ೨೪೩೦೨

### ಜಗನ್ನಾಥನ್



ಶ್ರೀ ಎಚ್. ಎಸ್. ದೊರೆಸ್ವಾಮಿಯವರು ಸರ್ವೋದಯ ಹೋರಾಟಗಾರ ಶ್ರೀ ಜಗನ್ನಾಥನ್ ಅವರ ಪರಿಚಯ ಮಾಡಿಕೊಟ್ಟು ಉಪಕರಿಸಿದ್ದಾರೆ. ಚೆಂಗಲ್‌ಪಟ್ಟುವಿನಲ್ಲಿ ಇದ್ದುಕೊಂಡು ಈಗಲೂ ಸತತವಾಗಿ ಜನಪರ ಹೋರಾಟಗಳಲ್ಲಿ ಭಾಗವಹಿಸುತ್ತಿರುವ ಈ ಹಿರಿಯರು ನಮಗೆ ದಾರಿದೀಪವಿದ್ದಂತೆ.

*ಹಾರೈಕ್ಕುಡಿ* *ಗೌತಮ್*

### ವಿದೇಶೀ ಪ್ರೇಮ

ನಮ್ಮ ಯುವಜನಾಂಗವೀಗ ವಿದೇಶಿ ಭ್ರಮೆಯಲ್ಲೇ ಬದುಕುತ್ತಿದೆ. ಅವರಿಗೆ ಭಾರತದೇಶದಲ್ಲಿ ವಿದ್ಯೆಗೆ ತಕ್ಕ ಕೆಲಸ ಸಿಗುವುದಿಲ್ಲ, ಎಲ್ಲದಕ್ಕೂ ಲಂಚ ಆಮಿಷವೇ ಪ್ರಧಾನ ಎಂಬ ನಿರಾಶೆಯಿಂದ ಎಷ್ಟೋ ವಿದ್ಯಾವಂತರೆಲ್ಲ ಪರದೇಶಕ್ಕೆ ಪಲಾಯನಗೈಯುತ್ತಿದ್ದಾರೆ. ಹೋದರೆ ಮತ್ತೆ ಇಲ್ಲಿಗೆ ವಾಪಾಸಾಗದವರೇ ಹೆಚ್ಚು ಮಂದಿ.

ಮೊನ್ನೆ ನಮ್ಮ ಬಂಧುಗಳ ಮಗನನ್ನು ಭೇಟಿಯಾಗಿದ್ದೆ. ಅವ ಇಲ್ಲಿಯ ಒಂದು ರೆಸಿಡೆನ್ಷಿಯಲ್ ಶಾಲೆಯಲ್ಲಿ ಎರಡನೇ ಪಿ.ಯು.ಸಿ. ವ್ಯಾಸಂಗ ಮಾಡುತ್ತಿದ್ದಾನೆ. ಹೀಗೆ ಲೋಕಾಭಿರಾಮವಾಗಿ ಮಾತಾಡುತ್ತ ಮುಂದೆ ಏನು ಓದುವುದೆಂದು ನಿಶ್ಚಯ ಮಾಡಿದೆ? ಎಂದು ಕೇಳಿದೆ.

''ಇಂಜಿನಿಯರಿಂಗ್.'' ತತ್‌ಕ್ಷಣ ಉತ್ತರಕೊಟ್ಟ.

ಅವನು ಇಲ್ಲಿ ಇಂಜಿನಿಯರಿಂಗ್ ಪದವಿ ಮುಗಿಸಿ ತರುವಾಯ ಅಮೇರಿಕಕ್ಕೆ ಹೋಗುತ್ತಾನಂತೆ. ವರ್ಷ ಅಥವಾ ಎರಡು ಮೂರು ವರ್ಷಗಳಿಗೊಮ್ಮೆ ಇಲ್ಲಿ ಬಂದು ಒಂದು ತಿಂಗಳು ಇದ್ದು ಹೋಗುವುದಕ್ಕಷ್ಟೆ ಭಾರತ ಲಾಯಕ್ಕಂತೆ ! ಈಗಾಗಲೇ ಭಾರತ ರಿಪೇರಿಯಾಗದಷ್ಟು ಕೆಟ್ಟುಹೋಗಿದೆಯಂತೆ.

ನಮ್ಮ ಸ್ನೇಹಿತರ ಮಗಳು ವೈದ್ಯೆಯಾಗಿ ಮೂರು ವರ್ಷ ಸಂದಿತು. ವಿದೇಶಕ್ಕೆ ಹಾರಲು ಅನುಮತಿ ಪತ್ರಕ್ಕಾಗಿ ಅವರು ಕಾಯುತ್ತಲೇ ಇದ್ದಾರೆ. ಪತ್ರ ಸಿಗುತ್ತಿಲ್ಲ, ಅವರು ಪ್ರಯತ್ನ ಬಿಡುತ್ತಿಲ್ಲ. ಶತಾಯಗತಾಯ ಪರದೇಶಕ್ಕೆ ಹೋಗಿಯೇ ಸಿದ್ಧ ಎಂದು ಅವರ ಕನಸು. ಹೀಗೇ ವಿದೇಶಿ ಪ್ರೇಮದ ಕನಸಿನಲ್ಲಿ ಎಷ್ಟೋ ಯುವಕ ಯುವತಿಯರು ಅಲ್ಲಿಯೂ ಸಲ್ಲ ಇಲ್ಲಿಯೂ ಸಲ್ಲ ಎಂಬಂತೆ ಇರಬಹುದು.

ಒಂದೆಡೆ ತಾಯಿನಾಡಿನ ರಕ್ಷಣೆಗಾಗಿ ಪ್ರಾಣದ ಹಂಗು ತೊರೆದು ಹೋರಾಡುವ ದೇಶಪ್ರೇಮಿಗಳು, ಇನ್ನೊಂದೆಡೆ ಅದೇ ತಾಯಿಯ ಮಕ್ಕಳೇ ತಾಯಿನಾಡನ್ನು ಒದ್ದು ಪರದೇಶಕ್ಕೆ ಧಾವಿಸುವ ವಿದೇಶೀ ಪ್ರೇಮಿಗಳು. ಯುವಜನಾಂಗ ಪರದೇಶಕ್ಕೆ ಹೋಗಲಿ, ಅಲ್ಲಿ ಉನ್ನತ ವ್ಯಾಸಂಗ ಮಾಡಿ ಇಲ್ಲಿ ಬಂದು ತಾಯಿನಾಡಿನಲ್ಲೇ ಸೇವೆ ಸಲ್ಲಿಸುವ ಛಲವಿರಲಿ.

*ಮೈಸೂರು* *ದಾಕ್ಷಿಣಮಾಲಾ*

### ಕಥೆ

ಎಂ. ಗೋಪಾಲಕೃಷ್ಣ ಅಡಿಗರವರ ''ತಿಮ್ಮನ ಗಾಡಿ'' ತಿಂಗಳ ಕಥೆ ಅಕ್ಟೋಬರ್ ಓದುಗರಿಗೆ ರಸದೌತಣವನ್ನು ಉಣಬಡಿಸಿದೆ. ಕಥೆಯು ತಾನಾಗಿಯೇ ಓದುಗನನ್ನು ತನ್ನ ಕೊನೆಯವರೆಗೂ ಎಳೆದೊಯ್ಯುವ ರೀತಿ, ಪ್ರತಿಯೊಂದು ಘಟನಾ ಸಂದರ್ಭದಲ್ಲಿಯ ನೈಜವರ್ಣನೆಯು ಕಥೆಯು ಓದುತ್ತಿದ್ದಂತೆಯೇ ಪಾತ್ರ ದೃಶ್ಯಗಳೆಲ್ಲವೂ ನಮ್ಮೆದುರಿನಲ್ಲಿಯೇ ನಟಿಸಿ ಹೋದಂತೆ ಕಂಡುಬಂದಿತು. ಇಂತಹ ಸುಂದರಮಯ ಕಥೆಯು ದುರಂತದಲ್ಲಿ ಕೊನೆಗೊಂಡಿದ್ದಕ್ಕೆ ಬೇಸರವಾಯಿತು.

*ಗುರುಮಠಕಲ್* *ಎಚ್. ಬಿ. ಸೇಡಂಕರ್*

### ಖ-ಭೌತವಿಜ್ಞಾನ ಸಂಸ್ಥೆ

ಖ-ಭೌತವಿಜ್ಞಾನ ಸಂಸ್ಥೆಯ ವಿದ್ಯಮಾನಗಳ ಬಗ್ಗೆ ಬರೆಯುವಾಗ ಅದರ ಆಡಳಿತ ಮಂಡಲಿಯ ಅಧ್ಯಕ್ಷರು ಶ್ರೀ ಅವಧಾನಿ ಎಂದು ಹೇಳಲಾಗಿದೆ. ಅದು ಶ್ರೀ ಶ್ರೀಕಂಠನ್ ಎಂದಿರಬೇಕು. ಇವರು ರಾಷ್ಟ್ರೀಯ ಉನ್ನತ ಅಧ್ಯಯನ ಸಂಸ್ಥೆ, ಬೆಂಗಳೂರು, ಇಲ್ಲಿ ಕೆಲಸ ಮಾಡುತ್ತಾರೆ. ಸಂಸ್ಥೆಯ ಶೋಚನೀಯ ಪರಿಸ್ಥಿತಿಯನ್ನು ವಸ್ತುನಿಷ್ಠವಾಗಿ ದಾಖಲಿಸಿದ್ದೀರಿ. ಇನ್ನೊಂದು ಖೇದಕರ ಘಟನೆಯನ್ನು ನಮೂದಿಸಬಹುದು; ಸಂಸ್ಥೆಯ ನಿರ್ದೇಶಕರು ಪಾನಪ್ರಿಯರು. ಸಂಸ್ಥೆಯ ಪ್ರಯೋಗಶಾಲೆಗಳ ರೆಫ್ರಿಜಿರೇಟರ್‌ಗಳು ವಿವಿಧ ಪಾನಗಳ ಶೇಖರಣೆಗೆ ಬಳಸಲಾಗಿವೆ. ಸಂಸ್ಥೆಯ ವಾಚ್‌ಮನ್ ಒಬ್ಬ ಈಚೆಗೆ ಕುಡಿದು ಬಂದಿದ್ದ. ಕೆಲಸಕ್ಕೆ ಬರುವಾಗ ಹೀಗೆ ಕುಡಿದುಬರುವುದು ಸರಿಯಲ್ಲವೆಂದು ನಿರ್ದೇಶಕರು ಆತನನ್ನು ದಂಡಿಸಿದರು. ಅದಕ್ಕೆ ಅವನ ಉತ್ತರ ಹೀಗಿತ್ತು: ನನ್ನ ಸ್ವಂತದ ದುಡ್ಡಿನಲ್ಲಿ ನಾನು ಕುಡಿಯುತ್ತೇನೆ. ನಿಮ್ಮಂತೆ ಸಂಸ್ಥೆಯ ದುಡ್ಡಿನಿಂದೇನೂ ನಾನು ಕುಡಿದಿಲ್ಲವಲ್ಲ! ಹೀಗಿದೆ ಒಂದು ಉನ್ನತ ವೈಜ್ಞಾನಿಕ ಸಂಶೋಧನಾ ಕೇಂದ್ರದ ಗತಿ.




*ಬೆಂಗಳೂರು* *ರವಿಚಂದ್ರ*

### ಕೋಲಾರದ ಚಿನ್ನದ ಗಣಿ

ದಿವಾಕರ್‌ರವರ ಕೋಲಾರದ ಚಿನ್ನದ ಗಣಿಯ ಬಗ್ಗೆ ಲೇಖನದಲ್ಲಿ ಒಂದೆರಡು ತಪ್ಪುಗಳು ನುಸುಳಿದೆಯೆಂದು ಭಾವಿಸುತ್ತೇನೆ. ಶರಾವತಿಯ ವಿದ್ಯುತ್ ಉತ್ಪಾದನಾ ಕೇಂದ್ರದಿಂದ ಮೊದಲು ನೇರವಾಗಿ ವಿದ್ಯುತ್ ಪಡೆದ ಕೇಂದ್ರವೆಂದು ಬರೆದಿದ್ದಾರೆ. ಅದು ಶಿವನಸಮುದ್ರದಿಂದ ಮಹಾತ್ಮಗಾಂಧಿ ವಿದ್ಯುದಾಗರದಿಂದ (ನೇರವಾಗಿ ವಿದ್ಯುತ್) ಪಡೆದ ನಗರವೆಂದಾಗಬೇಕಿತ್ತಲ್ಲವೇ? ಹಾಗೆಯೇ ಬೆಟ್ಟದೆತ್ತರ ಬೆಳೆದಿರುವ 'ಪೈವಾಯ್ಡ್' ಮಣ್ಣು ಗುಪ್ಪೆ ಎಂದಿದ್ದಾರೆ. ಅದು 'ಸಾಯನೈಡ್' ಗುಪ್ಪೆ ಎಂದಿರಬೇಕಿತ್ತಲ್ಲವೇ?

ಶೈಲಜಾ ಅವರ 'ಅಡಗಿಹೋದ ಸಂಗೀತಳ ಧ್ವನಿ' ಕೂಡ ಸಕಾಲಿಕವಾಗಿದೆ.

*ಮೈಸೂರು* *ಕೊ. ಸು. ನರಸಿಂಹಮೂರ್ತಿ*

ರಸ್ತೆ ಬದಿಯ ಶಿಲ್ಪಿ ಅಯ್ಯಾದೊರೆಯ ಪಾಂಡಿತ್ಯವು ನೋಡುಗನಿಗೆ ಕುತೂಹಲವನ್ನು ಉಂಟುಮಾಡುತ್ತದೆ. ಆದರೆ ಚೌಕಾಸಿಯು ಅರ್ಥವನ್ನು ಕಳೆದುಕೊಳ್ಳುತ್ತದೆ. ಶಿಲ್ಪಿಯ ಚಾತುರ್ಯಕ್ಕೆ ಸಾಟಿ ಯಾರು?

*ಬೆಂಗಳೂರು* *ಹ. ಚ. ಸತ್ಯನಾರಾಯಣ ಉರಾಳ*

ಅಕ್ಟೋಬರ್ ತಿಂಗಳಲ್ಲಿ ಪ್ರಕಟವಾದ ಡಾ|| ಎಚ್. ಎನ್. ಮಂಜುರಾಜ್ ಅವರ ''ಬಸವ ಕ್ರಾಂತಿಯ ಸೋಲು ಗೆಲವು'' ಎಂಬ ವೈಚಾರಿಕ ಲೇಖನ ಶರಣ ಚಳವಳಿಯನ್ನು ನೋಡುವ ದೃಷ್ಟಿಗೆ ಹೊಸ ಆಯಾಮ ನೀಡಿದಂತಿದೆ. ತಾಯಿಬೇರಿಗಿಳಿದು ತಳಸೋಸಿ ನಡೆದು ಬಸವಕ್ರಾಂತಿಯನ್ನು ಆಮೂಲಾಗ್ರವಾಗಿ ಮುಚ್ಚು ಮರೆಯಿಲ್ಲದೆ ಚರ್ಚಿಸಿದ್ದಾರೆ. ಬಸವಕ್ರಾಂತಿಯ ಸೋಲು ಗೆಲುವಿನ ಜತೆಗೆ ವಚನ ಸಾಹಿತ್ಯದ ಸಫಲತೆಯನ್ನು ಸಾಬೀತುಪಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ನಿಜವಾಗಿ ಅವರು ವಂದನಾರ್ಹರು.

*ವಿಜಾಪುರ* *ಕಂಟ್ಯಾಣಿ ಶರಣಪ್ಪ*

ಅಕ್ಟೋಬರ್ 'ಹೊಸತು'ವಿನಲ್ಲಿ ಪ್ರಕಟವಾದ ಡಾ|| ವಿ. ಕೆ. ತಿವಾರಿಯವರ ಲೇಖನ ''ಗ್ರಹಣ ಹಿಡಿಯುತ್ತಿರುವ ಉಚ್ಚ ಶಿಕ್ಷಣ''ವನ್ನು ಓದಿ ಬಹಳ ಸಂತೋಷವಾಯಿತು. ಅಷ್ಟೇ ಅಲ್ಲದೇ ಭಾರತದಲ್ಲಿ ಇಂತಹ ವಿಶ್ವವಿದ್ಯಾಲಯಗಳು ಇವೆ ಅಂದರೆ ಆಶ್ಚರ್ಯವಾಗುವುದಲ್ಲವೇ. ಸಂಪಾದಕೀಯ ಖಾರವಾಗಿದ್ದರೂ ಅಪೇಕ್ಷಣೀಯ ಮಟ್ಟದಲ್ಲಿತ್ತು. ಸರಕಾರ ಇತ್ತ ಗಮನಿಸಬಹುದಾದ ವಿಷಯವಾಗಿದೆ.

*ಕಿನ್ನಾಳ್* *ಉಮೇಶ ಬಸಪ್ಪ ಕಾತರಕಿ*

ಅಕ್ಟೋಬರ್, ೨೦೦೦ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ ಡಾ|| ವಿ. ಕೆ. ತಿವಾರಿ ಅವರ ಲೇಖನ ''ಗ್ರಹಣ ಹಿಡಿಯುತ್ತಿರುವ ಉಚ್ಚ ಶಿಕ್ಷಣ'' ಸಕಾಲಿಕ. ಕರ್ನಾಟಕದ ಮಟ್ಟಿಗಂತೂ ಉನ್ನತ ಶಿಕ್ಷಣ ದಿನಕಳೆದಂತೆ ಕಳೆಗುಂದುತ್ತಿದೆ. ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣದ ಪಾಡು ಒಂದಾದರೆ ಸಾಮಾನ್ಯ ಶಿಕ್ಷಣದ ತಾಪತ್ರಯಗಳೇ ಬೇರೆಯಾಗಿವೆ. ದಿನಕಳೆದಂತೆ ಉನ್ನತ ಶಿಕ್ಷಣ ಮರೀಚಿಕೆಯಾಗುತ್ತಿದೆ. 'ಮೆರಿಟ್' ವಸ್ತುವಾಗಿ ಉಳ್ಳವರಿಗೆ ಮಾತ್ರ ದಕ್ಕುತ್ತಿದೆ. ಇತ್ತೀಚಿನ ಫೀಜು ಹೆಚ್ಚಳ ಸಮಸ್ಯೆಯನ್ನು ಇನ್ನಷ್ಟು ಉಲ್ಬಣಗೊಳಿಸಿದೆ. L.P.G. ನೀತಿ ಶಿಕ್ಷಣವನ್ನು ಕೈಗೆಟುಕದಂತೆ ವ್ಯಾಪಾರವಾಗಿಸಿದೆ.

*ಸೇಡಂ* *ಅಗ್ನಾಸಾಗರ್ ಭೀಮಶಪ್ಪ*

# ನಿಪ್ಪಾಣಿ ಎಂಬ ನರಕ ಕೂಪದೊಳಗೆ

ಚಂದ್ರಕಾಂತ ಪೋಕಳೆ

ನಿಪ್ಪಾಣಿ ಪರಿಸರಕ್ಕೆ ನಾನು ಬಂದು ಮೂರು ದಶಕಗಳಾದವು. ಮಲೆನಾಡಿನ ಸಹ್ಯಾದ್ರಿಯ ಹಸಿರು ಗರ್ಭದಿಂದ ಬಂದ ನನಗೆ ಇಲ್ಲಿಯ ಬೋಳುಗುಡ್ಡ, ಉರಿ ಉರಿ ಬಿಸಿಲು, ಬೆಳವಲ ನಾಡಿನ ಬದುಕಿನ ಪರಿ ಕಂಗೆಡಿಸಿತ್ತು. ಆದರೆ ಈ ಪರಿಸರದ ಕಪ್ಪು ಎರೆ ಮಣ್ಣಿನ ನೆಲ, ನೀರಾವರಿ, ಫಲವತ್ತಾದ ಭೂಮಿ: ಕಬ್ಬು- ತಂಬಾಕಿನಂತಹ ಆರ್ಥಿಕ ಬೆಳೆ ಕಂಡು ಸಂತಸವೂ ಆಗಿತ್ತು. ಈ ಪ್ರದೇಶ ನಾಡಿನಲ್ಲೇ ಅತಿ ಹೆಚ್ಚು ತಂಬಾಕು ಬೆಳೆಯುತ್ತದೆ. ಕಬ್ಬೂ ಸಾಕಷ್ಟು ಬೆಳೆಯುವುದರಿಂದ ಹಲವು ಸಕ್ಕರೆ ಕಾರ್ಖಾನೆಗಳೂ ಇಲ್ಲಿವೆ. ಅದಕ್ಕಿಂತಲೂ ಹೆಚ್ಚು ತಂಬಾಕು ವಖಾರುಗಳಿವೆ. ಬೀಡಿ ಕಟ್ಟುವ ಅತೀ ದೊಡ್ಡ ವ್ಯವಸಾಯವೂ ಇಲ್ಲಿ ನಡೆಯುತ್ತದೆ. ಹೆಣ್ಣು ಕಾರ್ಮಿಕರ ಸಂಖ್ಯೆಯೂ ಅಪಾರ. ದಿನಕ್ಕೆ ಸಾವಿರಾರು ರೂಪಾಯಿಯ ವಹಿವಾಟೂ ಇಲ್ಲಿದೆ. ಮಂಗಳೂರು, ಗುಜರಾತಿನ ವ್ಯಾಪಾರಿ ಸಂಸ್ಥೆಗಳ ನೇರ ಸಂಬಂಧವಿದೆ.

ಈ ಪ್ರದೇಶದಲ್ಲಿ ಎರಡು ವರ್ಗಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ಒಂದು ಶ್ರೀಮಂತ, ಇನ್ನೊಂದು ಬಡವರ್ಗ. ಇಲ್ಲಿಯ ಜನರ ಸಂಸ್ಕೃತಿ, ಆಚಾರ-ವಿಚಾರ, ನಡಾವಳಿ, ಉಡುಗೆ-ತೊಡುಗೆ ಎಲ್ಲವೂ ಮಹಾರಾಷ್ಟ್ರವನ್ನು ಹೋಲುವಂತಿದೆ. ಕರ್ನಾಟಕದ ಸಂಸ್ಕೃತಿಯ ತುದ್ವಿರುದ್ಧ ಸಂಸ್ಕೃತಿಯನ್ನು ಈ ನಿಪ್ಪಾಣಿಯಲ್ಲಿ ಕಾಣಬಹುದು. ಶ್ರೀಮಂತರ ಆಲಿಶಾನ ಬಂಗಲೆಗಳನ್ನೂ, ಕಾರುಗಳನ್ನೂ ; ಇನ್ನೊಂದೆಡೆ ಕಡು ಬಡುವರ ಜೋಪಡಿಗಳನ್ನೂ ಕಾಣಬಹುದು. ಇಲ್ಲಿ ಕಾರ್ಮಿಕರ ಸಂಖ್ಯೆ ಅಪಾರ. ನಾನು ನನ್ನ ಮರಾಠಿ ಲೇಖಕರೊಂದಿಗೆ ಈ ಪ್ರದೇಶದಲ್ಲಿ ಹಲವು ಸಲ ಓಡಾಡಿದ್ದೇನೆ. ಇಲ್ಲಿಯ ನರಕಸದೃಶ ಬದುಕು ಕಂಡು ಬೆಚ್ಚಿದ್ದೇನೆ. ಇಲ್ಲಿಯ ದುಬಾರಿ ಬೆಲೆಯ ಬದುಕಿನಲ್ಲಿ ಸಿಲುಕಿ ನಲುಗಿದ್ದೇನೆ.

ನಿಪ್ಪಾಣಿ ಅಥವಾ ಅದರ ಸುತ್ತಲಿನ ಯಾವ ಪ್ರದೇಶವನ್ನು ಪ್ರವೇಶಿಸಿದರೂ ತಂಬಾಕಿನ ದಟ್ಟ ಘಾಟು ನಿಮ್ಮನ್ನು ಕಂಗೆಡಿಸುತ್ತದೆ. ತಂಬಾಕು ಹಾಗೂ ಬೀಡಿಯ ಅತೀ ದೊಡ್ಡ ಉದ್ಯಮದ ಕೇಂದ್ರವಾದ ನಿಪ್ಪಾಣಿಯಲ್ಲಂತೂ ಹೊಸಬರು ಪ್ರವೇಶಿಸುವುದೇ ಕಠಿಣ. ಕಾರ್ಖಾನೆಗಳ ಹೊಗೆ, ತಂಬಾಕಿನ ದಟ್ಟ ಧೂಳಿಕಣ, ವಾಹನಗಳ ಕಾರ್ಬನ್ನು - ಪ್ರಾಯಶಃ ನಿಪ್ಪಾಣಿ ವಾಯುಮಾಲಿನ್ಯಕ್ಕೆ ಅಪಾರ ಕೊಡುಗೆಯನ್ನು ನೀಡುತ್ತಿರುವುದು ಪರಿಸರವಾದಿಗಳ ಗಮನಕ್ಕೆ ಬಂದಂತಿಲ್ಲ! ನಿಪ್ಪಾಣಿ ನಗರ ಪ್ರವೇಶಿಸಿದರೆ ಒಂದು ಕ್ಷಣ ಉಸಿರುಗಟ್ಟಿದಂತಾಗುತ್ತದೆ. ದಟ್ಟವಾದ ಧೂಳಿಕಣದಿಂದಾಗಿ ಇಲ್ಲಿ ಕ್ಷಯರೋಗಿಗಳ ಸಂಖ್ಯೆಯೂ ಸಾಕಷ್ಟಿದೆ. ಜತೆಗೆ ರೋಗಿಗಳ, ಆಸ್ಪತ್ರೆಯ ಸಂಖ್ಯೆಯೂ ಗಣನೀಯವಾಗಿ ಹೆಚ್ಚಿದೆ.

ತಂಬಾಕಿನ ಧೂಳಿಕಣ ರಸ್ತೆ, ಮನೆ, ಛಾವಣಿ, ಗೋಡೆಗಳ ಮೇಲೆಲ್ಲ ಕಾರ್ಪೆಟ್ಟಿನಂತೆ ಹಾಸಿಕೊಂಡಿದೆ. ನೀವು ನಗರ ಸುತ್ತಾಡಿ ಬಂದರೆ ವಾಡೇಯಂತಹ, ಕೋಟೆಯಂತಹ ಹಲವು ಗುದಾಮುಗಳು ಗೋಚರಿಸುತ್ತವೆ. ಅದಕ್ಕೆ ಜೇಲಿನಂತಹ ಪುಟ್ಟ ದ್ವಾರ. ಒಮ್ಮೆ ಕಾರ್ಮಿಕರು ಒಳ ಹೊಕ್ಕರೆ ಏಳೆಂಟು ಗಂಟೆಗಳ ಕಾಲ ಬಾಗಿಲನ್ನು ಮುಚ್ಚಲಾಗುತ್ತದೆ. ಒಳಗೆ ತಂಬಾಕಿನ ವಿಂಗಡಣೆಯ ಕೆಲಸ ನಡೆಯುತ್ತದೆ. ಇದಕ್ಕೆ ಸ್ಥಳೀಯ ಭಾಷೆಯಲ್ಲಿ 'ಚಾಕಿ' ಎನ್ನುತ್ತಾರೆ. ತಂಬಾಕಿನ ಕಾರ್ಯ ನಡೆದಾಗ ಮನುಷ್ಯರೂ ಕಾಣಿಸದಷ್ಟು ದಟ್ಟ ಧೂಳು. ನೂರು ಕ್ಯಾಂಡಲ್ಲಿನ ಬಲ್ಬೂ ಸಹ ಮಿಣಿ ಮಿಣಿ ಉರಿಯುತ್ತಿರುತ್ತದೆ. ಕಾರ್ಮಿಕರು ಕಣ್ಣೊಂದನ್ನು ಬಿಟ್ಟು ಇಡೀ ಮುಖವನ್ನು ಬಟ್ಟೆಯಿಂದ ಮುಚ್ಚಿಕೊಳ್ಳುತ್ತಾರೆ, ಉಗ್ರವಾದಿಗಳಂತೆ ! ಇವರನ್ನು ಎಲ್ಲ ರೀತಿಯಿಂದ ಶೋಷಿಸುವ ಮಾಲಿಕರೇ ನಿಜವಾದ ಉಗ್ರವಾದಿಗಳಾಗಿದ್ದಾರೆ ಎನ್ನುವುದು ಬಾಹ್ಯ ನೋಟಕ್ಕೆ ಗೋಚರಿಸದ ಕಟು ಸತ್ಯ.

ಬೀಡಿ ಕಾರ್ಖಾನೆಗಳ ಎದುರು ತಗಡಿನ ಡಬ್ಬಿಗಳನ್ನು ಹಿಡಿದು ಬೀಡಿ ಎಲೆ ಹಾಗೂ ತಂಬಾಕುಗಳನ್ನು ಒಯ್ದು ಬೀಡಿ ಕಟ್ಟುವ ಹೆಣ್ಣು ಕೂಲಿಕಾರರ ಅತೀ ದೊಡ್ಡ ಸಾಲು ಪ್ರತಿದಿನ ಬೆಳಿಗ್ಗೆ ಇಲ್ಲಿ ಕಾಣಸಿಗುತ್ತಾರೆ.

ನಿಪ್ಪಾಣಿ ಹೈವೇ ದಾಟಿ ಪೂರ್ವ ಭಾಗಕ್ಕೆ ಬಂದರೆ, ದಟ್ಟಣೆಯಿಂದ ಕೂಡಿದ ಮನೆಗಳು, ಜೋಪಡಿಗಳು ಕಾಣಬಹುದು. ಇಲ್ಲಿಯ ಬೀದಿಗಳೆಲ್ಲ ತೀರಾ ಇಕ್ಕಟ್ಟಾಗಿವೆ. ಬೀದಿಯ ಇಕ್ಕೆಲಗಳಲ್ಲಿ ಸಂಡಾಸುಗಳ ಸಾಲು. ಅಲ್ಲಿಂದ ಹೊರಬೀಳುವ ನೀರು ಸಾಕಷ್ಟು ದುರ್ವಾಸನೆಯಿಂದ ಕೂಡಿದ್ದು ಆ ಕೊಳಕು ವಾಕರಿಕೆ ಬರಿಸುವಷ್ಟು ಉಗ್ರವಾಗಿರುತ್ತದೆ. ನಗರದ ನಡುವೆ ಉದ್ದಕ್ಕೆ ಚಾಚಿಕೊಂಡ ಅಂಗಡಿ, ಮುಂಗಟ್ಟುಗಳು. ಇತ್ತೀಚೆಗೆ ಅತ್ಯಾಧುನಿಕ ಬಟ್ಟೆಯ ಅಂಗಡಿಗಳೂ ತೆರೆಯಲಾಗಿದೆ. ಬೆಳಗಾವಿ, ಕೊಲ್ಲಾಪುರ, ಸಾಂಗಲಿಯ ಜನ ಇಲ್ಲೇ ಬಟ್ಟೆಯನ್ನು ಖರೀದಿ ಮಾಡುವಷ್ಟು ಭರ್ಜರಿಯಾಗಿವೆ. ಇದರ ಜೊತೆಗೆ ರಾತ್ರಿಯಾಗುತ್ತಲೇ ದೇಶಿ-ವಿದೇಶಿ ಮದ್ಯಗಳ ಮಾರಾಟ ಯಥೇಚ್ಛವಾಗಿ ನಡೆಯುತ್ತದೆ. ವೇಶ್ಯಾವೃತ್ತಿಯಂತೂ ಸರ್ವೇಸಾಮಾನ್ಯ ದೃಶ್ಯ.

ನಗರದ ದಕ್ಷಿಣ ಭಾಗ ಬೀಡಿ ಕಾರ್ಮಿಕರದ್ದೇ ಸಾಮ್ರಾಜ್ಯ! ತಗಡು, ಹಲಗೆ, ಗೋಣಿ ಚೀಲ, ಹಾಗೂ ಮಣ್ಣಿನಿಂದ ನಿರ್ಮಿಸಿದ ಗೂಡಿನಂತಹ ಪುಟ್ಟಪುಟ್ಟ ಮನೆಗಳು. ಬರಿ ಕತ್ತಲೆಯಿಂದಲೇ ಕೂಡಿದ ಗುಹೆಗಳು. ಇಲ್ಲಿಯ ಗಲ್ಲಿಗಳನ್ನು ಪ್ರವೇಶಿಸಿದರೆ ಬೀಡಿಯ ತುಣುಕು ಎಲೆಗಳು, ಬೀಡಿಯ ತುಣುಕುಗಳು, ಕೊಳೆತು ನಾರುವ ಬಚ್ಚಲು, ಗಟಾರಿನ ನೀರು ಗಮ್ಮೆಂದು ಮುಖಕ್ಕೆ ರಾಚುತ್ತದೆ. 10 x10 ಜೋಪಡಿಗಳಲ್ಲಿ ಏಳೆಂಟು ಜನರ ವಾಸ. ಹಗಲು-ರಾತ್ರಿ ಬೀಡಿ ಕಟ್ಟುವ ಉದ್ಯೋಗದಲ್ಲಿ ತೊಡಗಿದ ಗಂಡು-ಹೆಣ್ಣು ಕಾರ್ಮಿಕರು. ಪಕ್ಕದಲ್ಲೇ ಅಡುಗೆ ಒಲೆ, ತೂಗು ಹಲಗೆ ಮೇಲೆ ಬೋರಲು ಹಾಕಿದ ಅಲ್ಯುಮಿನಿಯಂ ಪಾತ್ರೆ-ಪರಡಿಗಳು. ಗಾಳಿಯೇ ಆಡದ ಮಬ್ಬು ಬೆಳಕು. ತಲೆ ಮೇಲೆ ಜೋಳಿಗೆಯಲ್ಲಿ ಕಿರಿಕಿರಿ ಮಾಡುತ್ತ ಮಲಗುವ ಕೂಸುಗಳು. ಉರಿಯುವ ಚಿಮಣಿ ಎದುರು ಭೂತಗಳಂತೆ ಕೂತು ಕೆಲಸ ಮಾಡುವ ಹೆಂಗಸರು. ಇಷ್ಟೆಲ್ಲ ಅನಾನುಕೂಲತೆಯಿದ್ದೂ ಈ ಗೂಡುಗಳ ಬಾಡಿಗೆ ಮಾತ್ರ ೫೦-೬೦ ರೂಪಾಯಿಗಳು. ಹೊಟ್ಟೆಪಾಡಿಗೂ ಗತಿಯಿಲ್ಲದ, ಬರಗಾಲಕ್ಕೆ ತುತ್ತಾದ, ಪ್ರವಾಹದಲ್ಲಿ ಮನೆ ಕಳಕೊಂಡ ನಿರ್ಗತಿಕರ ಸಂಖ್ಯೆಯೇ ಇಲ್ಲಿ ಹೆಚ್ಚು. ಎಲ್ಲ ಜಾತಿ-ಜಮಾತಿಯ ಜನರೂ ಇಲ್ಲಿದ್ದಾರೆ. ಇಲ್ಲಿ ದೇವದಾಸಿಯರ ಸಂಖ್ಯೆಯೂ ಸಾಕಷ್ಟಿರುವುದರಿಂದ ಅವರೆಲ್ಲರೂ ಇಲ್ಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ದೇವದಾಸಿ ಪದ್ಧತಿ ಈಗಲೂ ಇಲ್ಲಿ ಜೀವಂತವಾಗಿದೆ. ಅವರ ಸಂಘಟನೆ, ಪುನರ್‌ವಸತಿಯ ಕಾರ್ಯವನ್ನು ಕೆಲವು ಪುರೋಗಾಮಿ ಸಂಘಟನೆಗಳು ಕೈಗೊಂಡಿವೆ. ಆದರೂ ತನ್ನ ಹಾಗೂ ತನ್ನ ಕುಟುಂಬದ ಹಸಿವಿನ ಸಮಸ್ಯೆಯನ್ನು ತಾನೇ ಬಗೆಹರಿಸಿಕೊಳ್ಳಬೇಕಲ್ಲವೇ ? ಹೀಗಾಗಿ ತಂಬಾಕು ವಖಾರಿಯಲ್ಲಿ ದುಡಿಮೆ ಅಥವಾ ಬೀಡಿ ಕಟ್ಟುವ ಕೆಲಸ ಅನಿವಾರ್ಯ.

ಇಡೀ ದಿವಸ ಕೂತರೆ ಒಂದು ಸಾವಿರ ಬೀಡಿ ಕಟ್ಟಬಹುದು. ಆದರೆ ಕೂಲಿ ಎಷ್ಟು ಗೊತ್ತೆ ? ನಾಲ್ಕೈದು ರೂಪಾಯಿ. ಅದರೊಳಗಿನ ಪೊಳ್ಳು ಬೀಡಿ ತೆಗೆದರಂತೂ ಮತ್ತೂ ಕಡಿಮೆ ಆದಾಯ. ದುಡಿಮೆ ಹತ್ತು ಹನ್ನೆರಡು ಗಂಟೆ! ಇದು ಎಂದಿಗೂ ಮುಗಿಯದ ನಿರಂತರ ದುಡಿಮೆ. ಪರಿಣಾಮ, ಶಾರೀರಿಕ ಹಾಗೂ ಮಾನಸಿಕ ಒತ್ತಡದ ಬರ್ಬರ ಬದುಕು.

ಒಂದು ಅಂದಾಜಿನ ಪ್ರಕಾರ ನಿಪ್ಪಾಣಿಯ ತಂಬಾಕು ವಖಾರಿಯಲ್ಲಿ ೨೦ ಸಾವಿರ ಹೆಂಗಸರು ದುಡಿಯುತ್ತಾರಂತೆ. ಬಹಳಷ್ಟು ಜನ ಕ್ಷಯರೋಗಕ್ಕೆ ತುತ್ತಾದವರು. ಆಸ್ಪತ್ರೆಗೆ ಹೋಗಿ ಔಷಧಿ ತೆಗೆದುಕೊಳ್ಳುವಷ್ಟು ಪುರಸೊತ್ತಿರುವುದಿಲ್ಲ. ಅವರ ವೇಷ-ಭೂಷಣ, ಆಕಾರವಂತೂ ಮತ್ತೂ ಭೀಕರ ಅಸಹ್ಯ.

ಇಷ್ಟೆಲ್ಲ ದುಡಿದರೂ ಬಹಳೆಂದರೆ ಹೊಟ್ಟೆ ತುಂಬಿಕೊಳ್ಳುವಷ್ಟು ಹಣ ಸಿಗುತ್ತದೆ. ಉಳಿದ ಹಬ್ಬ-ಹುಣ್ಣಿಮೆ, ಮದುವೆ ಮುಂತಾದ ಕಾರ್ಯಗಳಿಗೆ ಮತ್ತೆ ಪಠಾಣರಿಂದ ಸಾಲ ಪಡೆಯಲೇಬೇಕಾಗುತ್ತದೆ. ಒಮ್ಮೊಮ್ಮೆ ಸಾಲಗಾರರಿಂದ ತಪ್ಪಿಸಿಕೊಳ್ಳಲು ಮತ್ತೊಂದು ಊರಿಗೆ ಪಲಾಯನ ಮಾಡುತ್ತಾರೆ.

ಇಷ್ಟೆಲ್ಲ ಆರ್ಥಿಕ ಶೋಷಣೆ, ಶಾರೀರಿಕ ವ್ಯಭಿಚಾರ ನಡೆದರೂ ಒಂದೂ ಸರಿಯಾದ ಕಾರ್ಮಿಕ ಸಂಘಟನೆ ಇಲ್ಲ, ಯೂನಿಯನ್ ಬೆಂಬಲವೂ ಸರಿಯಾಗಿ ಸಿಗುತ್ತಿಲ್ಲ. ಹೀಗಾಗಿ ಕೆಲಸದ ಅವಧಿ, ರಜೆ, ಮಜೂರಿ ಬಗ್ಗೆ ಯಾವುದೂ ನಿಶ್ಚಿತತೆಯಿಲ್ಲ.

ಜರ್ದಾ ಕಾರ್ಮಿಕರ ಸ್ಥಿತಿ ಇದಕ್ಕಿಂತಲೂ ಶೋಚನೀಯ. ಹಗಲು-ರಾತ್ರಿ ಪಾಳಿ

*(೨೨ನೇ ಪುಟದಲ್ಲಿ ಮುಂದುವರೆದಿದೆ)*

# ಸಂಘ ಪರಿವಾರದ ವಿಜಯದಶಮಿ ಸಂದೇಶ

ಆರ್. ಎಸ್. ಎಸ್. (ರಾಷ್ಟ್ರೀಯ ಸ್ವಯಂಸೇವಕ ಸಂಘ)ನ ಮುಖ್ಯಸ್ಥ ಶ್ರೀ ಕೆ. ಎಸ್. ಸುದರ್ಶನ್ ತಮಗಿಂತ ಹಿಂದೆ ಸಂಘದ ಮುಖ್ಯಸ್ಥರಾಗಿದ್ದ ಸ್ವಯಂಸೇವಕರಿಗಿಂತ ಹೆಚ್ಚು ಉಗ್ರವಾಗಿ ಮತ್ತು ಆಕ್ರಮಣಕಾರಿಯಾಗಿ ಪರಿವಾರದ ವಿಚಾರ ಪ್ರಣಾಳಿಕೆಯನ್ನು ಮಂಡಿಸುತ್ತಿದ್ದಾರೆ. ಇತ್ತೀಚಿನ ವಿಜಯದಶಮಿ ಉತ್ಸವದಲ್ಲಿ ಅವರು ಪ್ರತಿಪಾದಿಸಿರುವ ವಿಚಾರಗಳು ಇದಕ್ಕೆ ನಿದರ್ಶನ. ಇಂದಿನ ಬದಲಾದ ರಾಜಕೀಯ ಸನ್ನಿವೇಶವು ಇದಕ್ಕೆ ಕಾರಣವಾಗಿರಬಹುದು. ಹಿಂದುಗಳನ್ನು ಅಹಿಂದು ಶಕ್ತಿಗಳ ಆಕ್ರಮಣದಿಂದ ರಕ್ಷಿಸುವ ಮಹಾಸಂಗ್ರಾಮದ ಬಗ್ಗೆ ಅವರು ಮಾತನಾಡಿದ್ದಾರೆ. ಭಾರತೀಯ ಕ್ರೈಸ್ತರ ಮೇಲೆ ಅವರು ಕೆಂಡಕಾರಿದ್ದಾರೆ. ವಿದೇಶಿ ಮೂಲಗಳಿಂದ ಚರ್ಚುಗಳು ಹಣಕಾಸು ನೆರವನ್ನು ಪಡೆಯುವುದನ್ನು ನಿಲ್ಲಿಸಬೇಕೆಂದು ಕರೆ ನೀಡಿದ್ದಾರೆ. ಮತಾಂತರದ ಬಗ್ಗೆ ಅವರು ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ.

ನಮ್ಮ ಸಮಾಜದ ಬಡವರ, ಶೂದ್ರರ, ಪಂಚಮರ, ಮಹಿಳೆಯರ ಹಾಗೂ ಅಂಚಿನಲ್ಲಿ ಬದುಕು ದೂಡುತ್ತಿರುವ ಜನರ ಸಮಸ್ಯೆಗಳಿಗೆ ಸಂಘ ಪರಿವಾರವು ಎತ್ತುವ ಪ್ರಶ್ನೆಗಳು ಸಂಬಂಧಿಸಿರುವುದಿಲ್ಲ ಎಂಬುದು ಕುತೂಹಲದ ಸಂಗತಿಯಾಗಿದೆ.

**ವಿಜಯದಶಮಿ ಉತ್ಸವ**

ವಿಜಯದಶಮಿ ಉತ್ಸವದ ಮೂಲದಲ್ಲಿರುವ ಆಶಯವು ಸಮರೋತ್ಸಾಹವಾಗಿದೆ. ಅದೊಂದು ಆಕ್ರಮಣಕಾರಿ ಆಚರಣೆ. ಈ ಉತ್ಸವದಲ್ಲಿ ಆಕ್ರಮಣವಾದಿತ್ವವು ಅಂತರ್ಗತಗೊಂಡಿರುವುದು 'ವಿಜಯ' ಶಬ್ದದಲ್ಲಿ ಕಂಡುಬರುತ್ತದೆ. ಯುದ್ಧದ ಹೇಷಾರವ ಹಾಗೂ ಸಮರೋತ್ಸಾಹಗಳನ್ನು ತನ್ನ ಪ್ರಣಾಳಿಕೆಯನ್ನಾಗಿ ಮಾಡಿಕೊಂಡಿರುವ ಸಂಘ ಪರಿವಾರದ ಸಂವಿಧಾನದಲ್ಲಿ ವಿಜಯದಶಮಿ ಆಚರಣೆಯು ಮಹತ್ವದ ಸ್ಥಾನ ಪಡೆದಿದ್ದರೆ ಅದು ಆಶ್ಚರ್ಯಪಡುವ ಸಂಗತಿಯೇನಲ್ಲ. ಆಕ್ರಮಣವಾದಿ ಸಂಸ್ಕೃತಿಯನ್ನು ಜನರ ಮನಸ್ಸಿನಲ್ಲಿ ಬಿತ್ತಲು ಆಳುವ ವರ್ಗವು ರೂಪಿಸಿರುವ ಒಂದು ಆಚರಣೆ ವಿಜಯದಶಮಿ. ದುಷ್ಟರಿಗೆ ಶಿಕ್ಷೆ: ಶಿಷ್ಟರಿಗೆ ರಕ್ಷೆ, ಗಡಿ ದಾಟುವುದು, ಆಯುಧ ಪೂಜಿಸುವುದು ಮುಂತಾದವು ವಿಜಯದಶಮಿ ಆಚರಣೆಯ ಆಕ್ರಮಣವಾದಿತ್ವದ ಸೂಚಿಗಳಾಗಿದ್ದಾವೆ.

**ವೈದಿಕಶಾಹಿಗೆ ಪಶ್ಚಿಮದ ಉಪಚಾರ**

ಸಂಘ ಪರಿವಾರದ ಸೈದ್ಧಾಂತಿಕ ನೆಲೆಯು ವೈದಿಕತೆಯಲ್ಲಿ ಅಡಗಿದೆ. ಸಂಘ ಪರಿವಾರವು ೧೯೨೫ರಿಂದ ವೈದಿಕಶಾಹಿಗೆ 'ಉಗ್ರಸಂಘಟನೆ' ಹಾಗೂ 'ಆಕ್ರಮಣವಾದಿ' ಸ್ವರೂಪವನ್ನು ನೀಡುವ ಕೆಲಸವನ್ನು ಮಾಡಿಕೊಂಡು ಬಂದಿದೆ. ಅದು ಅಳವಡಿಸಿಕೊಂಡಿರುವ ಕಾರ್ಯತಂತ್ರವು ಮೂಲಭೂತವಾಗಿ ಪಶ್ಚಿಮದ್ದಾಗಿದೆ. 'ಸಂಘಟನಾ ಧರ್ಮ', 'ಉಗ್ರ ರಾಷ್ಟ್ರೀಯತೆ', 'ಏಕಾಕಾರಿ ಸಂಸ್ಕೃತಿ' ಮುಂತಾದವು ಪಶ್ಚಿಮ ಮೂಲದ ರಾಜಕೀಯ ವಿಚಾರಗಳಾಗಿವೆ. ಭಾರತೀಯ ಕ್ರೈಸ್ತರಿಗೆ ತಮ್ಮ ಚರ್ಚುಗಳನ್ನು ಸ್ವದೇಶಿಯವನ್ನಾಗಿ ಮಾಡಿಕೊಳ್ಳಲು ಉಪದೇಶ ನೀಡುವ ಕೆ. ಎಸ್. ಸುದರ್ಶನ ಅವರು ಸಂಘ ಪರಿವಾರದ ವಿಚಾರ ಪ್ರಣಾಳಿಕೆಯೇ ಪಶ್ಚಿಮದಿಂದ ಎರವಲು ತಂದದು ಎಂಬುದನ್ನು ಯಾಕೆ ಮರೆಯುತ್ತಾರೆ? ಭಾರತದಲ್ಲಿ ಧರ್ಮವು 'ಸಂಘಟಿತ' ಹಾಗೂ 'ಆಕ್ರಮಣವಾದಿ' ಸ್ವರೂಪವನ್ನು ಯಾವತ್ತೂ ಪಡೆದಿರಲಿಲ್ಲ. 'ಏಕಾಕಾರಿ ಸಂಸ್ಕೃತಿ' ಎಂಬುದನ್ನು ಭಾರತದ ಸಂದರ್ಭದಲ್ಲಿ ಊಹಿಸಿಕೊಳ್ಳುವುದು ಸಾಧ್ಯವಿಲ್ಲ. ಆದರೆ ಸಂಘ ಪರಿವಾರವು ''ಒಂದು ಧರ್ಮ-ಒಂದು ಸಂಸ್ಕೃತಿ-ಒಂದು ಪವಿತ್ರ ಗ್ರಂಥ-ಒಂದು ಮಹಾಭಾರತ-ಒಂದು ರಾಮಾಯಣ'' ಎಂಬ ವಿಚಾರಗಳನ್ನು ಉಗ್ರ ರೀತಿಯಲ್ಲಿ ಪ್ರತಿಪಾದಿಸುತ್ತಿದೆ. ಸಂಘ ಪರಿವಾರದ ವಿಚಾರ ಪ್ರಣಾಳಿಕೆ ಹಾಗೂ ಕಾರ್ಯತಂತ್ರವು ಸನಾತನ ಧರ್ಮಕ್ಕಿಂತ ಅಧಿಕವಾಗಿ ಪಶ್ಚಿಮದಿಂದ ಹೆಚ್ಚು ಪ್ರೇರಿತಗೊಂಡಿದೆ.

ಸಂಘ ಪರಿವಾರವು ಹೇಳುವ ಸ್ವದೇಶಿಯು ಗಾಂಧೀಜಿ ಹೇಳುತ್ತಿದ್ದ ಸ್ವದೇಶಿಗಿಂತ ಹಾಗೂ ಗ್ರಾಮಾಂತರ ಪ್ರದೇಶದಲ್ಲಿ ಜನರು ಬದುಕುತ್ತಿರುವ 'ಸಾವಯವ ಸ್ವದೇಶಿ' ಬದುಕಿಗಿಂತಲೂ ಗುಣದಲ್ಲಿ ಹಾಗೂ ಪರಿಣಾಮದಲ್ಲಿ ಭಿನ್ನವಾಗಿದೆ. ನಮ್ಮ ಸಮಾಜದಲ್ಲಿ ಶೂದ್ರರು, ಪಂಚಮರು, ಮತ್ತು ಅಂಚಿನಲ್ಲಿನ ವಂಚಿತರು ಇವತ್ತಿಗೂ ಬದುಕನ್ನು 'ಸ್ವದೇಶಿ ಸಾವಯವ' ನೆಲೆಯಲ್ಲಿಯೇ ನಡೆಸುತ್ತಿದ್ದಾರೆ. ಸಾವಯವ ಬದುಕು ಸ್ವದೇಶಿಗಿಂತಲೂ ಹೆಚ್ಚು ಸ್ವದೇಶೀಯವಾದುದಾಗಿದೆ. ದುಡಿದುಣ್ಣುವ ಜನರಿಗೆ ಕುಳಿತುಣ್ಣುವ ಜನರಿಂದ ಸ್ವದೇಶಿಯ ಉಪದೇಶ ಬೇಕಾಗಿಲ್ಲ. ಬೆವರು, ಕಣ್ಣೀರು ಹಾಗೂ ರಕ್ತ ಹರಿಸಿ ದುಡಿಯುವ ಜನರು ಸ್ಥಳೀಯವಲ್ಲದ್ದನ್ನು ಮುಟ್ಟಲು ಹಿಂಜರಿಯುತ್ತಾರೆ. ಅವರ ಚಾಪೆ, ಮಡಕೆ, ಪಲ್ಯ-ಸೊಪ್ಪು, ಅವರ ಹೈನು, ಹಗ್ಗ, ಉಪಕರಣಗಳು, ಅವರ ರೊಟ್ಟಿ-ಚಟ್ನಿ, ಅವರ ತಂಬಾಕು, ಅವರ ಗಿಡ ಮೂಲಿಕೆಗಳು- ಎಲ್ಲವೂ ಸ್ಥಳೀಯವೂ ಹೌದು, ಸಾವಯವವೂ ಹೌದು. ಅವರದು ಒಟ್ಟಾರೆಯಾಗಿ ಪರಿಸರ ಸಖ್ಯ ಸ್ವದೇಶಿ ಸಾವಯವ ಬದುಕು. ಸಂಪತ್ತು-ವಿದ್ಯೆ, ವಿಜ್ಞಾನ-ತಂತ್ರಜ್ಞಾನ, ಮಾಹಿತಿ-ಪ್ರಸಾರ- ಹೀಗೆ ಸಕಲ ಸೌಭಾಗ್ಯಗಳನ್ನೂ ಗುತ್ತಿಗೆ ಹಿಡಿದು ಗರ್ವದಿಂದ ಕೊಬ್ಬಿದ ಜನರು ಮಾತ್ರ 'ವಿದೇಶಿ'ಯನ್ನು ಬದುಕುತ್ತ 'ಸ್ವದೇಶಿ'ಯನ್ನು ಉಪದೇಶಿಸಬಲ್ಲವರಾಗಿದ್ದಾರೆ.

ಲಿಂಗ ಸಂಬಂಧಗಳನ್ನು ಕುರಿತಂತೆ ಸಂಘ ಪರಿವಾರದ ದೃಷ್ಟಿಕೋನವು ಪುರುಷಶಾಹಿಗಿಂತಲೂ ತೀವ್ರ ತಾರತಮ್ಯವಾದಿ ಹಾಗೂ ಆಕ್ರಮಣಕಾರಿಯಾದುದಾಗಿದೆ. ಮಹಿಳೆಯನ್ನು ಅದು 'ತಾಯಿ' ಯೆಂದು ಮಾತ್ರವೇ ಪರಿಗಣಿಸುತ್ತದೆ. ಆಕೆಯನ್ನು ಮನುಷ್ಯಜೀವಿಯೆಂದು ಪರಿಗಣಿಸಲು ಅದು ಸಿದ್ಧವಿಲ್ಲ. ನಮ್ಮ ಸಮಾಜದಲ್ಲಿ ಮಹಿಳೆಯರು ಸಂಗೋಪನೆ ಸಂಪಾದನೆ ಹಾಗೂ ಸಂತಾನೋತ್ಪತ್ತಿ - ಆರ್ಥಿಕೋತ್ಪಾದನೆ - ಹೀಗೆ ಎರಡನ್ನೂ ಸಂಭಾಳಿಸಿಕೊಂಡು ಬದುಕುತ್ತಿರುವುದನ್ನು ಗುರುತಿಸುವ ಸೌಜನ್ಯ ಸಂಘ ಪರಿವಾರಕ್ಕಿಲ್ಲ. ದೇಶದ ಕೃಷಿಕ್ಷೇತ್ರದಲ್ಲಿನ ಕೂಲಿಕಾರರಲ್ಲಿ ಅರ್ಧಕ್ಕಿಂತ ಅಧಿಕ ಮಹಿಳಾ ಕೂಲಿಕಾರರಿದ್ದಾರೆ. 'ಬೆವರು - ಕಣ್ಣೀರು- ರಕ್ತ' ಹರಿಸಿ ದುಡಿಮೆ ನಡೆಸಿರುವ ಹೆಣ್ಣಿನ ಬಗ್ಗೆ ಕೆ. ಎಸ್. ಸುದರ್ಶನ ಅವರು ಮಾತನಾಡುವುದಿಲ್ಲ. ಸಂಘ ಪರಿವಾರಕ್ಕೆ 'ಸರ್ವಮಂಗಳೆ', 'ಗಾಯತ್ರಿ', 'ಸರಸ್ವತಿ' ಮುಂತಾದವರು ಮಾತ್ರ ಗೊತ್ತು. ನಮ್ಮ ಸಮಾಜದ ದುಡಿಮೆಯ ಬೆನ್ನೆಲುಬಾಗಿರುವ ಹುಲಿಗೆಮ್ಮ, ಸಂಕವ್ವ, ಕಾಳಮ್ಮ, ಗಾಳೆಮ್ಮ, ಸುಂಕಿ ಮಾರಮ್ಮ ಮುಂತಾದವರು ಸಂಘ ಪರಿವಾರಕ್ಕೆ ಗೊತ್ತಿಲ್ಲ. ಪುರುಷಶಾಹಿ, ಲಿಂಗತಾರತಮ್ಯ, ಲೈಂಗಿಕ ಹಿಂಸೆ ಮುಂತಾದ ಲಿಂಗ ಸಂಬಂಧಿ ಸಮಸ್ಯೆಗಳನ್ನು ಎದುರಿಸಬೇಕಾದ ಅಗತ್ಯವನ್ನು ಸಂಘ ಪರಿವಾರವು ಮನಗಂಡಿಲ್ಲ.

**ಉಪವಾಸ ಮತ್ತು ಹಸಿವು**

ಉಪವಾಸ ಮತ್ತು ಹಸಿವುಗಳ ನಡುವೆ ಅಮರ್ತ್ಯ ಸೇನ್ ವ್ಯತ್ಯಾಸವನ್ನು ಗುರುತಿಸುತ್ತಾರೆ. ನಮ್ಮ ಸಮಾಜದ ಸಂದರ್ಭದಲ್ಲಿ ಉಪವಾಸವೆನ್ನುವುದು ಒಂದು ಆಯ್ಕೆ. ಅದೊಂದು ಆಚರಣೆ. ಉಪವಾಸವನ್ನು ಆಚರಿಸುವವರಿಗೆ ಅದು ಅನಿವಾರ್ಯವೇನಲ್ಲ. ಉಳ್ಳವರು ಆಚರಿಸುವ ಒಂದು ವ್ರತ ಉಪವಾಸ. ಆದರೆ ಹಸಿವು ಎನ್ನುವುದು ಬಡವರು ಅನಿವಾರ್ಯವಾಗಿ ಎದುರಿಸಬೇಕಾದ ಸಮಸ್ಯೆ. ಇಲ್ಲಿ ಆಯ್ಕೆಗೆ ಅವಕಾಶವಿಲ್ಲ. ಬಡವರಿಗೆ ಇರುವ ವಿಕಲ್ಪಗಳು ಎರಡು : ಒಂದು ದುಡಿಮೆ, ಎರಡು ಹಸಿವು. ದುಡಿಯಬೇಕು - ತಿನ್ನಬೇಕು; ದುಡಿಮೆಯಿಲ್ಲದಿದ್ದರೆ ಹಸಿವನ್ನು ಅನುಭವಿಸಬೇಕು. ಉಪವಾಸವು ಪಾಪ-ಪುಣ್ಯಗಳ ಜೊತೆ ಸಂಬಂಧವನ್ನು ಪಡೆದಿದ್ದರೆ ಹಸಿವು ಎನ್ನುವುದು ಅಳಿವು-ಉಳಿವಿನ ಜೊತೆ ಸಂಬಂಧ ಪಡೆದಿದೆ.

ಸಂಘ ಪರಿವಾರದ ವಿಚಾರ ಪ್ರಣಾಳಿಕೆಯಲ್ಲಿ ಉಪವಾಸಕ್ಕೆ ಸ್ಥಾನವಿದೆ. ಕೆ. ಎಸ್. ಸುದರ್ಶನ ಅವರಿಗೆ ಉಪವಾಸ ಗೊತ್ತಿರಲಿಕ್ಕೆ ಸಾಕು. ಉಪವಾಸವೆನ್ನುವುದು ಉಳ್ಳವರ ಒಂದು ಮಾನಸಿಕ ವ್ಯಸನ. 'ಬಡತನ - ಹಸಿವು' ಇವುಗಳಿಗೆ ಸಂಘ ಪರಿವಾರದ ಸಂವಿಧಾನದಲ್ಲಿ ಸ್ಥಾನವಿಲ್ಲ. ಅವುಗಳ ಬಗ್ಗೆ ಅದು ತಲೆ ಕೆಡಿಸಿಕೊಳ್ಳುವುದಿಲ್ಲ. ಕೆ. ಎಸ್. ಸುದರ್ಶನ ಅವರಿಗೆ ಸಮಾಜದ ಅಂಚಿನಲ್ಲಿ ಬದುಕು ದೂಡುತ್ತಿರುವ ವಂಚಿತರ ದುಃಖ-ದುಮ್ಮಾನಗಳು,

**ಟಿ. ಆರ್. ಚಂದ್ರಶೇಖರ**

*ಸಂಘ ಪರಿವಾರಕ್ಕೆ ವರದಕ್ಷಿಣೆ ಪಿಡುಗಿಗಿಂತ 'ಸತಿ' ಯಾಕೆ ಮುಖ್ಯವಾಗುತ್ತದೆ? ಬಡತನದ ನಿವಾರಣೆಗಿಂತ ದೇವಾಲಯ ಕಟ್ಟುವುದು ಯಾಕೆ ಅವರಿಗೆ ತುರ್ತಿನದಾಗುತ್ತದೆ? ಹಸಿವಿನ ಆಕ್ರಂದನಕ್ಕಿಂತ ಯುದ್ಧದ ಹೇಷಾರವ ಯಾಕೆ ಸ್ವಯಂಸೇವಕರಿಗೆ ಹೆಚ್ಚು ಇಷ್ಟವಾಗುತ್ತದೆ? ಅನಕ್ಷರತೆಯ ವಿರುದ್ಧದ ಹೋರಾಟಕ್ಕಿಂತ ಮತಾಂತರದ ವಿರುದ್ಧದ ಹಿಂಸಾಚಾರವು ಯಾಕೆ ಇಲ್ಲಿ ಮಹತ್ವದ್ದಾಗುತ್ತದೆ? ಬಡತನ ನಿವಾರಣೆ ಕುರಿತ ಅಧ್ಯಯನಗಳಿಗಿಂತ 'ಹರಪ್ಪ'ದಲ್ಲಿದ್ದವರು 'ಆರ್ಯರು' ಎಂಬ ವಿಕೃತ ಸಂಶೋಧನೆ ಯಾಕೆ ಆಪ್ಯಾಯಮಾನವಾಗುತ್ತದೆ? ವಿದೇಶಿ ಬಂಡವಾಳದ ಬಗ್ಗೆ, ಎಂಎನ್‌ಸಿಗಳ ಬಗ್ಗೆ, ಬಿಲ್ ಗೇಟ್ಸ್ ಬಗ್ಗೆ, ಡಬ್ಲ್ಯುಟಿ ಬಗ್ಗೆ, ಕುಲಾಂತರಿ ಬೀಜಗಳ ಬಗ್ಗೆ, ಅಮೆರಿಕನ್ ಎಲೆಕ್ಟ್ರಿಕಲ್ ಕಂಪನಿ ಬಗ್ಗೆ ಏನೂ ಮಾಡಲಾಗದ ಸಂಘ ಪರಿವಾರಕ್ಕೆ ಕ್ರೈಸ್ತರ ಚರ್ಚುಗಳು ಮಾತ್ರ ಸ್ವದೇಶಿಯವಾಗಬೇಕು ಎಂದು ಯಾಕೆ ಅನ್ನಿಸುತ್ತದೆ?*

ನೋವು-ಬವಣೆಗಳು ಮುಖ್ಯವಾಗುವುದಿಲ್ಲ. ಸಂಘ ಪರಿವಾರವಾಗಲಿ ಅಥವಾ ಅದರ ಮುಖ್ಯಸ್ಥರುಗಳಾಗಲಿ ಯಾರೂ ಕೂಡ ಇದುವರೆವಿಗೆ ಬಡತನ-ಹಸಿವು-ನಿರುದ್ಯೋಗ ಕುರಿತಂತೆ ಚಕಾರವೆತ್ತಿಲ್ಲ. ನಮ್ಮ ಸಮಾಜದ ಸಂದರ್ಭದಲ್ಲಿ ಬಡತನ - ಹಸಿವು - ನಿರುದ್ಯೋಗ, ಅನಾರೋಗ್ಯ, ಅನಕ್ಷರತೆ, ಲಿಂಗ ತಾರತಮ್ಯ, ಲೈಂಗಿಕ ಹಿಂಸೆ ಮುಂತಾದವುಗಳ ನಿವಾರಣೆ ತುರ್ತಾಗಿ ನಡೆಯಬೇಕಾಗಿದೆ. ಇಂತಹ ಸಂಗತಿಗಳ ವಿರುದ್ಧ ಮಹಾ ಸಂಗ್ರಾಮ ಹೂಡುವ ಬಗ್ಗೆ ಸಂಘ ಪರಿವಾರ ಯೋಚಿಸುವುದಿಲ್ಲ. ವರದಕ್ಷಿಣೆಯ ದಾವಾನಿಲದಲ್ಲಿ ಸುಟ್ಟುಹೋಗುತ್ತಿರುವ ಹೆಣ್ಣು ಮಕ್ಕಳ ರಕ್ಷಣೆ ಕೆಲಸ ಸುದರ್ಶನ ಅವರಿಗೆ ಮುಖ್ಯವಾಗುವುದಿಲ್ಲ.

**ವೈದಿಕ-ಅವೈದಿಕ ನೆಲೆಗಳು**

ವೈದಿಕಶಾಹಿಯನ್ನು ಬುನಾದಿಯನ್ನಾಗಿ ಮಾಡಿಕೊಂಡಿರುವ ಸಂಘ ಪರಿವಾರಕ್ಕೆ ಅವೈದಿಕರ-ಶೂದ್ರರ-ಪರಿಶಿಷ್ಟರ-ಮಹಿಳೆಯರ ಬದುಕು ಮುಖ್ಯವಾಗುವುದು ಸಾಧ್ಯವಿಲ್ಲ. ಬಡತನ-ಹಸಿವು- ನಿರುದ್ಯೋಗ, ಅನಕ್ಷರತೆ, ಅನಾರೋಗ್ಯ ಮುಂತಾದ ಜಡ್ಡುಗಳಿಂದ ನರಳುತ್ತಿರುವವರಲ್ಲಿ ಹೆಚ್ಚಿನವರು ಅವೈದಿಕರಾಗಿದ್ದಾರೆ. ವಿಜಯ ದಶಮಿ ಉತ್ಸವದಂದು ಕೆ. ಎಸ್. ಸುದರ್ಶನ ಅವರು ಬಡತನ-ಹಸಿವು-ನಿರುದ್ಯೋಗ-ವರದಕ್ಷಿಣೆ-ಬರ-ಎಂಎನ್‌ಸಿಗಳ ಪ್ರವೇಶ ಮುಂತಾದವುಗಳ ಬಗ್ಗೆ ಮಾತನಾಡದೆ ಅಹಿಂದು ಶಕ್ತಿಗಳ ವಿರುದ್ಧ ಹೂಡಬೇಕಾದ ಮಹಾಸಂಗ್ರಾಮದ ಬಗ್ಗೆ, ಸ್ವದೇಶಿ ಚರ್ಚುಗಳ ಬಗ್ಗೆ, ವಿದೇಶಗಳಿಂದ ಚರ್ಚುಗಳಿಗೆ ಬರುತ್ತಿರುವ ಹಣಕಾಸು ನೆರವಿನ ಬಗ್ಗೆ ಮಾತ್ರವೇ ಮಾತನಾಡಿದ್ದರೆ ಅದು ಸಂಘ ಪರಿವಾರದ ವಿಚಾರ ಪ್ರಣಾಳಿಕೆಗೆ ಅನುಗುಣವಾಗಿದೆ. ಸಂಘ ಪರಿವಾರಕ್ಕೆ ಶೂದ್ರರ-ಪಂಚಮರ ಸೇವೆ ಬೇಕು. ಅವರ ಸಹಕಾರ ಬೇಕು. ಅದಕ್ಕಾಗೆ ಬಂಗಾರು ಲಕ್ಷ್ಮಣರನ್ನು ಅದು ಆಯ್ಕೆ ಮಾಡಿಕೊಳ್ಳುತ್ತದೆ.

ನಮ್ಮ ಸಮಾಜದಲ್ಲಿ ಅವೈದಿಕರು-ಪರಿಶಿಷ್ಟರು ಎಂದೂ ಯುದ್ಧ ಪಿಪಾಸುಗಳಾಗುವುದು ಸಾಧ್ಯವಿಲ್ಲ. ಯುದ್ಧದ ಹೇಷಾರವವನ್ನು ಕೇಳಿ ಆನಂದಿಸುವುದು ವೈದಿಕಗುಣವಾಗಿದೆ. ವೈದಿಕಶಾಹಿಯು ಉತ್ಪಾದಿಸಿದ ಸಾಹಿತ್ಯವೆಲ್ಲ ಯುದ್ಧಕ್ಕೆ - ಹಿಂಸೆಗೆ ಸಂಬಂಧಿಸಿದ್ದರೆ ಅವೈದಿಕರ-ಪರಿಶಿಷ್ಟರ-ಮಹಿಳೆಯರ ಸಾಹಿತ್ಯವು ಭಕ್ತಿ ಸಂವೇದಿಯಾದುದಾಗಿದೆ ಮತ್ತು ಅಹಿಂಸಾ ಸ್ಪಂದಿಯಾದುದಾಗಿದೆ. ವೈದಿಕಶಾಹಿಗೆ ಸವಾಲು ಹಾಕುವ ಉದ್ದೇಶದಿಂದಲೇ ಅವೈದಿಕ ಭಕ್ತಿ ಪಂಥಗಳು ನಮ್ಮ ಸಮಾಜದಲ್ಲಿ ಒಡಮೂಡಿದವು. ಭಕ್ತಿ ಪಂಥದ ಮೂಲ ನೆಲೆ-ಸೆಲೆ ಅವೈದಿಕವಾದುದಾಗಿದೆ. ಧರ್ಮದ ಸಂಘಟಿತ ಸ್ವರೂಪವನ್ನು ಧಿಕ್ಕರಿಸುವ ಸಲುವಾಗಿಯೇ ಭಕ್ತಿ ಪಂಥಗಳು ತಲೆ ಎತ್ತಿದವು ಎಂಬುದನ್ನು ನಾವು ಮರೆಯಬಾರದು. ವೈದಿಕಶಾಹಿಗೆ ಉಪವಾಸ ಮಾತ್ರ ಅರ್ಥವಾಗಬಲ್ಲದೆ ವಿನಾ ಹಸಿವು ಅರ್ಥವಾಗುವುದಿಲ್ಲ. ಬರಗಾಲ ಉಂಟಾದಾಗಲೆಲ್ಲ ಗಂಜಿ ಕೇಂದ್ರಗಳನ್ನು ತೆರೆಯುವುದು ಕೆ. ಎಸ್. ಸುದರ್ಶನ ಅವರಿಗೆ ತಿಳಿದಿದೆಯೇ ವಿನಾ ಬರಗಾಲವನ್ನು ನಿರ್ಮೂಲನ ಮಾಡುವ ಅರಿವು ಅವರಿಗಿಲ್ಲ. ಬರಗಾಲದಲ್ಲಿ ಗಂಜಿ ಕೇಂದ್ರಗಳನ್ನು ತೆರೆದು ಪುಣ್ಯ ಸಂಪಾದಿಸಿಕೊಳ್ಳುವ ವ್ಯವಹಾರ ಸಂಘ ಪರಿವಾರಕ್ಕೆ ಗೊತ್ತು. ಪುಣ್ಯ ಸಂಪಾದಿಸಿಕೊಳ್ಳಲು ಹಾಗೂ ಪಾಪ ಪರಿಹರಿಸಿಕೊಳ್ಳಲು ವೈದಿಕಶಾಹಿಗೆ ಬರಗಾಲಗಳು ಬೇಕು. ಅಲ್ಲದಿದ್ದರೆ ಅವರು ಗಂಜಿ ಕೇಂದ್ರಗಳನ್ನು ತೆರೆಯುವುದಾದರೂ ಹೇಗೆ? ವೈದಿಕಶಾಹಿಯ ಪ್ರಕಾರ ಬರಗಾಲ ಎನ್ನುವುದು ಅವೈದಿಕರಿಗೆ ಬಡಿದ ದೇವರ ಶಾಪವಾಗಿದೆ. ಬರಗಾಲದಲ್ಲಿ ನೋವು-ಹಸಿವಿಗೆ ತುತ್ತಾದ ಜನರಿಗೆ ಪರಿಹಾರ ಒದಗಿಸುವ ಪುಣ್ಯಕಾರ್ಯ ವೈದಿಕಶಾಹಿಯ ಪಾಲಿನದಾಗಿದೆ. ಬಡತನ, ಹಸಿವು, ನಿರುದ್ಯೋಗ ಮುಂತಾದ ಸಮಸ್ಯೆಗಳನ್ನು ಎದುರಿಸಬೇಕಾದುದು ಅವೈದಿಕರ ಕರ್ಮ ಎನ್ನುವುದು ವೈದಿಕ ಶಾಹಿಯ ವಿಚಾರವಾಗಿದೆ. ಅವುಗಳನ್ನು ಅನುಭವಿಸುವುದರ ಮೂಲಕವೇ ಅವರು ಮೋಕ್ಷವನ್ನು ಪಡೆಯಬೇಕಾಗಿದೆ!

**ಧರ್ಮ – ದೇಶಭಕ್ತಿ**

ಕೆ. ಎಸ್. ಸುದರ್ಶನ ಅವರು ವಿಜಯದಶಮಿ ಸಮಾವೇಶದಲ್ಲಿ ನೀಡಿರುವ ಸಂದೇಶವು ಭಾರತದ ಸಂವಿಧಾನವು ಪೋಷಿಸುತ್ತಿರುವ ಮೌಲ್ಯಗಳನ್ನು ಧಿಕ್ಕರಿಸುವಂತಿದೆ. ಭಾರತದ ಸಂವಿಧಾನದ ಬಗ್ಗೆ ತಮಗೆ ಹೆಚ್ಚಿನ ಗೌರವವೇನೂ ಇಲ್ಲ ಎಂಬುದನ್ನು ಅವರು ಸಾರ್ವಜನಿಕವಾಗಿ ಹೇಳಿಕೊಂಡಿದ್ದಾರೆ. ರಾಷ್ಟ್ರೀಯ ಪ್ರಧಾನಧಾರೆಯಲ್ಲಿ ಸೇರಿಕೊಳ್ಳುವಂತೆ ಅವರು ಭಾರತೀಯ ಕ್ರೈಸ್ತರಿಗೆ ಕರೆ ನೀಡಿದ್ದಾರೆ. ರಾಷ್ಟ್ರೀಯ ಪ್ರಧಾನಧಾರೆಯಲ್ಲಿ ಭಾರತೀಯ ಕ್ರೈಸ್ತರು ಇನ್ನೂ ಸೇರಿಲ್ಲ ಎಂಬುದು ಸುದರ್ಶನ ಅವರ ಅಭಿಮತವಿದ್ದಂತೆ ಕಾಣುತ್ತದೆ. 'ದಿ ಹಿಂದೂ' ಪತ್ರಿಕೆಯು 'ಅಪಾಯಕಾರಿ ಅಜೆಂಡ' ಎಂಬ ತನ್ನ ಸಂಪಾದಕೀಯದಲ್ಲಿ (೧೦-೧೦-೨೦೦೦) ಸುದರ್ಶನ ಅವರ ಕೆಲವು ವಿಚಾರಗಳನ್ನು 'ಬೇಜವಾಬ್ದಾರಿ' ಮಾತುಗಳು ಎಂದು ಕಟುವಾಗಿ ಟೀಕಿಸಿದೆ. 'ದಿ ನ್ಯೂ ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆಯು ತನ್ನ ಸಂಪಾದಕೀಯದಲ್ಲಿ (೧೧-೧೦-೨೦೦೦) ಸುದರ್ಶನ ಅವರ ವಿಜಯದಶಮಿ ಸಂದೇಶದ ಕೆಲವು ಸಂಗತಿಗಳು ಮೂರ್ಖತನದ ಗಡಿಯಲ್ಲಿ ನೆಲೆಸಿವೆ ಎಂದು ಟೀಕಿಸಿದೆ.

ಭಾರತೀಯ ಕ್ರೈಸ್ತರ ದೇಶಭಕ್ತಿಯನ್ನು ಸುದರ್ಶನ ಅವರು ಅನುಮಾನದಿಂದ ಕಂಡಿದ್ದಾರೆ. ದೇಶಭಕ್ತಿ ಹಾಗೂ ಧರ್ಮಗಳ ನಡುವೆ ಸಂಬಂಧ ಕಲ್ಪಿಸುವ ಸುದರ್ಶನರ ವಾದವು ಸಂಕುಚಿತವೂ ಮಂಡೂಕವಾದಿಯೂ ಆಗಿದೆ. ದೇಶಭಕ್ತಿ ಎಂಬುದು ಯಾವುದೇ ಧರ್ಮದ ಗುತ್ತಿಗೆಯೇನಲ್ಲ. ಕ್ರೈಸ್ತ ಧರ್ಮವು ನಮ್ಮ ದೇಶದಲ್ಲಿ ಕ್ರಿ.ಶ. ೫೦ ರಿಂದಲೂ ಆಚರಣೆಯಲ್ಲಿದೆ. ಅಂದರೆ ಸುಮಾರು ೧೯೫೦ ವರ್ಷಗಳಿಂದ ಅದು ನಮ್ಮ ಭೂಮಿಯಲ್ಲಿ ಪ್ರಸಾರದಲ್ಲಿದೆ. ಸುಮಾರು ೨೦೦ ವರ್ಷಗಳ ವಸಾಹತುಶಾಹಿ ಬ್ರಿಟಿಷ್ ಸಾಮ್ರಾಜ್ಯದ ಕೃಪಾಶೀರ್ವಾದವೂ ಅದಕ್ಕೆ ದೊರೆತಿತ್ತು. ಇಷ್ಟಾದರೂ ಇಂದಿಗೂ (೧೯೯೧ರ ಜನಗಣತಿ) ಕ್ರೈಸ್ತರ ಪ್ರಮಾಣವು ದೇಶದ ಜನಸಂಖ್ಯೆಯ ಶೇ. ೨.೩೨ ಮೀರಿಲ್ಲ.

ಇಂದು ದೇಶದಲ್ಲಿ ೪೫ ದಶಲಕ್ಷ ಟನ್‌ಗಳಷ್ಟು ಆಹಾರ ಪದಾರ್ಥದ ಕಾಪು ದಾಸ್ತಾನು ಇದೆ. ಹುಳು ಹುಪ್ಪಟೆಗಳಿಗೆ ಅದು ಆಹುತಿಯಾಗುತ್ತಿದೆ. ಗೋದಾಮುಗಳಲ್ಲಿ ಕೊಳೆತು ಹೋಗುತ್ತಿದೆ. ಇನ್ನೊಂದು ಕಡೆ ಕೋಟಿಗಟ್ಟಲೆ ಜನರು ಅರೆಹೊಟ್ಟೆ-ಬರಿಹೊಟ್ಟೆಯಿಂದ ನರಳುತ್ತಿದ್ದಾರೆ. ಹಸಿದವರಿಗೆ, ಬಡವರಿಗೆ, ವಂಚಿತರಿಗೆ ಉದ್ಯೋಗವನ್ನು ಒದಗಿಸುವುದಕ್ಕೆ ಆಹಾರದ ಕಾಪು ದಾಸ್ತಾನನ್ನು ಹೇಗೆ ಬಳಸಿಕೊಳ್ಳಬೇಕು ಎಂಬುದರ ಬಗ್ಗೆ ಸಂಘ ಪರಿವಾರ ಚಿಂತಿಸುವುದು ಲೇಸು. ಜನರ ಬದುಕು ಸಮೃದ್ಧವಾಗಬೇಕು, ಸಹನೀಯವಾಗಬೇಕು. ಅಲ್ಲಿ ಸಮರಸ - ಸಮಾನತೆ - ಸೌಹಾರ್ದತೆ ಇರಬೇಕು. ಇದನ್ನು ಹೇಗೆ ಸಾಧಿಸಬೇಕು ಎಂಬುದು ಇಂದು ನಮ್ಮ ಮುಂದಿರುವ ಸವಾಲು.

ಬಂಗಾರು ಲಕ್ಷ್ಮಣರನ್ನು ಪಕ್ಷದ ಅಧ್ಯಕ್ಷರನ್ನಾಗಿ ಮಾಡಿಬಿಟ್ಟರೆ ಪರಿಶಿಷ್ಟರ ಸಮಸ್ಯೆಗಳೆಲ್ಲ ಪರಿಹಾರವಾಗುವುದಿಲ್ಲ. ಪರಿಶಿಷ್ಟರು ಮತ್ತು ಶೂದ್ರರ ಬಗ್ಗೆ ಸಂಘ ಪರಿವಾರದ ದೃಷ್ಟಿಕೋನ ಆರೋಗ್ಯಕಾರಿಯಾಗಿದ್ದಂತೆ ತೋರುವುದಿಲ್ಲ. ಮೀಸಲಾತಿಯ ಬಗ್ಗೆ ಸಂಘ ಪರಿವಾರಕ್ಕೆ ಅಸೂಯೆಯಿದೆ, ಮತ್ಸರವಿದೆ. ದೇಶದ ಜನಸಂಖ್ಯೆಯಲ್ಲಿ ದ್ವಿಜರ ಸಂಖ್ಯೆ ೫ ರಿಂದ ೬ ಕೋಟಿಯಿರಬೇಕು. ಏಕಜರ-ಅವೈದಿಕರ ಸಂಖ್ಯೆ ೯೪ರಿಂದ ೯೫ ಕೋಟಿಯಷ್ಟಿದೆ. ಈ ಅವೈದಿಕರ-ಶೂದ್ರರ-ಪಂಚಮರ-ಮಹಿಳೆಯರ ಬದುಕು ಉತ್ತಮಗೊಳ್ಳಬೇಕು. ಜನರ ಬದುಕನ್ನು ಉತ್ತಮಪಡಿಸುವ ದಿಶೆಯಲ್ಲಿ ಸುದರ್ಶನ ಅವರು ತಮ್ಮ ಚಿಂತನೆಯನ್ನು ಹರಿಸಿದರೆ ಸಮಾಜಕ್ಕೆ ಉಪಕಾರವಾದೀತು.

**ಟಿ. ಆರ್. ಚಂದ್ರಶೇಖರ**
ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩ ೨೭೬.

# ಮಾರ್ಟಿನ್ ಲೂಥರ್ ಕಿಂಗ್‌ನ ಕನಸು ನನಸಾಗುವುದೆಂದು ?

*ಡಿಸೆಂಬರ್ ೧೦ ಮಾನವ ಹಕ್ಕುಗಳ ದಿನ. ವಿಶ್ವಸಂಸ್ಥೆಯು ಹಾಗೆಂದು ನಿಗದಿಗೊಳಿಸಿದೆ. ಬೇರೆ ದೇಶಗಳನ್ನು ಅಂತರರಾಷ್ಟ್ರೀಯ ಒಪ್ಪಂದಗಳಿಗೆ ಸಹಿ ಹಾಕಲು ಒತ್ತಾಯಿಸಿರುವ ಅಮೆರಿಕ ತಾನೇ ಸ್ವತಃ ಮಾನವ ಹಕ್ಕುಗಳ ಘೋಷಣೆಗೆ ಸಹಿ ಹಾಕಿಲ್ಲ. ಅಂತೆಯೇ, ಬೇರೆ ದೇಶಗಳಲ್ಲಿ ಮಾನವ ಹಕ್ಕುಗಳಿಗೆ ಚ್ಯುತಿಯುಂಟಾಗಿದೆಯೆಂದು ಬೆರಳುಮಾಡಿ ತೋರಿಸುವ ಅಮೆರಿಕ ಸ್ವತಃ ತಾನು ಈ ಹಕ್ಕುಗಳನ್ನು ಹೇಗೆ ಪಾಲಿಸುತ್ತಿದೆ ? ವಿಶ್ವದ ಕ್ರಾಂತಿಕಾರಿ ಪತ್ರಿಕೆಗಳ ಪೈಕಿ ಅಗ್ರಸ್ಥಾನದಲ್ಲಿರುವ ಕ್ಯೂಬಾದ 'ಗ್ರಾನ್ಮಾ' ಪತ್ರಿಕೆಯ ಪ್ರತ್ಯಕ್ಷದರ್ಶಿಯೊಬ್ಬರ ವರದಿ ಅದಕ್ಕೆ ಉತ್ತರ ಕೊಟ್ಟಿದೆ. ಇದನ್ನು 'ಗ್ರಾನ್ಮಾ ಇಂಟರ್‌ನ್ಯಾಷನಲ್' ಪತ್ರಿಕೆಯ ಇದೇ ಸೆಪ್ಟೆಂಬರ್ ೧೦ರ ಸಂಚಿಕೆಯಿಂದ ಆಯ್ದುಕೊಳ್ಳಲಾಗಿದೆ. ಅದನ್ನು ಕನ್ನಡದಲ್ಲಿ ಸಂಗ್ರಹಿಸಿ ಕೊಟ್ಟಿರುವವರು - ಶ್ರೀ ಎಸ್. ಸುರೇಂದ್ರ.*

೧೮೦೦ರ ಅವಧಿಯಲ್ಲಿ ಹೊಸ ಬದುಕನ್ನು ಅರಸಿ ಬರುತ್ತಿದ್ದ ಯೂರೋಪಿನ ವಲಸಿಗರಿಗೆ ಆಶಾಕಿರಣವನ್ನು ಮೂಡಿಸುತ್ತಿದ್ದ ಭರವಸೆಯ ನಾಡು ಅಮೆರಿಕ. ಆ ನೆಲದಲ್ಲಿ ಅಂದಿನಿಂದಲೂ ಬಂದಿಳಿದ ಬಿಳಿಯರ ವಸಾಹತುಶಾಹಿ ಕರಾಳ ಕೃತ್ಯಗಳಿಗೆ, ಶೋಷಣೆಗೆ ಬಲಿಯಾದ ಅಲ್ಲಿನ ಮೂಲನಿವಾಸಿಗಳು ಮತ್ತು ನಂತರದ ಕಪ್ಪು ಜನರ ದಾಸ್ಯಪದ್ಧತಿ ಇವತ್ತಿಗೂ ಒಂದಲ್ಲ ಒಂದು ರೀತಿಯಲ್ಲಿ ಮುಂದುವರೆಯುತ್ತಲೇ ಇದೆ. ೧೮೬೩ರಲ್ಲಿ ದಾಸ್ಯಪದ್ಧತಿಯನ್ನು ರದ್ದುಗೊಳಿಸಲಾಯಿತಾದರೂ ಆ ನತದೃಷ್ಟ ಕಪ್ಪು ಜನತೆ ಇಂದಿಗೂ ಕೀಳು ದರ್ಜೆಯ ಉಪೇಕ್ಷಿತ ಬದುಕನ್ನು ನಡೆಸುತ್ತಿದ್ದಾರೆ. ಈ ಅನ್ಯಾಯದ ವಿರುದ್ಧ ಸಿಡಿದೆದ್ದ ಮಾನವತಾವಾದಿಗಳಲ್ಲಿ ಎದ್ದು ನಿಲ್ಲುವ ವ್ಯಕ್ತಿ ಮಾರ್ಟಿನ್ ಲೂಥರ್ ಕಿಂಗ್. ಗಾಂಧೀಜಿ ಅವರ ಅಹಿಂಸಾತ್ಮಕ ಹೋರಾಟಗಳಿಂದ ಪ್ರಭಾವಿತನಾದ ಕಿಂಗ್ ಕಪ್ಪು ಜನರ ನಾಗರಿಕ ಹಕ್ಕುಗಳಿಗಾಗಿ ಜನಸಾಮಾನ್ಯರಲ್ಲಿ ಅಮೆರಿಕ ದುದ್ದಗಲಕ್ಕೆ ಹೊಸ ಪ್ರಜ್ಞೆಯನ್ನು ಮೂಡಿಸಿದ. ಶೋಷಿತ ಜನರಲ್ಲಿ ಹೊಸ ಚೇತನ ತುಂಬಿದ. ಬೃಹತ್ ಚಳುವಳಿಯನ್ನು ಸಂಘಟಿಸಿದ. ಶಾಂತಿ, ಸಮೃದ್ಧಿ ಮತ್ತು ಸಮಾನತೆಯ ಹೊಸ ಅಮೆರಿಕಾದ ಕನಸನ್ನು ಕಂಡ. ಈ ಸಂದರ್ಭದಲ್ಲಿ ಲಕ್ಷಾಂತರ ಜನರು ಪಾಲ್ಗೊಂಡಿದ್ದ ೧೯೬೩ರ ಐತಿಹಾಸಿಕ ವಾಷಿಂಗ್ಟನ್ ಯಾತ್ರೆಯಲ್ಲಿ ಕಿಂಗ್ ಮಾಡಿದ ಅಮೋಘ ಭಾಷಣದ ಕೆಲವು ಭಾಗಗಳನ್ನು ಇಲ್ಲಿ ಕಾಣಿಸುವುದು ಪ್ರಸ್ತುತವೆನಿಸುತ್ತದೆ.

''ಈ ಆಂದೋಲನದ ಕಠಿಣತೆ ಮತ್ತು ಹತಾಶೆಯ ನಡುವೆಯೂ ನನಗೊಂದು ಕನಸಿದೆ. ಎಲ್ಲ ಜನರೂ ಸಮಾನರಾಗಿ ಸೃಷ್ಟಿಯಾಗಿದ್ದಾರೆ ಎಂಬ ಕ್ರೈಸ್ತ ಮತದ ನಂಬಿಕೆಗೆ ಅನುಗುಣವಾಗಿ ಈ ರಾಷ್ಟ್ರ ತನ್ನ ಘನತೆಯನ್ನು ಹೆಚ್ಚಿಸಿಕೊಂಡು ಉಜ್ವಲ ಭವಿಷ್ಯದತ್ತ ಕಾಲಿಡುತ್ತದೆ ಎಂಬ ಕನಸು ನನಗಿದೆ...

''ಜನರ ಚರ್ಮದ ಬಣ್ಣದ ಬದಲು ಅವರು ಮೈಗೂಡಿಸಿಕೊಂಡ ಗುಣದ ಆಧಾರದ ಮೇಲೆ ವ್ಯಕ್ತಿತ್ವವನ್ನು ಅಳೆಯುವಂತಹ ದೇಶದಲ್ಲಿ ನಮ್ಮ ಮುಂದಿನ ಪೀಳಿಗೆ ಬದುಕುತ್ತಾರೆಂಬ ಕನಸು ನನಗಿದೆ...''

ಅಂದಿನ ಹಲವಾರು ಬಿಳಿಯರೂ ಸೇರಿದಂತೆ ಅನೇಕ ಪ್ರಜ್ಞಾವಂತ ಜನತೆಯ ಮತ್ತು ಶೋಷಿತರ ಗಂಭೀರ ಅನಿಸಿಕೆಗಳಿಗೆ ಮಾರ್ಟಿನ್ ಲೂಥರ್ ಕಿಂಗ್ ದನಿಗೂಡಿಸಿದ್ದು ಹೀಗೆ.

ಐದು ವರುಷಗಳ ನಂತರ ವಿಕೃತ ಮನಸ್ಸಿನ ಬಿಳಿಯನೊಬ್ಬನ ಗುಂಡಿಗೆ ಬಲಿಯಾಗಿ, ಹುತಾತ್ಮನಾಗಿ, ಇಂದಿಗೆ ಮೂರು ದಶಕಗಳು ಸಂದಿವೆಯಾದರೂ ಹಿಂಸೆ, ಕ್ರೌರ್ಯ ಮತ್ತು ಪಕ್ಷಪಾತ ನೀತಿಗಳ ಪ್ರವೃತ್ತಿ ಇಂದಿಗೂ ಮುಂದುವರೆಯುತ್ತಲೇ ಇದೆ. ಕ್ಲು ಕ್ಲುಕ್ಸ್ ಕ್ಲಾನ್‌ನಂತಹ ನಾಜಿ ಶೈಲಿಯ ಮಾನವ ವಿರೋಧಿ ಸಂಸ್ಥೆ ಮತ್ತೆ ತಲೆಯೆತ್ತಿ ವಿಜೃಂಭಿಸುತ್ತಿರುವುದು ಈ ನಿಟ್ಟಿನಲ್ಲಿ ಒಂದು ಸೂಕ್ತ ಉದಾಹರಣೆ. ವಿಲಿಯಮ್ ಪಿಯರ್ಸ್ ಎಂಬಾತ ಹುಟ್ಟುಹಾಕಿರುವ ನ್ಯಾಷನಲ್ ಅಲಯನ್ಸ್ ಗ್ರೂಪ್ ಎಂಬ ಸಂಸ್ಥೆ ಕ್ಲು ಕ್ಲುಕ್ಸ್ ಕ್ಲಾನ್‌ನಂತಹ ಸಂಘಟನೆಯನ್ನೂ ನಾಚಿಸುವ ರೂಪರೇಷೆಗಳನ್ನು ಪಡೆದಿದೆ. ಭಯೋತ್ಪಾದಕತೆ ಮತ್ತು ಹಿಂಸಾತ್ಮಕ ಚಟುವಟಿಕೆಗಳಿಗೆ ಪ್ರಚೋದನೆ ನೀಡುವ ಗ್ರಂಥ 'ದಿ ಟರ್ನರ್ ಡೈಯರೀಸ್'; ವಿಲಿಯಮ್ ಪಿಯರ್ಸ್ ಇದರ ಕರ್ತೃ. ಯಹೂದ್ಯರು ಮತ್ತು ಬಿಳಿಯೇತರ ಎಲ್ಲ ಜನಾಂಗದವರನ್ನು ಕೊಂದು ಸ್ವಚ್ಛವಾದ ''ಆರ್ಯನ್ ಜಾಗತಿಕ ವ್ಯವಸ್ಥೆ''ಯನ್ನು ಹುಟ್ಟುಹಾಕುವುದೇ ''ದಿ ಟರ್ನರ್ ಡೈಯರೀಸ್'' ನಲ್ಲಿರುವ ಮುಖ್ಯ ಸಂದೇಶ. ಈ ಸಂಘಟನೆಯ ಮಾನವ ವಿರೋಧಿ ಮತ್ತು ಹಿಂಸಾತ್ಮಕ ಚಟುವಟಿಕೆಗಳು ಅಮೆರಿಕಾದ ಗೂಢಚಾರ ಸಂಸ್ಥೆ ಎಫ್.ಬಿ.ಐ.ಯನ್ನೇ ಬೆಚ್ಚಿಬೀಳಿಸಿವೆ ಎಂಬ ವರದಿಗಳೂ ಇವೆ. ಅಲ್ಲಿನ ಕಾನೂನು ವ್ಯವಸ್ಥೆಯಲ್ಲಿರುವ ಕೆಲವು ವೈರುಧ್ಯಗಳ ಉಪಯೋಗ ಪಡೆದು ಮೂರು ದಶಕಗಳಿಂದಲೂ ಮಾನ್ಯತೆ ಪಡೆದಿರುವ ''ಜೀಸಸ್ ಕ್ರೈಸ್ತ ಕ್ರಿಶ್ಚಿಯನ್/ಆರ್ಯನ್ ನೇಷನ್'' ಎಂಬ ಮತ್ತೊಂದು ಉಗ್ರಗಾಮಿ ಸಂಸ್ಥೆ ಇದೇ ನಿಟ್ಟಿನಲ್ಲಿ ತನ್ನ ಕಾರ್ಯಾಚರಣೆಯನ್ನು ನಡೆಸುತ್ತಿದೆ. ಇದರ ಮುಖಂಡರ ಪಟ್ಟಿಯಲ್ಲಿ ಯಹೂದ್ಯರು, ಕರಿಯರು, ಏಷ್ಯನ್ನರು ಮತ್ತು ಹಿಸ್ಪಾನಿಕ್ ಮೂಲದ ಜನಾಂಗದವರ ಮೇಲೆ ಕೊಲೆ, ಲೂಟಿ ಮತ್ತಿತರ ಹಿಂಸಾಕೃತ್ಯಗಳ ಆಪಾದನೆಗಳಿಗೆ ಗುರಿಯಾದವರೇ ಹೆಚ್ಚು ಜನರಿದ್ದಾರೆ. ಈ ಚರ್ಚ್ ಸಂಘಟನೆಯ ನಾಯಕ ೮೨ ವರುಷ ಪ್ರಾಯದ ರಿಚರ್ಡ್ ಬಟ್ಲರ್. ಈಗ ಅಮೆರಿಕಾದಲ್ಲಿರುವ ''ಹಕ್ಕುಗಳು'' ಏನೇನೂ ಸಾಲದು ಎಂದು ವಾದಿಸುವ ಹಿನ್ನೆಲೆಯಲ್ಲಿ ಅಲ್ಲಿನ ಆಗುಹೋಗುಗಳನ್ನು ಗಮನಿಸಿದರೆ, ನ್ಯಾಯಾಲಯದಲ್ಲಿ ಅವನು ಹಾಕಿರುವ ಮೊಕದ್ದಮೆಯಲ್ಲಿ ಜಯ ಗಳಿಸುವುದು ಅಸಾಧ್ಯವೇನಲ್ಲ. ಇದು ಅಲ್ಲಿಯ ಪ್ರಜಾಪ್ರಭುತ್ವದ ಮತ್ತೊಂದು ಮುಖ.

ಅಮೆರಿಕಾದ ಅನೇಕ ರಾಜ್ಯಗಳಲ್ಲಿ ಸಂಭವಿಸುತ್ತಿರುವ ಹಿಂಸಾತ್ಮಕ ಚಟುವಟಿಕೆಗಳ ವಿರುದ್ಧ ಹ್ಯೂಮನ್ ರೈಟ್ಸ್ ವಾಚ್ ಎಂಬ ಸಂಸ್ಥೆ ತನ್ನ ಪ್ರತಿಭಟನೆಯನ್ನು ಸೂಚಿಸಿ ಅಲ್ಲಿನ ಸರಕಾರಗಳನ್ನು ತರಾಟೆಗೆ ತೆಗೆದುಕೊಂಡಿದೆ. ಫಿಲಡೆಲ್ಫಿಯಾದಲ್ಲಿ ಕಾನೂನು ಪರಿಪಾಲಕರೆನಿಸಿಕೊಂಡವರೇ ಕರಿಯನೊಬ್ಬನನ್ನು ಅನಾವಶ್ಯಕ ಚಿತ್ರಹಿಂಸೆಗೆ ಗುರಿ ಮಾಡಿದ್ದು ಇತ್ತೀಚಿನ ಘಟನೆ. ಮಾನವ ಹಕ್ಕುಗಳ ಚಿಲುಮೆ ತಾನೆಂದು ಕೊಚ್ಚಿಕೊಳ್ಳುವ ಅಮೆರಿಕಾದಲ್ಲಿ ಬಿಳಿಯರ ಭಯೋತ್ಪಾದಕ ಕೃತ್ಯಗಳಿಗೆ ಬಲಿಯಾಗುತ್ತಿರುವವರ ಸಂಖ್ಯೆ ದಿನೇದಿನೇ ಹೆಚ್ಚಾಗುತ್ತಿದೆ. ಇವೆಲ್ಲವನ್ನೂ ಮತ್ತು ೬೦ರ ದಶಕದಲ್ಲಿ ನಾಗರಿಕ ಹಕ್ಕುಗಳಿಗಾಗಿ ಜರುಗಿದ ಹೋರಾಟಗಳ ವಿರುದ್ಧದ ಬರ್ಬರತೆಯನ್ನು ಕ್ಯೂಬಾದ ನಿರ್ದೇಶಕ ಸ್ಯಾಂಟಿಯಾಗೊ ಆಲ್ವಾರೆಜ್ ತನ್ನ 'ನೌ' ಚಿತ್ರದಲ್ಲಿ ಮನೋಜ್ಞವಾಗಿ ನಿರೂಪಿಸಿದ್ದಾನೆ.



ಕರಿಯರ ಕೊರಳಿಗೆ ಸರಪಳಿಯ ಬಂಧನ

ಒಬ್ಬ ಬಿಳಿಯ ಅಧಿಕಾರಿಯನ್ನು ಕೊಂದನೆಂಬ ಸುಳ್ಳು ಆಪಾದನೆಯ ಮೇಲೆ ೧೮ ವರುಷಗಳಿಂದಲೂ ಸೆರೆಮನೆಯಲ್ಲಿ ಶಿಕ್ಷೆ ಅನುಭವಿಸುತ್ತಿರುವ ಮುಮಿಯ ಜಮಾಲ್ ಈ ಕ್ರೂರ ವ್ಯವಸ್ಥೆಯನ್ನು ತನ್ನ ಕಣ್ಣೀರು, ಹತಾಶೆಗಳಲ್ಲಿ ದಾಖಲಿಸುತ್ತಾನೆ. ವರ್ಕರ್ಸ್ ವರ್ಲ್ಡ್ ಪಕ್ಷದ ಮೋನಿಕ ಮೂರ್‌ಹೆಡ್ ಹವಾನಾದಲ್ಲಿನ ತನ್ನ ಭಾಷಣದಲ್ಲಿ ಅಮೆರಿಕಾದ ಸಾಮಾಜಿಕ ಅನ್ಯಾಯ ಮತ್ತು ಪೊಲೀಸರ ಹಿಂಸಾತ್ಮಕ ಚಟುವಟಿಕೆಗಳ ವಿರುದ್ಧದ ಸಮರದ ಒಬ್ಬ ನೈಜ ಪ್ರತಿನಿಧಿ ಜಮಾಲ್ ಎಂದು ಘೋಷಿಸಿದ್ದಾಳೆ. ನ್ಯೂಯಾರ್ಕ್‌ನ ಅಮಾಡೋ ಡಿಯಾಲೋ, ಫಿಲಡೆಲ್ಫಿಯಾದ ರೋಸ್‌ಮೇರಿ ಮುಂತಾದವರು ಈ ಕ್ರೂರ ವ್ಯವಸ್ಥೆಗೆ ಬಲಿಪಶುಗಳಾಗುತ್ತಿರುವ ಸಹಸ್ರಾರು ಜನರ ನೋವಿನ ಧ್ವನಿಗೆ ಸಂಕೇತವಾಗಿದ್ದಾರೆ.

ವಾಷಿಂಗ್‌ಟನ್ನಿನ ಶ್ವೇತಭವನದಲ್ಲಿರುವ ಫೆಡರಲ್ ಸರಕಾರ ಇದಾವುದನ್ನೂ ಲೆಕ್ಕಿಸದೆ ಕಣ್ಣುಮುಚ್ಚಿ ಕೂತಿದೆ ಎಂದಿನಂತೆ. ''ಅತಿಯಾದ ಹಿಂಸೆ ರಾಷ್ಟ್ರದ ಜನಜೀವನವನ್ನು ಈಗೀಗ ಹೆಚ್ಚಾಗಿ ಆವರಿಸುತ್ತಿದೆ'' ಎಂಬ ಅಪರೂಪದ ಹೇಳಿಕೆ ಅಧ್ಯಕ್ಷ ಕ್ಲಿಂಟನ್ ಅವರ ಬಾಯಿಂದಲೇ ಹೊರಬಿದ್ದಿದೆ. ಇದು ಬರಿಯ ಕಣ್ಣೊರೆಸುವ ಮಾತುಗಳೆಂಬುದು ಅಲ್ಲಿನ ಜನತೆಗೂ ತಿಳಿದಿದೆ. ಹೇಳಿ ಹೆಸರಿಸುವ ಯಾವ ಕಾನೂನು ಕ್ರಮಗಳನ್ನೂ ಸರಕಾರ ತೆಗೆದುಕೊಳ್ಳದೆ ಇರುವುದೆ ಇದಕ್ಕೆ ಸಾಕ್ಷಿ.

ವರ್ಣದ್ವೇಷ, ವರ್ಣಭೇದ, ಪ್ರಾಣಭಯಗಳಿಗೆ ತುತ್ತಾಗಿರುವ ಕರಿಯರು, ಹಿಸ್ಪಾನಿಕ್ ಜನರು, ಏಷ್ಯನ್ನರು ಕಂಗಾಲಾಗಿದ್ದಾರೆ. ಅವರ ಭವಿಷ್ಯ ಶೂನ್ಯವಲ್ಲದೆ ಮತ್ತೇನು ?

ಅಮೆರಿಕಾದ ಇಂದಿನ ಸಾಮಾಜಿಕ ಮತ್ತು ರಾಜಕೀಯದಲ್ಲಿ ಮಾರ್ಟಿನ್ ಲೂಥರ್ ಕಿಂಗ್ ಕಂಡ ಭವ್ಯ ಕನಸು ನನಸಾಗುವ ದಿನಗಳು ದೂರ... ಬಹುದೂರ.. ಎನಿಸುತ್ತಿದೆ.

*- ಲಿಲಿಯಂ ರೀಡಾ*

# ದೈವಶ್ರದ್ಧೆ ಮತ್ತು ವ್ಯಾಪಾರಿತಂತ್ರ

ಜಿ. ರಾಮಕೃಷ್ಣ

ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಬಂಡವಾಳವು ಎಲ್ಲೆಗಳನ್ನು ಮೀರಿ ವರ್ತಿಸಬಹುದು, ಆದರೆ ದುಡಿಯುವ ವ್ಯಕ್ತಿ ಹಾಗೆ ಮಾಡಲಾರ. ತನ್ನ ದೇಶದೊಳಗೆ ಇದ್ದುಕೊಂಡು ಬೇರೆ ರಾಷ್ಟ್ರವೊಂದಕ್ಕೆ ಲಾಭ ತರುವ ದುಡಿಮೆ ಇಂದು ಅವನದಾಗುತ್ತಿದೆ. ಮಧ್ಯಕಾಲೀನ ಯುರೋಪಿನಲ್ಲಿ ಹೀಗೆ ದುಡಿಮೆಗಾರನಿಗೆ ಪ್ರತಿಬಂಧಕಗಳನ್ನು ವಿಧಿಸುವುದು ಸಲ್ಲ ಎಂಬ ಅಭಿಪ್ರಾಯವಿತ್ತು; ಅದು ವ್ಯಾಪಾರಿಯ ಹಿತಕ್ಕೆ ಧಕ್ಕೆ ತರುತ್ತದೆಂದು ಆಗಿನ ತರ್ಕವಾಗಿತ್ತು. ಮತಧರ್ಮದ ಬಗೆಗೂ ಉದಾರತ್ವ ಮತ್ತು ಸಹನೆಯನ್ನು ಬೆಳೆಸಿಕೊಳ್ಳುವುದು ಯುಕ್ತವೆಂಬ ಭಾವನೆ ಆಗ ಪ್ರಚಲಿತವಾಗಿತ್ತು. ''ಮಧ್ಯಮ ವರ್ಗ''ವೆಂಬುದೊಂದು ಇಂದಿನಂತೆ ಆಗ ಅಸ್ತಿತ್ವದಲ್ಲಿರಲಿಲ್ಲ. ಉತ್ಪಾದನೆಯು ಸಾಮಾನ್ಯವಾಗಿ ಭಾರಿ ಮಟ್ಟದಲ್ಲಿರುತ್ತಿರಲಿಲ್ಲ ಮತ್ತು ಆಸ್ತಿ ರಹಿತ ದುಡಿಮೆಗಾರರ ಸಂಖ್ಯೆ ದೊಡ್ಡ ಪ್ರಮಾಣದಲ್ಲಿರಲಿಲ್ಲ. ಮಧ್ಯಮ ವರ್ಗವಿರಬೇಕಾದರೆ ಈ ಎರಡೂ ಬೇರೆ ರೀತಿಯಲ್ಲಿರಬೇಕಾದ್ದು ಅವಶ್ಯಕ.

ಬಂಡವಾಳಶಾಹಿಯ ಉಗಮವಾಗುವ ಕಾಲಕ್ಕೆ ಈ ಸನ್ನಿವೇಶ ಬದಲಾಗಿತ್ತು. ಜಮೀನ್ದಾರರ ಕುಟುಂಬಗಳು ವ್ಯಾಪಾರದ ಕ್ಷೇತ್ರವನ್ನು ಪ್ರವೇಶಿಸಿದ್ದುವು ಮತ್ತು ವ್ಯಾಪಾರಸ್ಥರು ದಿವಾಳಿಯಾದ ಕುಲೀನರ ಆಸ್ತಿಯನ್ನು ಕೊಳ್ಳಲು ತುದಿಗಾಲಲ್ಲಿ ನಿಂತಿದ್ದರು. ಹದಿನೆಂಟನೆಯ ಶತಮಾನದ ವೋಲ್ಟೇರ್ ಕಾಲಕ್ಕಾಗಲೆ ಇಂಗ್ಲೆಂಡಿನಲ್ಲಿ ವ್ಯಾಪಾರಸ್ಥರು ಜಮೀನ್ದಾರರಿಗಿಂತ ಮೇಲುಗೈ ಸಾಧಿಸಿದ್ದರು; ತನ್ನ ದೇಶದ ಪರಿಸ್ಥಿತಿಗೆ ಭಿನ್ನವಾಗಿದ್ದ ಇದನ್ನು ಕಂಡು ವೋಲ್ಟೇರ್ ವಿಸ್ಮಿತನಾಗಿದ್ದ. ಅದಾದ ಒಂದು ಶತಮಾನದಲ್ಲಿ ವ್ಯಾಪಾರಸ್ಥರದ್ದೇ ಪ್ರಭುತ್ವವೆನ್ನುವಷ್ಟು ಬಲವಾಗಿ ಅವರು ವರ್ಧಿಸಿದ್ದರು. ''ಇವರು ಸಮಾಜ ವಿರೋಧಿ ಚಟುವಟಿಕೆಗಳಲ್ಲಿ ತೊಡಗಿ ಶ್ರೀಮಂತರಾಗುತ್ತಾರೆ'' ಎಂಬ ಹಿಂದಿನ ಕಟು ಟೀಕೆ ಕೇಳಿಬರುವುದು ಕಡಿಮೆಯಾಯಿತು. ರಕ್ತ ಹೀರುವವರು, ಲೇವಾದೇವಿ ಜನ, ಎಂಬಿತ್ಯಾದಿ ಮೂದಲಿಕೆಯ ಮಾತುಗಳು ಮುಂದುವರಿದರೂ ರಾಜನ ಆಸ್ಥಾನದವರು ಹಾಗೂ ಪ್ರಾಂತೀಯ ಜಮೀನ್ದಾರರು ಇವರ ನೆರವು ಕೋರುವುದು ಹೆಚ್ಚಾಯಿತು. ೧೭ನೆಯ ಶತಮಾನದ ಕೊನೆಯಲ್ಲಿ ಹೊರಬಂದ ಒಂದು ಕರಪತ್ರದಲ್ಲಿ ಹೀಗೆ ಹೇಳಲಾಗಿತ್ತು: ''ಈ ವ್ಯಾಪಾರಸ್ಥರ ತಂತ್ರ ಹೇಗಿದೆಯೆಂದರೆ ಅವರು ರಾಜನಿಗೆ, ಚರ್ಚಿಗೆ ಮತ್ತು ಬಡಬಗ್ಗರಿಗೆ ತಮ್ಮ ಪಾಲನ್ನೇನೂ ಕೊಡಲೇಬೇಕಾಗಿಲ್ಲ. ಹೋಗಲಿ, ಶ್ರಮವಾದರೂ ಇದೆಯೇ ಎಂದರೆ ಇವರಿಗೆ ಅದೂ ಬೇಕಿಲ್ಲ. ಸಾರ್ವಜನಿಕವಾದ ನಿರ್ಬಂಧಗಳೂ ಇಲ್ಲ, ಖಾಸಗಿಯಾದ ನಂಬುಗೆಯೂ ಇಲ್ಲ. ಅವರು ನಿರ್ಧರಿಸಿದ್ದೇ ಭೂಮಿಯ ಬೆಲೆ, ಅವರು ಹೇರಿದ್ದೇ ಮಾರುಕಟ್ಟೆಯ ಕಾನೂನು. ಹಣದಿಂದ ಅವರು ಎಂತಹ ಸೇವೆಯನ್ನಾದರೂ ಪಡೆಯಲು ಸಮರ್ಥರು. ಒಟ್ಟಿನಲ್ಲಿ ಅವರ ಗೂಡು ಸುಭದ್ರವಾಗಿ ಬೆಳೆಯುತ್ತಿದೆ.'' ಇದಕ್ಕೆ ಉತ್ತರವಾಗಿ ವ್ಯಾಪಾರಸ್ಥರದ್ದು ಒಂದೇ ಮಾತು: ''ನೀವು ಬೇಕಾಬಿಟ್ಟಿ ದುಂದುಗಾರಿಕೆಯಲ್ಲಿ ತೊಡಗಿರದಿದ್ದರೆ ನಾವು ಹೇಗೆ ತಾನೆ ಬೆಳೆಯುತ್ತಿದ್ದೆವು!'' ತಾವು ದೈವದಿಂದ ಪೋಷಿತರಾಗಿದ್ದವರು, ತಮಗೆಂದೂ ನರಕದ ಬಾಗಿಲು ತೆರೆಯುವುದಿಲ್ಲವೆಂಬ ಗಾಢ ಪ್ರಜ್ಞೆ ಅವರನ್ನು ಆವರಿಸಿತ್ತು; ಅರಸೊತ್ತಿಗೆಯ ಕಾಲ ಮುಗಿಯಿತು, ಇದು ನಮ್ಮ ಯುಗ ಎಂಬ ಗರ್ವ ಅವರದು. ಚರ್ಚಿನ ಇತಿಹಾಸದಲ್ಲಿ ಪ್ರಾಟಸ್ಟೆಂಟ್ ಶಾಖೆಯು ಉದಯೋನ್ಮುಖವಾದದ್ದು ಇಂತಹ ಚಾರಿತ್ರಿಕ ಹಿನ್ನೆಲೆಯಲ್ಲಿಯೇ. ತಮ್ಮನ್ನು ಪ್ಯೂರಿಟನ್ನರೆಂದು ಕರೆದುಕೊಂಡ ಜನರೇ ಮುಂದೆ ಮಧ್ಯಮ ವರ್ಗಕ್ಕೆ ನಂಬಿಕೆ ಮತ್ತು ಮೌಲ್ಯಗಳ ಪಂಕ್ತಿ ಹಾಕಿಕೊಟ್ಟವರೆಂದರೆ ತಪ್ಪಾಗಲಾರದು.

> *ಡಿಸೆಂಬರ್ ಮಸೀದಿ ಧ್ವಂಸ ಮಾಡಿದ ತಿಂಗಳು. ಯೇಸು ಕ್ರಿಸ್ತನ ಜನ್ಮವಾದ ತಿಂಗಳೂ ಹೌದು. ಮತ್ತೆ ಯಾಂತ್ರಿಕವಾಗಿ ಯೇಸುವಿನ ಸ್ಮರಣೆ, ಆರಾಧನೆ ನಡೆಯುವ ತಿಂಗಳು ಇದು. ಯೇಸುವನ್ನು ರೋಮಿನ ಚಕ್ರಾಧಿಪತ್ಯವು ಶಿಲುಬೆಗೇರಿಸಿತು. ಆಮೇಲೆ ಅವನ ಹೆಸರಿನಲ್ಲಿ ವಿಕಾಸಗೊಂಡು ಇಂದು ವ್ಯಾಪಕವಾಗಿ ಹರಡಿರುವ ಧರ್ಮ ಸಂಸ್ಥೆಯಾದ ಚರ್ಚ್ ಆಗಾಗ್ಗೆ ಯೇಸುವಿನ ಸಂದೇಶವನ್ನು ಸಾರಿದೆ; ಅಂತೆಯೇ ಅವನ ಸಂದೇಶವನ್ನು ಶಿಲುಬೆಗೇರಿಸುವ ಹೀನಸ್ಥಿತಿಯನ್ನೂ ಮುಟ್ಟಿದೆ. ಮಧ್ಯಕಾಲೀನ ಯುರೋಪಿನ ಸಂದರ್ಭ ಬೇರೆ, ನಮ್ಮ ಇಂದಿನ ಸಂದರ್ಭ ಬೇರೆ. ಆದರೆ ಹೋಲಿಕೆಗಳಿಲ್ಲದಿಲ್ಲ. ಅಂದಿನ ವಿದ್ಯಮಾನಗಳನ್ನು ಇಂದಿನ ಸನ್ನಿವೇಶದೊಡನೆ ತುಲನೆ ಮಾಡಿ ಪಾಠ ಕಲಿಯುವುದಾದರೆ ಅವಕಾಶಗಳು ವಿಪುಲವಾಗಿವೆ. ಧಾರ್ಮಿಕ ಪ್ರಜ್ಞೆಗೂ ಮತಧರ್ಮದ ಸಂಸ್ಥೆಯ ದರ್ಪಕ್ಕೂ ವ್ಯತ್ಯಾಸವಿದೆ. ಇಂದು ನಾವು ನೀಡಬೇಕಾದ ಆದ್ಯತೆ ಯಾವುದಕ್ಕೆ ಎಂಬುದರ ಖಚಿತ ತೀರ್ಮಾನ ಆಗಬೇಕಾಗಿದೆ.*

ತಮ್ಮ ಬಗ್ಗೆ ಉದಾತ್ತವಾದ ಆದರ ಬೆಳೆಸಿಕೊಂಡವರಿಗೆ ಧರ್ಮಭೀರುಗಳಾಗುವ ಕಾರಣವಿಲ್ಲ; ಅವರ ಪ್ರಕಾರ ಭಗವಂತನೇ ಅವರನ್ನು ಕೈ ಹಿಡಿದು ನಡೆಸುತ್ತಿರುತ್ತಾನೆ. ಪಾಪಪ್ರಜ್ಞೆ ಅವರನ್ನು ಕಾಡಬೇಕಾಗಿಲ್ಲ; ಏಕೆಂದರೆ, ದೈವನಿಯಾಮಕನ ಆಣತಿಯಂತೆ ತಾನೆ ಅವರು ನಡೆದುಕೊಳ್ಳುವುದು! ಇದರಿಂದಾಗಿ ಪ್ರತ್ಯೇಕ ವ್ಯಕ್ತಿತ್ವಕ್ಕೆ ಪುಷ್ಟಿ ದೊರೆಯಿತೆಂದು ಹೇಳುವ ಚರಿತ್ರಕಾರರಿದ್ದಾರೆ. ನಿಜವಾಗಿ ನೋಡಿದರೆ ವ್ಯಕ್ತಿಗಳಲ್ಲಿ ಈ ರೀತಿಯ ಪ್ರತ್ಯೇಕ ನಿಷ್ಠೆ ಇರುವಂತೆಯೇ ಸಮಾಜವಾದಿ ಕಲ್ಪನೆಯೂ ಇರಲು ಸಾಧ್ಯವಿದೆ. ಸರ್ವಾಧಿಕಾರಿ ಮನೋಭಾವವಾಗಲಿ, ಸ್ವಾತಂತ್ರ್ಯ ಪ್ರಜ್ಞೆಯಾಗಲಿ ಆವಿರ್ಭವಿಸುವ ಸಾಧ್ಯತೆಯೂ ಅಷ್ಟೇ ಉತ್ಕಟವಾಗಿರುತ್ತದೆ. ಆಲಿವರ್ ಕ್ರಾಮ್‌ವೆಲ್ಲನ ಕಾಲದಲ್ಲಿ ನಡೆದ ಅಂತರ್ಯುದ್ಧವು ಬ್ರಿಟನ್ನಿನಲ್ಲಿ ಇದನ್ನು ಸಾಬೀತುಗೊಳಿಸಿತು: ಒಂದು ಕಾಲದಲ್ಲಿ ಪ್ಯೂರಿಟನ್ನರೆಂದು ಐಕ್ಯಗೊಂಡಿದ್ದ ಜನ ಅಂತರ್ಯುದ್ಧದ ಸನ್ನಿವೇಶದಲ್ಲಿ ಹತ್ತಾರು ರೀತಿಯ ಆಕಾಂಕ್ಷೆಗಳನ್ನು ತಮ್ಮದನ್ನಾಗಿಸಿಕೊಂಡು ಭಿನ್ನರಾದರು. ಕೆಲವರು ಸ್ವತಂತ್ರ ಹಾದಿಯನ್ನು ಹಿಡಿದರು, ಕೆಲವರು ಶ್ರೀಮಂತರ ಪರವಾದರು, ಕೆಲವರು ಸಮಾನತೆಯ ಆರಾಧಕರಾದರು, ಕೆಲವರು ರಾಜಕಾರಣಿಗಳಾದರು, ಕೆಲವರು ವ್ಯಾಪಾರಿಗಳಾದರು, ಇನ್ನು ಕೆಲವರು ಕಾಲ್ಪನಿಕ ಸಾಮ್ರಾಜ್ಯಗಳಲ್ಲಿ ಮುಳುಗಿಹೋದರು. ''ನಾವೆಲ್ಲ ಒಟ್ಟಿಗಿದ್ದವರೇ'', ಎಂಬ ಶಂಕೆ ಅವರಲ್ಲೇ ಮೂಡಲು ಬಹಳ ಕಾಲ ಹಿಡಿಯಲಿಲ್ಲ.

ಹಿಂದಿನ ರಿವಾಜುಗಳು ಒಮ್ಮೆಲೇ ಮಾಯವಾದುವು: ಚರ್ಚಿನ ಹಿಡಿತವಾಗಲಿ, ರಾಜನ ಆಜ್ಞೆಯಾಗಲಿ ಹೊಸ ಯುಗದ ನಡೆಯನ್ನು ತಡೆಯುವಂತಿರಲಿಲ್ಲ. ಸಾಮೂಹಿಕ ಪ್ರಜ್ಞೆಯು ಸಡಿಲಗೊಂಡು ವ್ಯವಸ್ಥೆಯ ಸೂತ್ರಗಳಲ್ಲಿ ಹೊಸ ಮಾದರಿಗಳು ಚಾಲನೆಗೊಂಡವು. ಹದಿನಾರನೆಯ ಶತಮಾನದಲ್ಲಿ ಒಂದು ಹೇಳಿಕೆ ಇತ್ತು: ''ಧರ್ಮಾಧೀಶರ ಕರ್ತವ್ಯ ಸುಮ್ಮನೆ ಧರ್ಮಗ್ರಂಥಗಳನ್ನು ಬೋಧಿಸುವುದಲ್ಲ ಅಥವಾ ಏನೇನೋ ಧಾರ್ಮಿಕ ಕ್ರಿಯೆಗಳನ್ನು ಮಾಡಿಸುವುದಲ್ಲ. ಕಾನೂನಿಗಿಂತಲೂ ಶ್ರೇಷ್ಠವಾದದ್ದು ಆ ಭಗವಂತನಾದ ಯೇಸು ಕ್ರಿಸ್ತನ ನುಡಿ. ಅದಕ್ಕೆ ಅನುಗುಣವಾದ ವರ್ತನೆಯನ್ನು ತರುವುದು ನಮ್ಮ ಜವಾಬ್ದಾರಿ.'' ಆ ವರ್ತನೆಗೆ ವಿರೋಧವಾಗಿ ನಡೆದುಕೊಂಡವರನ್ನು ಪಂಥದಿಂದ ಹೊರದಬ್ಬುವ ಪ್ರಕ್ರಿಯೆ ಸಹ ಚಾಲ್ತಿಯಲ್ಲಿತ್ತು.

ಮೊದಲಿಗೆ ಆರ್ಥಿಕ ಸಂಬಂಧಗಳು ಸಹ ಮತಧರ್ಮದ ಕಟ್ಟುಪಾಡುಗಳ ಪರಿಧಿಗೆ ಸೇರಿದ್ದುವು. ನೈತಿಕ ನಡೆವಳಿಕೆಯಲ್ಲಿ ಇದೂ ಸೇರಿತ್ತಾದರೂ ಭೂಮಾಲಿಕರ ದೌರ್ಜನ್ಯಗಳನ್ನು ಅದು ನಿಗ್ರಹಿಸಲು ಸಮರ್ಥವಾಗಲಿಲ್ಲ. ಯೇಸು ಸ್ವಾಮಿಯು ಭೂರಹಿತರಿಗೆ ಒಂದು ರೀತಿಯ ಸಂದೇಶ ನೀಡಿದ್ದರೆ, ಭೂಮಾಲಿಕರಿಗೆ ಬೇರೆಯೇ ಒಂದು ಸಂದೇಶ ನೀಡಿದ್ದನೆಂಬಂತೆ ಸಾಮಾಜಿಕ ಸಂಬಂಧಗಳು ರೂಪುಗೊಂಡಿದ್ದವು. ಒಬ್ಬನೇ ವೆಂಕಟೇಶ್ವರನು ತಿರುಪತಿಯಲ್ಲಿ ಷೇರುಪೇಟೆಯ ಅಧಿಪತಿಗೆ ಹಾಗೂ ನಿರುದ್ಯೋಗಿ ಭಕ್ತನಿಗೆ ಇಂದಿಗೂ 'ಸಾಂತ್ವನ' ನೀಡುತ್ತಿರುವುದನ್ನು ನೋಡಿದರೆ ಇದು ಸುಲಭವಾಗಿ ಅರ್ಥವಾಗುತ್ತದೆ. ಒಬ್ಬನ ವಹಿವಾಟಿಗೆ ಆಶೀರ್ವಾದ ನೀಡುವ ಸಪ್ತಗಿರಿನಿವಾಸಿಯು ಇನ್ನೊಬ್ಬನ ಆಸೆಯನ್ನು ಚಿಗುರಿಸುವುದರಲ್ಲೂ ನಿರತನಾಗಿದ್ದಾನೆ. ಏಡುಕೊಂಡಲ ಸ್ವಾಮಿಯ ಈ ವಿಚಿತ್ರ ವೈರುಧ್ಯವು ಮಾರುಕಟ್ಟೆಯ ವಂಚಕನನ್ನು ಬಾಧಿಸುವುದಿಲ್ಲ; ಅಂತೆಯೇ ಅತಂತ್ರದಲ್ಲಿರುವ ಪರಮಭಕ್ತನೂ ಪ್ರಶ್ನಿಸುವುದಿಲ್ಲ. ಇಬ್ಬರಿಗೂ ಏಕಕಾಲದಲ್ಲಿ ಹೀಗೆ ಕೃಪೆ ತೋರಿಸುವ ಆ ತ್ರಿನಾಮಧಾರಿ ದೇವರು ನಿಜಕ್ಕೂ ಅಪ್ರತಿಮ ಸಾಹಸಿಯೇ ಸರಿ.

ಹದಿನೇಳು-ಹದಿನೆಂಟನೆಯ ಶತಮಾನಗಳಲ್ಲಿ ಬ್ರಿಟನ್ನಿನ ಕೆಲವು ಚಿಂತಕರು ಈ ಬಗೆಯ ವೈರುಧ್ಯವನ್ನು ಗಮನಿಸಿ ಮತಧರ್ಮದ ಸಂಸ್ಥೆಯ ಕಾರ್ಯನಿರ್ವಹಣಾ ತಂತ್ರದಲ್ಲಿ ಬದಲಾವಣೆಗಳನ್ನು ತರಬೇಕೆಂಬ ಉತ್ಸಾಹ ತೋರಿದ್ದರು. 'ಮಾನವ ಸಹಜ'ವಾದ ದಯೆಗೆ

ಸ್ಥಾನವಿಲ್ಲದ ಧರ್ಮ ಅದಾವುದಯ್ಯಾ, ಎಂಬ ಕಾಳಜಿ ಅವರದು. ಕ್ಯಾಲ್ವಿನ್ ಎಂಬುವನು ಇವರಲ್ಲಿ ಹೆಚ್ಚು ಪ್ರಸಿದ್ಧನಾಗಿದ್ದಾನೆ. ಆತನ ಶ್ರದ್ಧೆಯನ್ನು ಕಟಕಿಯಾಡಿದವರಿಗೇನೂ ಕಡಿಮೆಯಿರಲಿಲ್ಲ. ನ್ಯೂಸ್ಟಬ್ ಎಂಬುವವನು ಅವನಿಗೆ ಒಂದು ಪ್ರಶ್ನೆ ಹಾಕಿದ್ದನಂತೆ : ''ಹಾಗಾದರೆ ಲೇವಾದೇವಿ ಮಾಡುವವನನ್ನು ಮಾನವ ಸಮಾಜದಿಂದ ಹೊರ ಹಾಕಬೇಕೆಂಬುದು ನಿನ್ನ ದೇವರ ಅಪೇಕ್ಷೆಯೆ ?'' ಕ್ಯಾಲ್ವಿನ್ನನಂತೆ ಸಾಮಾಜಿಕ ಕಳಕಳಿಯನ್ನು ತೋರಿದ ಬ್ಯಾರೋ ಎಂಬುವವನು ಒಂದು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕ ಪದವಿಯನ್ನು ಕಳೆದುಕೊಳ್ಳಬೇಕಾಯಿತು. ಮಾರುಕಟ್ಟೆಯ ಕುತಂತ್ರಗಳು ದೇವರು ಮತ್ತು ಚರ್ಚ್ ಎರಡಕ್ಕೂ ಹೀನಾಯವಾದ ಮುಖ ತೋರಿಸುತ್ತಾರಾದ್ದರಿಂದ ಅವರನ್ನು ಧರ್ಮ ಸಂಸ್ಥೆಯ ಆಚೆಗಿಟ್ಟಿರಬೇಕು. ಪ್ರಾಯೋಗಿಕವಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವತನಕ ಅವರನ್ನು ಮತ್ತೆ ಒಳಕ್ಕೆ ಬಿಟ್ಟುಕೊಳ್ಳಬಾರದೆಂದು ಕಾರ್ಟ್‌ರೈಟ್ ಎಂಬಾತ ಕಠಿಣವಾಗಿ ಉದ್ಗರಿಸಿದ್ದನಂತೆ. ಈ ಸಂಬಂಧವಾಗಿ, ಎಂತಹ ನಡತೆ ಶ್ರೇಯಸ್ಕರವೆಂಬ ಮಾರ್ಗದರ್ಶಿ ಗ್ರಂಥವನ್ನು ಏಮಿಸ್ ಎಂಬುವವನು ಬರೆದು ಅಪಖ್ಯಾತಿಗೆ ಗುರಿಯಾದ. ಅಂದಿನ ಲಂಡನ್ನಿನ ಬಿಷಪ್ ಏಮಿಸ್‌ಗೆ ಚರ್ಚಿನಲ್ಲಿ ಬೋಧಿಸುವ ಅವಕಾಶವನ್ನು ರದ್ದುಗೊಳಿಸಿ ಯೇಸುಸ್ವಾಮಿಯ ಭಯಂಕರ ರಕ್ಷಕನಾದ ! ಪಾಪ, ಏಮಿಸ್ ಹಾಲೆಂಡಿಗೆ ತೆರಳಿ ಅಲ್ಲೊಂದು ವಿಶ್ವವಿದ್ಯಾನಿಲಯದಲ್ಲಿ ದೇವತಾಶಾಸ್ತ್ರದ ಪ್ರಾಧ್ಯಾಪಕನಾಗಿ ಇಪ್ಪತ್ತು ವರ್ಷ ಕಳೆದ. ಆದರಿಂದ ಯೇಸುವಿನ ಬೋಧನೆಗೆ ಎಷ್ಟರಮಟ್ಟಿನ ಅಂತಸತ್ವ ದೊರೆಯಿತೆಂಬುದು ಬೇರೆಯೇ ಪ್ರಶ್ನೆ. ತಿರುಪತಿಯ ಬೆಟ್ಟದ ಮೇಲಿನ ಕೃತ್ಯಗಳನ್ನು ತಪ್ಪಿಸುವ ಶಕ್ತಿ ಇಲ್ಲದ ತತ್ತ್ವಶಾಸ್ತ್ರ ಪ್ರಾಧ್ಯಾಪಕನೊಬ್ಬ ಬೆಟ್ಟದ ತಪ್ಪಲಿನ ವಿಶ್ವವಿದ್ಯಾನಿಲಯದಲ್ಲಿ ರಾಮಾನುಜಾಚಾರ್ಯರ ಸಮಾಜ ತತ್ತ್ವವನ್ನು ಬೋಧಿಸಿ ತೃಪ್ತಿ ಪಡೆಯುವುದಕ್ಕಿಂತಲೂ ಭಿನ್ನವಾದ ಮಾದರಿ ಇದಲ್ಲವೆನ್ನಬಹುದು. ಬಂಡವಾಳದ ಶೇಖರಣೆಯಲ್ಲಿ ತೊಡಗಿದ್ದವರನ್ನು ಬದಲಾಯಿಸುವುದು ಆಗದ ಮಾತೆಂದು ತಿಳಿದ ಏಮಿಸ್ ಕ್ರಮೇಣ ಧರ್ಮಗ್ರಂಥಗಳ ಅರ್ಥವನ್ನು ಬೇರೆ ರೀತಿಯಲ್ಲಿ ಗ್ರಹಿಸಲು ಮುಂದಾದ. ಬಡ್ಡಿಯನ್ನು ಪಡೆಯುವುದು ಸರಿಯಲ್ಲವೆಂಬ ಧರ್ಮಗ್ರಂಥದ ಮಾತನ್ನು ''ಕಷ್ಟದಲ್ಲಿ ಸಿಲುಕಿರುವವರಿಂದ ಬಡ್ಡಿ ಪಡೆಯುವುದು ಸೂಕ್ತವಲ್ಲ'', ಎಂದು ವ್ಯಾಖ್ಯಾನಿಸಿದ. ''ಯಾವನು ಹಣವನ್ನು ಹೂಡಿದ್ದಾನೋ ಅವನು ದೇವರು ಕರುಣಿಸುವಷ್ಟು ಲಾಭವನ್ನು ಮಾತ್ರವೇ ತನಗಾಗಿ ಇರಿಸಿಕೊಳ್ಳುವುದು ಒಳಿತು'' ಎಂಬ ಸೂತ್ರವೂ ಅವನದೇ. ಇದಕ್ಕೆ ಒಂದು ಶತಮಾನದ ಹಿಂದೆ ಸ್ಯಾಲಿಸ್‌ಬರಿ ಪಟ್ಟಣದ ಪುರಸಭಾಧ್ಯಕ್ಷನು ವಿಲ್ಟ್‌ಶೈರ್‌ನ ನ್ಯಾಯಾಧೀಶನಿಗೆ ಮನವಿಯನ್ನು ಸಲ್ಲಿಸಿ ಆಗ್ಗೆ ನಡೆಸಲಾಗುತ್ತಿದ್ದ ನಿರ್ವಸಿತರ ಅನ್ನದಾನ ಶಿಬಿರವನ್ನು ಮುಚ್ಚಿಸಿದ್ದನಂತೆ. ಅವನ ಮನವಿ ಭಾಗಶಃ ಹೀಗಿದ್ದಿತು : ''ದೇವರು ನಿಮ್ಮನ್ನು ಈ ಅಧಿಕಾರದಲ್ಲಿರಿಸಿದ್ದಾನೆ ಮತ್ತು ಅವನ ನಂಬುಗೆಯನ್ನು ಉಳಿಸಿಕೊಳ್ಳಬೇಕಾದ್ದು ನಿಮ್ಮ ಕರ್ತವ್ಯ. ನೀವೇನೂ ಶಾಶ್ವತವಾಗಿ ಉಳಿಯುವವರಲ್ಲ. ಇಂದು ಉಸಿರಾಡುತ್ತಿದ್ದೀರಿ, ನಾಳೆ ಇಲ್ಲವಾಗುತ್ತೀರಿ. ಆದ್ದರಿಂದ ನಿಮ್ಮ ಯತ್ನಗಳನ್ನು ಇಮ್ಮಡಿಗೊಳಿಸಿ ಒಳ್ಳೆಯತನವನ್ನು ಸ್ಥಿರಗೊಳಿಸಿ. ಇಂದು ನೀವೇನಾದರೂ ಆಲಸ್ಯದಿಂದ ನಿಮ್ಮ ಜವಾಬ್ದಾರಿಯನ್ನು ನಿರ್ವಹಿಸದಿದ್ದರೆ ಸಾವಿನ ಕ್ಷಣಗಳು ಅದೆಷ್ಟು ಘೋರವಾಗಿರಬಹುದೆಂಬುದನ್ನು ಊಹಿಸಿ. ಒಬ್ಬ ಸೋಮಾರಿ ಸೇವಕನಿಗೆ ಯಾವ ಪ್ರತಿಫಲ ಸರಿಯಾದದ್ದು ? ಭಗವಂತನ ಸನಿಹದಿಂದ ಸದಾಕಾಲಕ್ಕೂ ಅವನನ್ನು ಬಹಿಷ್ಕರಿಸಿ ಶಿಕ್ಷೆ ವಿಧಿಸಬೇಕಾದ್ದು ನ್ಯಾಯವಲ್ಲವೆ ?''

ಧರ್ಮಸಂಸ್ಥೆಯ ದ್ವಂದ್ವ ಅವಿರತವಾಗಿ ನಡೆದುಬಂದಿರುವ ಅಂಶವೆಂಬುದಕ್ಕೆ ಇದೊಂದು ನಿದರ್ಶನ. ಅಷ್ಟೆ. ಸ್ಯಾಲಿಸ್‌ಬರಿ ಪುರಸಭಾಧ್ಯಕ್ಷನಂತೆ ಇಂದು ಬಹುರಾಷ್ಟ್ರೀಯ ಕಂಪೆನಿಯೊಂದರ ನಿರ್ದೇಶಕನು ನಮ್ಮ ನ್ಯಾಯಾಲಯಗಳಿಗೆ ಮನವಿ ಸಲ್ಲಿಸಿದರೆ ನಾವೇನೂ ಅಚ್ಚರಿಪಡಬೇಕಾಗಿಲ್ಲ. ಯಾವುದು ನ್ಯಾಯ ಎಂಬುದನ್ನು ಆ ನಿರ್ದೇಶಕ ತೀರ್ಮಾನಿಸುತ್ತಾನೆ ಮತ್ತು ಅವನಿಗೆ ನ್ಯಾಯಾಲಯದ ಬೆಂಬಲ ದೊರೆತರೂ ದೊರೆಯಬಹುದು. ಆದರೆ 'ಸೇವಕ' ಮಾತ್ರ ದೂರಬಾರದು, ಅದು ಭಗವಂತನ ಇಚ್ಛೆ ಕೂಡ ! ಒಂದು ಕಡೆ ನೈತಿಕತೆಯನ್ನು ಪೋಷಿಸುವುದಕ್ಕಾಗಿಯೇ ಇರುವ ಅಧಿಕೃತ ಶ್ರೇಷ್ಠ ಸಂಸ್ಥೆಯೆಂಬ ಹೆಸರು ಧರ್ಮಸಂಸ್ಥೆಗೆ; ಇನ್ನೊಂದು ಕಡೆ ಅದರ ಆಶ್ರಯದಲ್ಲೇ ಪಟಿಂಗತನದ ಪ್ರದರ್ಶನಕ್ಕೆ ಕುಮ್ಮಕ್ಕು. ಯೇಸುವಿನ ಹೆಸರಿನಲ್ಲಿ ಅಸ್ತಿತ್ವಕ್ಕೆ ಬಂದಿರುವ ಸಂಸ್ಥೆಯ ಈ ಅಪಯಶಸ್ಸು ಬೇರೆ ಧರ್ಮಸಂಸ್ಥೆಗಳಿಗೂ ಅನ್ವಯವಾಗುತ್ತದೆ. ಎಲ್ಲಿ ಧರ್ಮಸಂಸ್ಥೆಯು ಸೋತಿತೋ ಅಲ್ಲಿ ಸಾಮಾಜಿಕ ಪ್ರಜ್ಞೆಯ ವಕ್ತಾರರು ಸ್ವಲ್ಪಮಟ್ಟಿನ ಯಶಸ್ಸನ್ನು ಗಳಿಸಿಕೊಂಡರು. ಅವರು ಅನುಸರಿಸಿದ್ದು ಮತಧರ್ಮದ ಜಾಡನ್ನಲ್ಲ, ಸಾಮುದಾಯಿಕ ಸಂಘಟನೆಯ ಜಾಡು. ಧರ್ಮಸಂಸ್ಥೆಯ ಬದಲು ಪ್ರಭುತ್ವದ ಯಂತ್ರವನ್ನು ಬಳಸಲು ಅವರು ಮುಂದಾದರು. ''ಚಾರ್ಟಿಸ್ಟ್'' ಎಂದು ಮುಂದೆ ಪ್ರಖ್ಯಾತರಾದವರು ಅಹವಾಲು ಸಲ್ಲಿಸಿದ್ದು ಪಾರ್ಲಿಮೆಂಟಿಗೇ ಹೊರತು ಪೋಪನಿಗಲ್ಲ. ಅವರು ಒಂಟೊಂಟಿಯಾಗಿ ನಿವೇದನೆ ಸಲ್ಲಿಸಲಿಲ್ಲ. ಸಂಘಟನೆಯಡಿ ಒಂದಾಗಿ ಹಾಗೆ ಮಾಡಿದರು. ವಿಲಿಯಂ ಲೋವೆಟ್‌ನ ನೇತೃತ್ವದಲ್ಲಿ ಸಿದ್ಧಗೊಳಿಸಲಾದ ೧೮೩೭ರ ಪ್ರಸಿದ್ಧ ಪತ್ರಿಕೆಯ ಒಂದು ಭಾಗವನ್ನು ಗಮನಿಸಬಹುದು:

''ಸಮಾಜದ ಸಂಸ್ಥೆ ಮತ್ತು ಕಾನೂನುಗಳಿಗೆ ಇರುವ ಒಂದೇ ತಾರ್ಕಿಕ ಪ್ರಯೋಜನವೆಂದರೆ ಇಡೀ ಜನಸಮುದಾಯದ ಸುಖಕ್ಕೆ ತಕ್ಕುದಾದ ರಕ್ಷಣೆ, ಪ್ರೇರಣೆ ಮತ್ತು ಬೆಂಬಲ ನೀಡುವುದೇ ಆಗಿದೆ. ಇದರ ಗುರಿ ಪರಸ್ಪರ ಪ್ರಯೋಜನ ಆಗಿರುವುದರಿಂದ ಎಲ್ಲ ಕಾನೂನುಗಳೂ ಪರಸ್ಪರ ಸಮ್ಮತಿಯಿಂದ ಮೂಡಿಬರಬೇಕು. ಕಾನೂನುಗಳಿಗೆ ವಿಧೇಯರಾಗಿರುವಂತೆ ಇರಬೇಕಾದರೆ ಮೊದಲು ಯಾರಿಂದ ಇದನ್ನು ನಿರೀಕ್ಷಿಸುತ್ತೇವೋ ಅವರು ನೇರವಾಗಿ ಇಲ್ಲವೆ ಅವರ ಪ್ರತಿನಿಧಿಗಳ ಮೂಲಕ ಕಾನೂನು ಮಾಡುವ, ತಿದ್ದುವ ಮತ್ತು ತೆಗೆದುಹಾಕುವ ಅಧಿಕಾರ ಹೊಂದಿರಬೇಕು. ಇಂತಹ ರಾಜಕೀಯ ಅಧಿಕಾರದಿಂದ ವಂಚಿತರಾಗಿರುವವರ ಮೇಲೆ ಕಾನೂನು ಹೇರುವುದೆಂದರೆ ಅದು ನ್ಯಾಯಸಮ್ಮತವಲ್ಲ; ಅದು ದಬ್ಬಾಳಿಕೆಯ ಕ್ರೌರ್ಯ ಎನಿಸುತ್ತದೆ..... ಪ್ರತಿಯೊಬ್ಬ ಮಾನವಜೀವಿಗೂ ಸಾರ್ವತ್ರಿಕ ರಾಜಕೀಯ ಹಕ್ಕೊಂದು ಇದೆ ; ಅದು ಎಲ್ಲ ಸಂಪ್ರದಾಯ, ಪ್ರಾಚೀನ ನಡೆವಳಿಕೆ ಮತ್ತು ಪದ್ಧತಿಗಳಿಂದಲೂ ಭಿನ್ನವಾದ್ದು, ಶ್ರೇಷ್ಠವಾದ್ದು. ಆ ಮೂಲಭೂತ ಹಕ್ಕನ್ನು ಯಾರೂ ಯಾರಿಗೂ ದಾನ ಮಾಡುವಂಥದಲ್ಲ ಅಥವಾ ಯಾರೂ ಯಾರಿಂದಲೂ ಕಿತ್ತುಕೊಳ್ಳುವಂಥದಲ್ಲ. ಒಬ್ಬ ವ್ಯಕ್ತಿಯಿಂದ ಈ ಅಮೂಲ್ಯ ಹಕ್ಕನ್ನು ಕಿತ್ತುಕೊಂಡು ಅದನ್ನು ಒಂದು ಆಸ್ತಿಗೆ ವರ್ಗಾಯಿಸಿ ಅದಕ್ಕೆ ಪ್ರಾಥಮ್ಯ ನೀಡುವುದು ನ್ಯಾಯ ಮತ್ತು ಸಾಮಾನ್ಯ ಪ್ರಜ್ಞೆಯ ವಿಕೃತ ಸ್ವರೂಪವಾಗುತ್ತದೆ.''

ಮತಧರ್ಮದಿಂದ ಧರ್ಮನಿರಪೇಕ್ಷತೆಯತ್ತ ಕ್ರಮಿಸಿರುವುದು ಈ ಪ್ರಕ್ರಿಯೆಯಲ್ಲಿ ಸ್ಪಷ್ಟವಾಗಿ ಗಮನಕ್ಕೆ ಬರುತ್ತದೆ. ಸಾಮಾಜಿಕ ಆರ್ಥಿಕ ಕಿರುಕುಳಗಳನ್ನು ವಿರೋಧಿಸಿ ಜನಜಾಗೃತಿಗಾಗಿ ನವಚೈತನ್ಯ ಮೂಡಿಸಿದ ಯೇಸುವಿನ ಆಶಯವನ್ನು ಭಗ್ನಗೊಳಿಸಿದ ಧರ್ಮಸಂಸ್ಥೆಯಿಂದ ಸಿಡಿದೆದ್ದವರು ಧರ್ಮನಿರಪೇಕ್ಷತೆಯ ಆಧಾರದಲ್ಲಿ ಸಾಮುದಾಯಿಕ ಆಕಾಂಕ್ಷೆಗಳ ಈಡೇರಿಕೆಗೆ ಶ್ರಮಿಸಿದ್ದು ಚರಿತ್ರೆಯ ಪುಟಗಳಲ್ಲಿ ಕಾಣಸಿಗುವ ಒಂದು ಉತ್ತಮ ನಿದರ್ಶನ.

**(ಆರ್. ಎಚ್. ಟಾನಿಯ ಒಂದು ಪುಸ್ತಕದ ಕೆಲವು ಅಂಶಗಳು ಈ ಲೇಖನಕ್ಕೆ ಆಧಾರ ಒದಗಿಸಿವೆ. -ಲೇ.)**

---

*(೭ನೇ ಪುಟದಿಂದ)* ***ನಿಪ್ಪಾಣಿ ಎಂಬ ನರಕ ಕೂಪದೊಳಗೆ.....***

ಹೆಂಗಸರಿಗೂ ಕಡ್ಡಾಯ. ಕಾಯ್ದೆ ದೃಷ್ಟಿಯಿಂದ ಇದು ಗುನ್ಹೆಯಾಗಿದ್ದರೂ 'ರಾತ್ರಿ ಪಾಳಿ' ನಡೆಸಲಾಗುತ್ತದೆ. ಎಷ್ಟೋ ಕಡೇ ಇಡೀ ರಾತ್ರಿ ದುಡಿಮೆ. ಮಜೂರಿ ಮಾತ್ರ ಅಷ್ಟಕ್ಕಷ್ಟೇ.

ತಂಬಾಕು ಬೆಳೆಯುವ ರೈತರೂ ಸಾಕಷ್ಟು ಶೋಷಣೆಗೊಳಗಾಗುತ್ತಾರೆ. ಹಲವು 'ಸೂಟು' ಬಿಡುವ ಹೆಸರಿನಲ್ಲಿ ಹಣವನ್ನು 'ಕಟ್' ಮಾಡಿ ವ್ಯಾಪಾರಿಗಳು 'ಗಬ್ಬರ್' ಆದ ಉದಾಹರಣೆಗಳಿವೆ. 'ಬಾರದಾನ ಸೂಟ್', 'ಗಾಡಿ ಸೂಟ್', 'ಕಾಡಿ ಸೂಟ್', 'ಮಣ್ಣಿನ ಸೂಟ್'- ಒಂದೇ ಎರಡೇ. ರೈತರಿಗೆ ನೀಡುವ ಹಣದಲ್ಲೂ 'ಕಂತಿನ ಪದ್ಧತಿ', ವರ್ಷ ಎರಡು ವರ್ಷಗಳ ಅವಧಿಯಲ್ಲಿ ಹಣ ನೀಡುವ ಪದ್ಧತಿಯೂ ಇದೆ.

ವ್ಯಾಪಾರಿಗಳಿಗೂ, ರಾಜಕಾರಣಿಗಳಿಗೂ ಕನಿಷ್ಠ ಸಂಬಂಧವೂ ಇದೆ. ಪರಿಣಾಮ ಯಾವ ರೀತಿಯ ತಕರಾರೂ, ಕಂಪ್ಲೆಂಟು ನಡೆಯುವುದಿಲ್ಲ. ಇದರಲ್ಲಿ ಕಾನೂನು ಪಾಲಕರೂ ಶಾಮೀಲಾಗಿರುತ್ತಾರೆ.

ಒಟ್ಟಿನಲ್ಲಿ ಕೋಟ್ಯಾವಧಿ ಹಣದ ಚಲಾವಣೆ ನಡೆವ ನಿಪ್ಪಾಣಿಯಲ್ಲಿ ತಂಬಾಕು ವಖಾರಿಯ ಕಾರ್ಮಿಕರಿಗೆ, ಬೀಡಿ ಕಾರ್ಮಿಕರಿಗೆ, ತಂಬಾಕು ಬೆಳೆವ ರೈತಾಪಿ ಜನಕ್ಕೆ ಸಮಾಧಾನಕರವಾದ ಆದಾಯ ಸಿಗುವುದು ಸದ್ಯಕ್ಕಂತೂ ಕನಸಿನ ಮಾತಾಗಿದೆ. ವ್ಯಾಪಾರಿಗಳು ಮಾತ್ರ ದಿನದಿಂದ ದಿನಕ್ಕೆ ಕುಬೇರರಾಗುತ್ತಿದ್ದಾರೆ.

**ಚಂದ್ರಕಾಂತ ಪೋಕಳೆ**
ಬಿ. ಎಸ್. ಪಿ. ಯು ಕಾಲೇಜು, ಬೇಡಕಿಹಾಳ - ೫೯೧೨೧೪, ಜ. ಬೆಳಗಾವಿ




ನಿಮ್ಮ ಮಗ ನಿಮಗೆ ಗೌರವ ಕೊಡುವುದಿಲ್ಲ ಎಂಬ ಕೊರಗು ನಿಮ್ಮನ್ನು ಕಿತ್ತು ತಿನ್ನುತ್ತಿದೆ ಎಂಬುದನ್ನು ನಾನು ಬಲ್ಲೆ. ವೃದ್ಧಾಪ್ಯದಲ್ಲಿ ಓರ್ವ ತಂದೆ ಬಯಸುವುದು ತನ್ನ ಮಕ್ಕಳಿಂದ ಪ್ರೀತಿ, ಗೌರವ, ಸ್ನೇಹ, ಆರೈಕೆಯನ್ನು. ನಿಮಗೆ ಇರುವವನು ಒಬ್ಬನೇ ಮಗ. ಅವನಿಂದ ನೀವು ಇವುಗಳನ್ನೆಲ್ಲ ನಿರೀಕ್ಷಿಸುವುದು ಸಹಜ. ಈ ವೃದ್ಧಾಪ್ಯವೇ ಅಂತಹದ್ದು. ಬೇರೊಬ್ಬರಿಗೆ ನೀಡಲು ಏನೂ ಇಲ್ಲದ ಕಾಲ ಇದು. ಮೈಯಲ್ಲಿ ಶಕ್ತಿ ಇರುವುದಿಲ್ಲ. ಮನಸ್ಸಿನಲ್ಲಿ ಉತ್ಸಾಹ ವಿರುವುದಿಲ್ಲ. ಅಧಿಕಾರ ಚಲಾಯಿಸಲು ಆಗುವುದಿಲ್ಲ. ಗುರುತು ಪರಿಚಯದವರೆಲ್ಲ ಮರೆಯಾಗಿಹೋಗಿರುತ್ತಾರೆ. ಜನರೇಷನ್ ಗ್ಯಾಪ್ ಎಂಬುದು ಪದೇ ಪದೇ ನೆನಪಿಗೆ ಬಂದು ಒಂದು ಕಡೆಯಿಂದ ಛೇಡಿಸುತ್ತಿರುತ್ತದೆ. ಆಗ ಮಕ್ಕಳು ಮೊಮ್ಮಕ್ಕಳು ಬಂದು ಮಾತನಾಡಿಸಿದರೆ, ಏನಾದರೂ ಸಲಹೆ ಕೇಳಿದರೆ, ಬೆಲೆ ಕೊಟ್ಟು ಮಾತನಾಡಿಸಿದರೆ ಅಷ್ಟೇ ಸಾಕೆನಿಸುತ್ತದೆ. ಈ ಕೊರತೆಯನ್ನು ಒಬ್ಬರಲ್ಲಾ ಒಬ್ಬರು ಮಕ್ಕಳು ತುಂಬಿ ಕೊಡಬಹುದು ಅನ್ನುವುದಕ್ಕೆ ನಿಮಗೆ ಇರುವವನು ಒಬ್ಬನೇ ಮಗ. ಇವನ ಮದುವೆ ಇದೇ ಆಗಿರುವುದರಿಂದ ನಿಮಗಿನ್ನೂ ಮೊಮ್ಮಗ ಬರಲು, ಅವನು ಹುಟ್ಟಿ ಮಾತನಾಡು ವಂತಾಗಲು ಕಾಲ ಬೇಕು. ಹೀಗಾಗಿ ಇರುವ ಮಗ ಕೂಡ ಸರಿಯಾಗಿ ನೋಡಿಕೊಳ್ಳುತ್ತಿಲ್ಲ ಎಂಬ ಚಿಂತೆಗೆ ತಲೆಕೊಟ್ಟು ನೀವು ಕುಳಿತಿದ್ದೀರಿ.

ನಾನಂತೂ ನಿಮ್ಮ ಜತೆ ಇರಬೇಕು. ಇದ್ದೇನೆ. ಇದು ಅನಿವಾರ್ಯ ಕೂಡ. ಸುಮಾರು ನಲವತ್ತು ವರ್ಷಗಳ ದಾಂಪತ್ಯ ನಮ್ಮದು. ಅಂದರೆ ಇಷ್ಟು ವರ್ಷಗಳವರೆಗೆ ನಾವು ಒಟ್ಟಾಗಿಯೇ ಬದುಕಿದ್ದೇವೆ. ಈ ಬಗ್ಗೆ ವಿಚಾರ ಮಾಡಿದಾಗ ನನಗೆ ಅಚ್ಚರಿಯಾಗುತ್ತದೆ. ಹೌದೆ? ಎಂದು ನನ್ನನ್ನು ನಾನೇ ಕೇಳಿಕೊಳ್ಳುತ್ತೇನೆ. ನಮ್ಮ ಸುತ್ತ ಮುತ್ತ ಇರುವ ಎಲ್ಲ ಗಂಡ ಹೆಂಡಿರೂ ಹೀಗೇ ಬದುಕುತ್ತಾರೇನೋ ಎಂದೆನಿಸುತ್ತದೆ ಕೂಡ.

ಲೋಕೋಪಯೋಗಿ ಇಲಾಖೆಯಲ್ಲಿ ಕಿರಿಯ ಇಂಜಿನಿಯರ್ ಆಗಿದ್ದ ನೀವು ಮದುವೆಯಾದ ಏಳೆಂಟು ವರ್ಷಕ್ಕೆ ಸಹಾಯಕ ಇಂಜಿನಿಯರ್ ಆದಿರಿ. ನಂತರ ಎರಡು ಬಡ್ತಿಗಳು ನಿಮಗೆ ದೊರೆತವು. ನಿಮಗೆ ನಿವೃತ್ತಿಯಾಗುವಾಗ ನೀವು ಕಾರ್ಯನಿರ್ವಾಹಕ ಇಂಜಿನಿಯರ್. ಒಂದು ತಾಲ್ಲೂಕಿನ ಧಣಿ. ಮನೆಯ ಮುಂದೆ ಸದಾ ಬಿಳಿಯ ಕಾರು ನಿಂತಿರುತಿತ್ತು. ಅಧಿಕಾರಿಗಳು, ಗುತ್ತಿಗೆದಾರರು ಬಂದುಹೋಗುತ್ತಿದ್ದರು. ನಿಮಗೆ ತುಂಬಾ ಮರ್ಯಾದೆ. ನಿಮ್ಮನ್ನು ಕಂಡರೆ ಹಲವರಿಗೆ ಭೀತಿ ಕೂಡ.

ಮನೆಯಲ್ಲಿಯ ದೂರವಾಣಿ ಟಿಂಟಿಣಿಸಿದಾಗಲೆಲ್ಲ ನಾನೇ ಎತ್ತಿಕೊಳ್ಳುತ್ತಿದ್ದೆ.

'ಸಾಹೇಬ್ರು ಇದಾರೆಯೆ?'

ಎಂದು ನಡುಗುತ್ತ ಕೇಳುತ್ತಿದ್ದರು ಆ ತುದಿಯಲ್ಲಿ ಇದ್ದವರು. ನಿಮ್ಮ ಜರ್ಬು ದರ್ಪ ಕಂಡು ನಾನೂ ತಲೆದೂಗಿದ್ದುಂಟು. ಹಗಲೆಲ್ಲ ಸೈಟು ವರ್ಕು ಎಂದು ತಿರುಗಾಡುತ್ತಿದ್ದ ನೀವು ರಾತ್ರಿ ಎರಡು ಮೂರು ಟ್ರೇಗಳಲ್ಲಿ ತುಂಬಿಕೊಂಡ ಫೈಲುಗಳನ್ನು ಬಿಲ್ಲುಗಳನ್ನು ಅಳತೆ ಪುಸ್ತಕಗಳನ್ನು, ಅಂದಾಜು ಪಟ್ಟಿ, ಪ್ಲಾನು ನಕ್ಷೆಗಳನ್ನು ನೋಡಲು ಕೂರುತ್ತಿದ್ದಿರಿ. ಆಗಲೂ ನೌಕರರು ಗುತ್ತಿಗೆದಾರರು ನಿಮ್ಮ ಮುಂದೆ ಇರಬೇಕು.

ಏನೋ ಲೆಕ್ಕ ಸರಿ ಹೋಗಲಿಲ್ಲವೆಂದು, ಕೊಟ್ಟ ಹಣ ಸಾಲಲಿಲ್ಲವೆಂದು, ಬಾಕಿ ಉಳಿಸಿಕೊಂಡರೆಂದು, ನೀವು ಫೈಲುಗಳನ್ನು ಗುತ್ತಿಗೆದಾರರ ಬಿಲ್ಲುಗಳನ್ನು, ಅಳತೆ ಪುಸ್ತಕವನ್ನು ತೆಗೆದು ಎಸೆಯುತ್ತಿದ್ದಿರಿ.

ಗುತ್ತಿಗೆದಾರರು ನಿಮ್ಮ ಮುಂದೆ ನಿಂತು ಗೋಳಾಡುತ್ತಿದ್ದರು. 'ಸಾರ್'... ಇಷ್ಟಕ್ಕೆ ಮಾಡಿ ಕೊಡಿ, ಕಷ್ಟದಲ್ಲಿದೀನಿ ಎಂದು ಅಳುತ್ತಿದ್ದರು.

ನಿಮ್ಮ ಮನಸ್ಸು ಎಂದೂ ಕರಗುತ್ತಿರಲಿಲ್ಲ. ನಾನು ಯಾರ ಹತ್ರ ಗೋಳಾಡಲಿ? ನಾನು ಎಂ. ಎಲ್. ಎ.ಗೆ, ಎಂ. ಪಿ.ಗೆ ಕೊಡಬೇಕು. ಮೇಲಧಿಕಾರಿಗಳಿಗೆ ಸುರಿಬೇಕು. ವಿಧಾನ ಸೌಧದಲ್ಲಿ ಕೂತಿದಾರಲ್ಲ ತೋಳಗಳು, ಅವರಿಗೆ ತಿನ್ನಿಸಬೇಕು. ಹಣ ಕೊಡಿ ಮಾಡಿಸಿ ಕೊಂಡು ಹೋಗಿ ಅನ್ನುತ್ತಿದ್ದಿರಿ.

ನೀವು ಇಷ್ಟು ಬಿಗಿಯಾಗಿ ಇದ್ದುದರಿಂದ ನಾನು ಬ್ಯಾಂಕ್ ಲಾಕರಿನಲ್ಲಿ ಒಡವೆಯ ಜತೆ ಒಡವೆಗಳನ್ನು ಜೋಡಿಸುತ್ತ ಹೋದೆ. ಕಂಪನಿ ಶೇರುಗಳು, ಠೇವಣಿ ಪತ್ರಗಳು, ಬಂಗಾರದ ಬಿಸ್ಕೇಟುಗಳು ನೋಟಿನ ಕಂತೆಗಳನ್ನು ಸಂಗ್ರಹಿಸುತ್ತ ಹೋದೆ. ಮನೆ ಕಟ್ಟಿಸಿದ್ದು, ತೋಟ ಕೊಂಡದ್ದು, ಕಾರು ಕೊಂಡದ್ದು ಆಗಲೆ. ದಡ್ಡನಾಗಿದ್ದ ಮಗನಿಗೆ ಮೊದಲಿನಿಂದಲೂ ಡೊನೇಷನ್ ನೀಡಿಯೇ ಓದಿಸಿದ್ದಾಯಿತು. ಅವನನ್ನೂ ಇಂಜಿನಿಯರ್ ಮಾಡದಿದ್ದರೆ ನೀವು ಇಂಜಿನಿಯರ್ ಆಗಿದ್ದು ಸಾರ್ಥಕವಾಗಬೇಕಲ್ಲ. ಅವನಿಗೆ ಇಂಜಿನಿಯರಿಂಗ್ ಕಾಲೇಜಿನಲ್ಲಿ ಸೀಟು ದೊರಕಿಸಲು ಲಕ್ಷಾಂತರ ಸುರಿದಿರಿ. ನಂತರ ಬೇರೆ ಕಡೆ ಇರಿಸಿ ಅವನನ್ನು ಓದಿಸಿದಿರಿ. ಐದು ವರ್ಷಗಳಲ್ಲಿ ಮುಗಿಸಬೇಕಾದುದನ್ನು ಎಂಟು ವರ್ಷಗಳಲ್ಲಿ ಮುಗಿಸಿದ ಮಗ.

ಮಗನೂ ಇಂಜಿನಿಯರ್ ಆದ. ಅವನೂ ದುಡಿಯತೊಡಗಿದ. ಮಗ ಕೆಲಸಕ್ಕೆ ಸೇರಿಕೊಳ್ಳುತ್ತಿದ್ದಂತೆಯೇ ನೀವು ನಿವೃತ್ತರಾದಿರಿ.

ನಿಮ್ಮ ನಿವೃತ್ತಿಯ ನಂತರ ನೀವು ಚಲಾವಣೆ ಕಳೆದುಕೊಂಡ ನಾಣ್ಯವಾದಿರಿ. ಈ ಹಿಂದೆ ಮನೆಗೆ ಬರುತ್ತಿದ್ದ ಇಂಜಿನಿಯರ್‌ಗಳು ಬರುವುದನ್ನು ನಿಲ್ಲಿಸಿದರು. ಗುತ್ತಿಗೆದಾರರು ಮನೆಯತ್ತ ತಿರುಗಿ ನೋಡಲಿಲ್ಲ. ಸದಾ ಮನೆಯ ಬಳಿ ಬಿದ್ದಿರುತ್ತಿದ್ದ ದಿನ ಕೂಲಿ ನೌಕರರು ಕೂಡ ಅತ್ತ ಬಾರದಾದರು. ಮಗ ಕೂಡ-

''......ನಾನು ದೂರದಲ್ಲೇ ಇರತೀನಿ... ಅಪ್ಪ ಕೆಲಸ ಮಾಡಿದ ಕಡೆ ನಾನೂ ಕೆಲಸ ಮಾಡಿದರೆ ಜನ ಬೆಲೆ ಕೊಡಲ್ಲ'' ಎಂದು ಹೇಳಿ ದೂರದ ತುಮಕೂರಿಗೆ ವರ್ಗ ಮಾಡಿಕೊಂಡ. ಅವನನ್ನು ಇಲ್ಲಿಯೇ ಉಳಿಸಿಕೊಳ್ಳಲು ನೀವು ಏನೇನೋ ಪ್ರಯತ್ನ ಮಾಡಿದಿರಿ. ಅವನನ್ನೂ ಈ ವಿಷಯದಲ್ಲಿ ಒಲಿಸಿಕೊಳ್ಳಲು ನೋಡಿದಿರಿ. ನಿಮಗೆ ಚಿರಪರಿಚಿತರಾದ ಅಧಿಕಾರಿಗಳಿಗೂ ಹೇಳಿ ಅವನ ಪ್ರಯತ್ನ ಫಲಕಾರಿಯಾಗದ ಹಾಗೆ ನೋಡಿಕೊಂಡಿರಿ. ಆದರೆ ಈ ಯತ್ನದಲ್ಲಿ ನೀವು ಯಶಸ್ವಿಯಾಗಲಿಲ್ಲ. ನಿಮ್ಮ ಮಗ ತುಮಕೂರಿಗೆ ಹೊರಟುನಿಂತ. ನನಗೂ ಇದು ಕೆಡುಕೆನಿಸಿತು. ಇಂಜಿನಿಯರಿಂಗ್ ಓದುವಾಗ ಆತ ದೂರದಲ್ಲಿದ್ದ. ಈಗಲೂ ದೂರವಿರಬೇಕೆ?

''ಮಗೂ.....ನೀನು ನಮ್ಮ ಜತೆ ಇದ್ರೆ.....ನಮಗೆ ಸಂತೋಷವಾಗುತ್ತೆ.... ಅವರು ಕೂಡ ಹೀಗೇ ಹೇಳತಿದಾರೆ'' ಎಂದು ನಾನು ಕೂಡ ಮಗನಿಗೆ ಹೇಳಿನೋಡಿದೆ. ಆದರೆ ಅವನ ಉತ್ತರ ಬೇರೆಯೇ ಆಗಿತ್ತು.

''ನೋಡಮ್ಮ.... ಅಪ್ಪ ಇಲ್ಲಿ ಒಳ್ಳೆ ಹೆಸರು ತೊಕೊಂಡಿಲ್ಲ.... ನಮ್ಮ ಇಲಾಖೇಲಿ ಹಣ ಮಾಡದಿರೋರು ಯಾರೂ ಇಲ್ಲ.... ಆದರೆ ಅದಕ್ಕೂ ಒಂದು ಮಿತಿ ಇರಬೇಕು ಅಂತಾರೆ ಜನ.... ಈ ಮಿತೀನ ಮೀರಿದವರು ಅಪ್ಪ..... ಮಗ ಕೂಡ ತಂದೆ ಹಾಗೇನೆ ಅಂತ ಅವರು ತಿಳೀಬಾರದಲ್ಲ......ನಾನು ಸ್ವಲ್ಪ ದಿನ ದೂರ ಇರತೀನಿ...'' ಎಂದ ಆತ.

ಈ ವಿಷಯಾನ ನಾನು ನಿಮಗೆ ಹೇಳಿದಾಗ ನೀವು ನನ್ನ ಬೈಯ್ದಿರಿ.

''ಅವನನ್ನು ಕೆಡಿಸಿದೋಳೇ ನೀನು'' ಅಂದಿರಿ.

''ಅವನಿಗೆ ಸಲಿಗೆ ಕೊಟ್ಟು ದಡ್ಡನನ್ನಾಗಿ ಮಾಡಿದಿ....ಈಗ ಅವನಿಗೆ ಅಹಂಕಾರ ಬಂದಿದೆ. ಎಲ್ಲದಕ್ಕೂ ನೀನೇ ಕಾರಣ'' ಎಂದೆಲ್ಲ ಕೂಗಾಡಿದಿರಿ.

ಮಗ ದೂರ ಇದ್ದರೇನಂತೆ? ಮಗ ಅನ್ನುವ ವ್ಯಾಮೋಹ ಎಲ್ಲಿ ಹೋಗುತ್ತದೆ. ತಿಂಗಳಿಗೊಮ್ಮೆ ನಾವಿಬ್ಬರೂ ತುಮಕೂರಿಗೆ ಹೋಗಿಬರುವುದು ಪ್ರಾರಂಭವಾಯಿತು. ಎಂಟು ದಿನ ಇದ್ದು ಬರೋಣ ಎಂದು ಹೋದರೆ ನೀವು ಹೋದ ಮೂರನೇ ದಿನ-

''ಸಾಕು.....ಏಳು ಹೋಗೋಣ'' ಅನ್ನುತ್ತಿದ್ದಿರಿ.

''ಮತ್ತೆ ಎಂಟು ದಿನ ಇರೋಣ ಅಂದಿದ್ರಲ್ಲ!''

''ಹೌದು....ಇರಬೇಕು ಅಂತಾನೇ ಬಂದೆ...... ಆದರೆ ಯಾಕೋ ಇವನ ಗಂಟು ಮುಖ......ಮಾತು.... ಕುತ್ತಿಗೇನ ಹಿಸುಕಿದ ಹಾಗೆ ಆಗುತ್ತೆ....''

ಎಂದು ಹೇಳಿ ಅಲ್ಲಿಂದ ಹೊರಡುತ್ತಿದ್ದಿರಿ. ನಿಮ್ಮ ಹಿಂದೆ ನಾನು ಕೂಡ ಕಾರನ್ನು ಏರಬೇಕಾಗುತ್ತಿತ್ತು.

ಮಗ ತುಮಕೂರಿನಿಂದ ಇಲ್ಲಿಗೆ ಬರುತ್ತಿದ್ದ. ಬಂದವ ಒಂದು ದಿನ ಕೂಡ ಇರುತ್ತಿರಲಿಲ್ಲ.

''ಅಮ್ಮ ನಾನು ಹೊರಟೆ....ತುಂಬಾ ಕೆಲಸ ಇದೆ'' ಅನ್ನುತ್ತಿದ್ದ. ಬಂದ ಅನ್ನುವಾಗ

ತಿರುಗಿಹೋಗುತ್ತಿದ್ದ.

ನೀವು ಮಗನ ಹತ್ತಿರ ಮಾತನಾಡುವ ಯತ್ನ ಮಾಡುತ್ತಿದ್ದಿರಿ. ಅವನ ಕೆಲಸದ ಬಗ್ಗೆ, ಕಛೇರಿಯ ಬಗ್ಗೆ, ಅವನ ಮೇಲಧಿಕಾರಿಗಳ ಬಗ್ಗೆ ಅವನಲ್ಲಿ ಪ್ರಸ್ತಾಪಿಸಲು ನೀವು ಉತ್ಸುಕರಾಗಿರುತ್ತಿದ್ದಿರಿ. ಆದರೆ ಈ ಮಾತು ಎರಡು ಮೂರು ನಿಮಿಷಗಳಲ್ಲಿ ತುಂಡಾಗಿ ಬಿಡುತ್ತಿತ್ತು. ಮಗ ತೀರಾ ನಿರ್ಲಕ್ಷ್ಯದಿಂದ ನಿಮ್ಮ ಪ್ರಶ್ನೆಗಳಿಗೆ ಉತ್ತರ ನೀಡುತ್ತಿದ್ದ. ಇಲ್ಲವೆ ನೀವು ಬಂದು ಆತನ ಮುಂದೆ ನಿಂತ ತಕ್ಷಣ ಆತ ಎದ್ದು ಎಲ್ಲಿಗೋ ಹೊರಡುತ್ತಿದ್ದ.

''ಯಾಕೋ ಹೀಗೆ?'' ಎಂದು ನಾನೇ ಅವನನ್ನು ಕೇಳುತ್ತಿದ್ದೆ : ಆಗ

''ಅಯ್ಯೋ ಅವರ ಹತ್ರ ಏನು ಮಾತು ಬಿಡು....'' ಅನ್ನುತ್ತಿದ್ದ.

ಈ ಮಾತನ್ನು ನಾನು ನಿಮಗೆ ಹೇಳಿದಾಗ ನೀವು ನನ್ನನ್ನು ತುಂಬಾ ಕ್ರೂರವಾಗಿ ನೋಡುತ್ತಿದ್ದಿರಿ.

ಮಗನ ಮದುವೆಯಾಯಿತು. ಸೊಸೆ ಬಂದಳು. ಮನೆ ತುಂಬಿಸಿಕೊಂಡು, ಮೂರನೇ ದಿನವೇ ಅವಳನ್ನು ಮಗನ ಜತೆ ಕಳುಹಿಸಿಯೂ ಆಯಿತು. ಸೊಸೆ ಒಳ್ಳೆಯ ಹುಡುಗಿ.

'ಅವನು ಮಾತ್ರ ಯಾಕೆ ಹಾಗೆ ಆದ್ನೋ' ಎಂದು ನೀವು ಕೊರಗಿದಿರಿ.

ಈಗ ನಿಮ್ಮ ಕೊರಗು ಅಧಿಕವಾಗುತ್ತಿದೆ. ಮಗ ನನ್ನ ಹತ್ತಿರ ಚೆನ್ನಾಗಿರುತ್ತಾನೆ. ಆದರೆ ನಿಮ್ಮ ಹತ್ತಿರ ಅವನಿಗೆ ಒಡನಾಟವಿಲ್ಲ, ಪ್ರೀತಿ ಇಲ್ಲ. ಇದು ನಿಮ್ಮನ್ನು ಕಾಡುತ್ತದೆ.

ಹಿಂದೆ ಹೀಗಿರಲಿಲ್ಲ ಎಂದು ಹತ್ತಲ್ಲ ನೂರು ಸಾರಿ ನೀವು ಹೇಳುತ್ತೀರಿ.

ಹೌದು. ಚಿಕ್ಕಂದಿನಲ್ಲಿ ಅವನು ನಿಮ್ಮನ್ನು ತುಂಬಾ ಹಚ್ಚಿಕೊಂಡಿದ್ದ. ನೀವೂ ಅವನನ್ನು ಅಷ್ಟೇ ಪ್ರೀತಿ ಮಾಡುತ್ತಿದ್ದಿರಿ.

ನೀವೇ ಅವನನ್ನು ಮಲಗಿಸಬೇಕು.

ನೀವೇ ಅವನಿಗೆ ಸ್ನಾನ ಮಾಡಿಸಬೇಕು.

ಊಟ ಮಾಡಿಸಬೇಕು.

ಅವನು ಪಾಠ ಸರಿಯಾಗಿ ಒಪ್ಪಿಸಲಿಲ್ಲ ಎಂದು ನೀವು ಅವನನ್ನು ಬೈಯ್ದರೂ, ಹೊಡೆದರೂ ಆತ ಬೇಸರ ಮಾಡಿಕೊಳ್ಳುತ್ತಿರಲಿಲ್ಲ. ಮುಂದಿನ ಕ್ಷಣದಲ್ಲಿ 'ಅಪ್ಪಾ' ಎಂದು ನಿಮ್ಮ ಬಳಿ ಓಡಿ ಬರುತ್ತಿದ್ದ. ತಂದೆ ಮಗನ ಈ ಸ್ನೇಹ, ಪ್ರೀತಿ ನನಗೆ ಸಂತೋಷವನ್ನು ಉಂಟುಮಾಡುತ್ತಿತ್ತು.

ಆದರೆ ಅವನು ಇಂಜಿನಿಯರಿಂಗ್ ಓದಲು ಹೋದ ನಂತರ ಅವನಲ್ಲಿ ಕೆಲ ಬದಲಾವಣೆಗಳಾದವು. ಅದೂ ಆ ಕಾಲೇಜಿನಲ್ಲಿ ಮೊದಲ ಎರಡು ವರ್ಷಗಳನ್ನು ಅವನು ಕಳೆದ ನಂತರ ಈ ಬದಲಾವಣೆಗಳನ್ನು ನಾನು ಗಮನಿಸಿದೆ.

ಇಲ್ಲಿ ನಾನು ನಿಮಗೊಂದು ವಿಷಯ ಹೇಳಬೇಕು. ಅವಕಾಶ ಸಿಕ್ಕಾಗ ಇದನ್ನು ನಿಮಗೆ ಹೇಳಬೇಕು ಎಂಬ ಮನಸ್ಸು ನನಗೆ ಯಾವಾಗಲೋ ಇತ್ತು. ಈಗ ಹೇಳುತ್ತಿದ್ದೇನೆ.

ನಮ್ಮ ಮದುವೆಯಾದದ್ದು ತಡವಾಗಿ. ನಿಮಗೂ ಮದುವೆಯ ಸಂದರ್ಭದಲ್ಲಿ ವಯಸ್ಸಾಗಿತ್ತು. ನನಗೂ ಸಾಕಷ್ಟು ವರ್ಷಗಳು ಆಗಿದ್ದವು. ನಮ್ಮ ಮದುವೆಯಾಗಿ ಆರು-ಏಳು ವರ್ಷಗಳವರೆಗೆ ನಮಗೆ ಮಕ್ಕಳಾಗಲಿಲ್ಲ. ಈ ಬಗ್ಗೆ ನೀವು ಯಾವತ್ತೂ ವಿಚಾರ ಮಾಡಲಿಲ್ಲ, ಯೋಚಿಸಲು ಹೋಗಲಿಲ್ಲ. ಆದರೆ ಹೆಣ್ಣಾಗಿ ನಾನು .... ಈ ವಿಷಯದಲ್ಲಿ ತುಂಬಾ ಕಾತುರಳಾಗಿದ್ದೆ. ಮದುವೆಯ ನಂತರದ ಮೂರು ನಾಲ್ಕು ವರ್ಷಗಳಲ್ಲಿ ನನಗೆ ಇನ್ನು ನಿಮ್ಮಿಂದ ಮಕ್ಕಳಾಗಲಿಕ್ಕಿಲ್ಲ ಎಂಬ ವಿಷಯ ಖಚಿತವಾಯಿತು. ಹಣ ಮಾಡುವ ಹುರುಪಿನಲ್ಲಿ ನೀವು ಎಲ್ಲ ಮರೆತಿದ್ದಿರಿ. ನೀವು ತಂದುಕೊಡುತ್ತಿದ್ದ ಹಣ ನನಗೂ ಸಂತೋಷವನ್ನು ನೀಡುತ್ತಿತ್ತು. ಆದರೆ ಏನಿದ್ದೇನು? ಮನೆ ಬರಿದಾಗಿಯೇ ಉಳಿಯಿತು. ದೋಷ ನಿಮ್ಮದಾದರೂ ನಿಮ್ಮ ಮನೆಯವರು, ಪರಿಚಿತ ಮಹಿಳೆಯರು ನನ್ನನ್ನೇ ದೋಷಿಯನ್ನಾಗಿ ಮಾಡಿದ್ದರು. ಹಳ್ಳಿಯಲ್ಲಿದ್ದ



ನಿಮ್ಮ ತಾಯಿಯಂತೂ ನನ್ನನ್ನು ಎಲ್ಲರ ಎದುರೇ ಹಳಿಯುತ್ತಿದ್ದಳು.

ಆಗ ನೀವು ಒಂದು ಪ್ರಕರಣದಲ್ಲಿ ಸಿಕ್ಕುಬಿದ್ದಿರಿ. ಒಮ್ಮೆ ಐವತ್ತು ಸಾವಿರ ರೂಪಾಯಿಗಳನ್ನು ತಂದು ನನ್ನ ಕೈಗೆ ಕೊಟ್ಟು -

'.....ಈವತ್ತು ನಾನು ಖಜಾನೆ ಲೂಟಿ ಮಾಡಿದೆ. ತೊಕೋ ಎಂದಿರಿ......'

ಸಂಭ್ರಮದಿಂದ ನಾನು ಅದೂ ತೆಗೆದುಕೊಂಡು ಬೀರುವಿನಲ್ಲಿ ಇರಿಸಿದೆ. ಏನು ಖಜಾನೆ, ಇಷ್ಟು ಹಣ ಹೇಗೆ ಬಂತು, ಎಂದು ನಾನು ಕೇಳಲಿಲ್ಲ. ಇದು ನ್ಯಾಯದ ಹಣ ಅಲ್ಲ ಎಂಬುದಂತೂ ನನಗೆ ಗೊತ್ತಿತ್ತು. ನಿಮ್ಮ ಕೈ ಹಿಡಿದು ನಿಮ್ಮ ಮಡದಿಯಾಗಿ ಬಂದ ನಂತರ ನೀವು ತರುವ ಹಣ ಮುಖ್ಯವಾಗಿ ನನಗೆ ಕಂಡಿತ್ತೇ ಹೊರತು ಅದು ಹೇಗೆ ಬರುತ್ತದೆ ಎಂಬ ಬಗ್ಗೆ ನಾನು ತಲೆ ಕೆಡಿಸಿಕೊಳ್ಳುತ್ತಿರಲಿಲ್ಲ. ನೀವು ಕೂಡ ಅದೆಲ್ಲ ಯೋಚನೆ ಮಾಡಬಾರದು, ನೀತಿ ನಿಯಮ ಅಂತ ಕೂತರೆ ನಾವು ಬದುಕಲಿಕ್ಕೆ ಆಗಲ್ಲ, ಎಂದು ಹೇಳುತ್ತಿದ್ದಿರಿ. ನಾನೂ ಆ ಮಾತುಗಳನ್ನು ಒಪ್ಪಿಕೊಂಡಿದ್ದೆ . ಹೀಗಾಗಿ ಐವತ್ತು ಸಾವಿರದ ಬಗ್ಗೆ ನಾನು ಕೇಳಲಿಲ್ಲ.

ಇದಾದ ಒಂದು ತಿಂಗಳ ನಂತರ ನೀವು ಗಾಬರಿಯಾಗಿ ಮನೆಗೆ ಬಂದಿರಿ. ನಿಮ್ಮ ಮನಸ್ಸು ಘಾಸಿಗೊಂಡಿತ್ತು.

'ಏನು?' ಎಂದು ಅನುಮಾನದಿಂದಲೇ ನಾನು ಕೇಳಿದೆ.

ನೀವು ಐವತ್ತು ಸಾವಿರದ ಕತೆ ಹೇಳಿದಿರಿ.

'ಯಾವುದೋ ಪೈಪ್ ಕಂಪನಿ ಎರಡು ಲಕ್ಷ ರೂಪಾಯಿಯ ಪೈಪುಗಳನ್ನು ಕಛೇರಿಗೆ ಸರಬರಾಜು ಮಾಡಬೇಕಿತ್ತು. ನೀವು ಆ ಕಂಪನಿಯವರನ್ನು ವಿಶ್ವಾಸಕ್ಕೆ ತೆಗೆದುಕೊಂಡಿರಿ. ಅವರಿಂದ ಏನನ್ನೂ ತರಿಸಿಕೊಳ್ಳದೇ ಅವರಿಗೆ ಐವತ್ತು ಸಾವಿರ ರೂಪಾಯಿ ನೀಡಿದ ನೀವು ಉಳಿದ ಹಣವನ್ನು ಇತರೇ ಅಧಿಕಾರಿಗಳಿಗೆ ಹಂಚಿ ಐವತ್ತು ಸಾವಿರವನ್ನು ಮನೆಗೆ ತಂದಿದ್ದಿರಿ. ಈಗ ಈ ವಿಷಯ ಹೊರಗೆ ಪ್ರಕಟವಾಗಿತ್ತು. ಮಾತ್ರವಲ್ಲದೆ ಇದರ ವಿಚಾರಣೆಗೆ ಓರ್ವ ಅಧಿಕಾರಿಯನ್ನು ಸರಕಾರ ನೇಮಿಸಿತ್ತು.

'ನಾಳೆ ಆತ ಬರತಾನೆ..... ಈ ಪ್ರಕರಣದಲ್ಲಿ ಹಣ ತೆಗೆದುಕೊಂಡವರೆಲ್ಲ ಹಿಂದೆ ಸರಿದು ಬಿಟ್ಟಿದಾರೆ.... ವಿಚಾರಣೆ ಎದುರಿಸಬೇಕಾಗಿರೋನು ನಾನೊಬ್ನೆ... ಎರಡು ಲಕ್ಷ ರೂಪಾಯಿ ಪೈಪುಗಳನ್ನು ಅಲ್ಲಿ ಇಲ್ಲಿ ರಸ್ತೆಗೆ ಮೋರಿಗೆ ಹಾಕಿದೆ ಅಂತ ಲೆಕ್ಕ ತೋರಿಸಿದ್ದೀನಿ.... ಆದರೂ ನಾನು ಉಳಿಯೋದು ಕಷ್ಟ...... ಬರೋ ಮನುಷ್ಯ ಬೇರೆ ಒಂದು ಕಾಸು ಮುಟ್ಟೋದಿಲ್ಲ.... ಕ್ಲೀನ್ ಹ್ಯಾಂಡ್ ಅಂತ ಇಲಾಖೇನಲ್ಲಿ ಹೆಸರು ಮಾಡಿರೋನು...' ಎಂದು ನೀವು ರಾತ್ರಿ ಎಲ್ಲ ಗೋಳಾಡಿದಿರಿ.

''ಏನೂ ಆಗೋಲ್ಲ ಧೈರ್ಯವಾಗಿರಿ'' ಎಂದೆ ನಾನು, ನಿಮಗೆ ಸಮಾಧಾನಪಡಿಸಲು.

ಮೂರನೆ ದಿನ ನಿಮ್ಮ ಪೂಜೆ ತುಂಬಾ ದೀರ್ಘವಾಗಿತ್ತು. ಕಾಲಿಗೆ ಕಲ್ಲುಗುಂಡು ಕಟ್ಟಿಕೊಂಡವರಂತೆ ನೀವು ಹೋದಿರಿ.

ಅಂದು ಸಂಜೆ ನೀವು ಮನೆಗೆ ಬಂದಾಗ ಆ ಅಧಿಕಾರಿ ನಿಮ್ಮ ಜತೆಗಿದ್ದ. ತುಂಬಾ ಸೌಮ್ಯ ಸ್ವಭಾವದ ನಿಧಾನಪ್ರವೃತ್ತಿಯ ನೋಡಲು ಸ್ಫುರದ್ರೂಪಿಯಾಗಿದ್ದ, ಬಣ್ಣದಲ್ಲಿ ಕೆಂಪಗೆ ಮಿಂಚುತ್ತಿದ್ದ ವ್ಯಕ್ತಿ. ಏಕೋ ಅವನ ದುಂಡು ಮುಖ, ಪುಟ್ಟ ಮೂಗು ನನ್ನನ್ನು ಆಕರ್ಷಿಸಿತು.

''ಇವರು ಇಲ್ಲೇ ಊಟ ಮಾಡತಾರೆ''

ಎಂದಿರಿ ನೀವು. ನಾನು ಎಂದಿನಂತೆ ಆಸಕ್ತಿಯಿಂದಲೇ ಅಡಿಗೆ ಮಾಡಿದೆ. ಅವನನ್ನು ಹೊರಗೆ ಕೂರಿಸಿ ನೀವು ಐದಾರು ಬಾರಿ ಅಡಿಗೆ ಮನೆಗೆ ಬಂದಿರಿ.

''ಎಲ್ಲ ವಿವರವಾಗಿ ನೋಡಿದಾರೆ... ಎಲ್ಲ ಇವರ ಕೈಲಿದೆ.... ಹಾಗೂ ಮಾಡಬಹುದು.... ಹೀಗೂ ಮಾಡಬಹುದು...'' ಎಂದು ನನ್ನ ಹಿಂದೆ ನಿಂತು ನುಡಿದಿರಿ.

''ಇವರು ಹಣ ಮುಟ್ಟೋದಿಲ್ಲ....''

ಎಂದು ಹೇಳಿದಿರಿ, ಮತ್ತೆ ಮತ್ತೆ.

''... ಆದರೆ......''

ಎಂದು ನನ್ನ ಮುಖ ನೋಡಿದಿರಿ.

''ನೀನು ಮನಸ್ಸು ಮಾಡಿದರೆ ನಾನು ಉಳಿಯುತ್ತೇನೆ''

ಎಂದಿರಿ. ನನಗಿದು ಅರ್ಥವಾಗಲಿಲ್ಲ.

ಊಟವಾದ ನಂತರ- ''ಪ್ರವಾಸಿ ಮಂದಿರಕ್ಕೆ ಹೋಗಿ ಬರೋಣ....ಬಾ'' ಎಂದಿರಿ.

''ನಾನು ಯಾಕೆ?'' ಎಂದು ಕೇಳಿದೆ.

''ಹೇಳಿದೆನಲ್ಲ.... ನೀನು ಮನಸ್ಸು ಮಾಡಿದರೆ ನಾನು ಉಳಿಯುತ್ತೇನೆ ಅಂತ.....''

ನನಗೆ ಹೇಸಿಗೆಯಾಯಿತು. ಬೇಸರವಾಯಿತು. ನಿಮ್ಮ ಮೇಲೆ ಸಿಟ್ಟು ಬಂತು. ಆದರೆ ಹೊರಗೆ ಆತ ನಿಂತದ್ದು ಕಾಣುತ್ತಿತ್ತು... ನಾನು ನಿಮ್ಮ ಜತೆ ಹೊರಟೆ.

ಅಂದು ನಾನು ಸಂತಸಪಟ್ಟೆ, ಸಂಭ್ರಮಪಟ್ಟೆ. ನೀವು ಗುತ್ತಿಗೆದಾರರು ನೀಡಿದ ಕಂತೆ ಕಂತೆ ಹಣವನ್ನು ತಂದು ನನ್ನ ಕೈಗೆ ಕೊಡುವಾಗ ನಾನೆಷ್ಟು ಪುಳುಕಿತಳಾಗುತ್ತಿದ್ದೆನೋ ಅಂತ ಪುಳಕ. ರೋಮಾಂಚನ. ಮನಸ್ಸು ಗರಿಗೆದ್ದು ಕುಣಿದಾಡಿತು. ಮೈ ಹಗುರವಾಗಿ ಅರಳೆಯಂತೆ ಗಾಳಿಯಲ್ಲಿ ತೇಲಾಡಿತು. ಮದುವೆಯಾದನಂತರ ನಾನು ಏನೆಲ್ಲ ನೋವು ಸಂತಸ ನರಳಾಟವನ್ನು ನಿರೀಕ್ಷಿಸಿದ್ದೆನೋ ಅದೆಲ್ಲ ನನಗೆ ಮನೆಯಲ್ಲಿ ದೊರೆಯುವುದರ ಬದಲು ಪ್ರವಾಸಿ ಮಂದಿರದ ಆ ಕೊಠಡಿಯಲ್ಲಿ ದೊರೆಯಿತು. ಒಂದೇ ದಿನದಲ್ಲಿ ವಿಚಾರಣೆ ಮುಗಿಸಲು ಬಂದ ಆತ ಮತ್ತೆ ಎರಡು ದಿನ ಉಳಿದ. ಈ ಮೂರೂ ದಿನಗಳಲ್ಲಿ ನಾನು ಆತನಿಗಾಗಿ ಶ್ರದ್ಧೆ ಆಸಕ್ತಿಯಿಂದಲೇ ಅಡಿಗೆ ಮಾಡಿ ಉಣಬಡಿಸಿದೆ.

ನಾನು ಅಂದುಕೊಂಡಂತೆಯೇ ಅಯಿತು. ನಿಮ್ಮ ಮೇಲೆ ಬಂದ ಆಪಾದನೆ ಹುರುಳಿಲ್ಲದ್ದು ಎಂದು ಇಲಾಖೆ ವರದಿ ಮಾಡಿದ್ದನ್ನು ಹೇಳಲೆಂದು ನೀವು ಮನೆಗೆ ಬಂದ ದಿನ ನಾನು ನಿಮಗೆ ಮತ್ತೂ ಒಂದು ವಿಷಯ ಹೇಳಿದ್ದೆ. ನಾನು ಗರ್ಭಿಣಿಯಾಗಿರುವ ವಿಷಯ. ನೀವು ಕುಣಿದಾಡಿದ್ದಿರಿ. ನನ್ನನ್ನು ಅಪ್ಪಿ ಮುದ್ದಾಡಿದ್ದಿರಿ.

''ಇದೆಲ್ಲ ಒಳ್ಳೆಯ ಲಕ್ಷಣ. ಬರಲಿರುವ ಮಗುವಿನಿಂದ ನಮಗೆ ಒಳ್ಳೆಯದಾಗುತ್ತದೆ ಅನ್ನೋದು ಇದರಿಂದ ಗೊತ್ತಾಗುತ್ತೆ....'' ಎಂದಿದ್ದಿರಿ.

ಮಗ ಹುಟ್ಟಿದ. ನಿಮಗೆ ಬಡ್ತಿ ಬಂದಿತು. ಮತ್ತೂ ಹಣ ಮಾಡಿದಿರಿ. ಮಗ ತುಸು ದಡ್ಡ ಎನಿಸಿಕೊಂಡ ನಾದರೂ ನೀವು ಮಾಡಿದ ಹಣದ ಬೆಂಬಲದಿಂದ ನಿಮ್ಮ ಸ್ಥಾನಮಾನಗಳಿಂದ ಆತ ವಿದ್ಯಾವಂತನಾದ.

ಆದರೆ ನಿಮ್ಮ ಮಗನನ್ನು ನೋಡಿದಾಗೆಲ್ಲ ನನಗೆ ಆತನ ನೆನಪಾಗುತ್ತಿತ್ತು. ಅವನದ್ದೇ ಬಣ್ಣ ಮುಖ ಮೂಗು ಎತ್ತರ ಆಕೃತಿ, ಇವನನ್ನು ನೋಡಿದಾಗೆಲ್ಲ ನನಗೆ ಒಂದು ಬಗೆಯ ಅಳುಕು, ನಾನು ನಿಮಗೆ ದ್ರೋಹ ಮಾಡಿದೆನೆ? ವಂಚನೆ ಮಾಡಿದೆನೆ? ಎಂಬ ತಳಮಳ. ಆದರೆ ಇದರ ಹಿಂದೆ ಇದ್ದವರೇ ನೀವು. ನೀವೇ ನನ್ನನ್ನು ನಿತ್ಯ ಪ್ರವಾಸಿ ಮಂದಿರಕ್ಕೆ ಕರೆದೊಯ್ಯುದವರಲ್ಲವೆ? ನನ್ನಲ್ಲಿ ಕೆಲ ಭಾವನೆಗಳು, ಕಾಮನೆಗಳು ಜಾಗೃತವಾದದ್ದು ನಿಜ. ಆದರೆ ಈ ಜಾಗೃತಿಗೆ ಪ್ರೇರಣೆ ನೀಡಿದವರು ನೀವೇ, ಬಾಗಿಲು ತೆರೆದು ಕೊಟ್ಟವರು ನೀವೇ. ಹೀಗಾಗಿ ಈ ಬಗ್ಗೆ ನಾನು ಹೆಚ್ಚು ಯೋಚಿಸಲಿಲ್ಲ. ನೀವು ತಂದುಕೊಟ್ಟ ಹಣವನ್ನು ತೆಗೆದುಕೊಂಡಂತೆಯೇ ಇದನ್ನೂ ಸ್ವೀಕರಿಸಿದೆ.

ಎಲ್ಲವೂ ಸರಿಯಾಗಿತ್ತು. ಮಗನನ್ನು ನೀವು ಪ್ರೀತಿಸುತ್ತಿದ್ದಿರಿ. ಅವನೂ ನಿಮ್ಮನ್ನು ಗೌರವದಿಂದ ಕಾಣುತ್ತಿದ್ದ. ನಾನಂತೂ ತುಂಬಾ ಸಂತೋಷದಿಂದಿದ್ದೆ.

ಮಗ ಇಂಜಿನಿಯರಿಂಗ್ ಕಾಲೇಜಿಗೆ ಸೇರಿಕೊಂಡ. ಅಲ್ಲಿಯೇ ಹಾಸ್ಟೆಲಿನಲ್ಲಿ ಉಳಿದು ಓದತೊಡಗಿದ.

ಅದು ಅವನ ಮೂರನೇ ವರ್ಷ. ಮನೆಗೆ ಬಂದವ ಒಂದು ದಿನ-

''ಅಮ್ಮಾ....'' ಎಂದ.

''ಏನು ಮರಿ?''

''ನಮಗೊಬ್ರು ಹೊಸ ಪ್ರಿನ್ಸಿಪಾಲರು ಬಂದಿದಾರೆ.....ತುಂಬಾ ಒಳ್ಳೆಯೋರು. ನನ್ನ ತುಂಬಾ ಚೆನ್ನಾಗಿ ನೋಡ್ಕೋತಾರೆ..... ಅವರು ನಮ್ಮ ಮನೆಗೂ ಬಂದಿದ್ದರಂತೆ.... ಅಪ್ಪಾಜಿ ಪರಿಚಯ ಅವರಿಗಿದೆ.....''

''ಸರಿ ಬಿಡು........ ಇಲಾಖೆನಲ್ಲಿರೋ ನೂರಾರು ಜನರಿಗೆ ಅಪ್ಪಾಜಿ ಪರಿಚಯ ಇರುತ್ತೆ.... ಅವರಲ್ಲಿ ಕೆಲವರು ಮನೆಗೂ ಬಂದಿರತಾರೆ'' ಎಂದೆ ನಾನು. ಮಗ ಅಲ್ಲಿಗೆ ಸುಮ್ಮನಾಗಲಿಲ್ಲ.

''..ಮತ್ತೊಂದು ತಮಾಷೆ ಗೊತ್ತ ಅಮ್ಮಾ ?'' ಎಂದು ಕೇಳಿದ ಮಗ.

''ಏನು?''

''ಅವರು.....ನನ್ನ ಹಾಗೇನೆ ಇದಾರೆ........ಅಲ್ಲ.... ನಾನು ಅವರ ಹಾಗೇನೆ ಇದೇನೆ....'' ಎಂದ ಮಗ.

ಈ ಮಾತು ಕೇಳಿ ನಾನು ಗಾಬರಿಗೊಂಡೆ. ನಾನು ಪೂರ್ಣವಾಗಿ ಮರೆತುಬಿಟ್ಟಿದ್ದ ಒಂದು ವಿಷಯ ನೆನಪಿಗೆ ಬಂದಿತು. ಮುಖ್ಯವಾಗಿ ನನಗೆ ನಿಮಗೆ ಮಾತ್ರ ತಿಳಿದಿದ್ದ ಈ ವಿಷಯದ ವಾಸನೆ ಮಗನ ಮೂಗಿಗೆ ಬಡಿದಿತ್ತು. ಮಗನ ಮಾತಿಗೆ ನಾನು ಏನೂ ಉತ್ತರ ಕೊಡದೆ ಸುಮ್ಮನೆ ನಕ್ಕಿದ್ದೆ. ಅಲ್ಲಿಗೆ ಮಗ ಈ ವಿಷಯ ಮರೆಯಬಹುದು ಅಂದುಕೊಂಡಿದ್ದೆ. ಆದರೆ ಆತ ಈ ವಿಷಯ ಮರೆಯುವುದರ ಬದಲು ದಿನದಿಂದ ದಿನಕ್ಕೆ ಇದನ್ನೇ ಪ್ರಧಾನವಾಗಿ ತೆಗೆದುಕೊಂಡು ಬಂದಾಗಲೆಲ್ಲ ಅವನು ಅವನ ಪ್ರಿನ್ಸಿಪಾಲರ ವಿಷಯವನ್ನೇ ಹೇಳುತ್ತಿದ್ದ. ಅವರ ಗುಣಸ್ವಭಾವ. ಲಂಚ ಬಯಸದ ಅವರ ಆದರ್ಶ. ಇಲಾಖೆಯಲ್ಲಿ ಅವರು ಇಂಜಿನಿಯರ್ ಆಗಿ ಹಲವು ಹಂತಗಳಲ್ಲಿ ಕೆಲಸ ಮಾಡಿದ್ದು. ತನಿಖಾ ವಿಭಾಗದಲ್ಲಿ ಇದ್ದುದು. ಅಲ್ಲಿ ಹಲವು ವಿಚಾರಣೆಗಳನ್ನು ಮಾಡಿದ್ದು. ಅವರ ಆದರ್ಶಗಳಿಗೆ ಒಂದೆರಡು ಬಾರಿ ಧಕ್ಕೆಯಾದದ್ದು. ಮದುವೆಯಾಗದೇನೆ ಉಳಿದಿರುವ ಅವರ ಸ್ವಭಾವ.... ಹೀಗೆ ಆತ ಹೇಳುತ್ತಿದ್ದರೆ ಕುಳಿತು ನಾನು ಕೇಳುತ್ತಿದ್ದೆ. ಇದನ್ನೆಲ್ಲ ಕೇಳಲು ನನಗೆ ಸಂತಸವಾಗುತ್ತಿತ್ತು.

ಆಗಲೇ ನಾನು ಒಂದು ಅಂಶ ಗಮನಿಸಿದೆ. ಮಗ ತನ್ನ ಪ್ರಿನ್ಸಿಪಾಲರನ್ನು ಹೊಗಳುತ್ತ ನಿಮ್ಮನ್ನು ದ್ವೇಷಿಸತೊಡಗಿದ್ದ.

ನಿಮ್ಮ ಕಾರ್ಯ ವೈಖರಿಯನ್ನು ವಿಮರ್ಶೆ ಮಾಡ ತೊಡಗಿದ. ವಿಡಂಬಿಸತೊಡಗಿದ. ಕೆಲಸ ಸಿಕ್ಕ ನಂತರ ಅವನು ಈ ಊರು ಬಿಡಲು ಇದು ಕಾರಣವಾಯಿತು. ನಿಮ್ಮ ಮಾತು ಕಂಡರೆ, ನೆರಳು ಹತ್ತಿರ ಸುಳಿದರೆ ಮಗ ಮೈ ಮೇಲೆ ಹಾವು ಬಿದ್ದಂತೆ ವರ್ತಿಸತೊಡಗಿದ.

ಈಗ ನೀವು ಮಗ ಗೌರವ ಕೊಡುವುದಿಲ್ಲ ಎಂದು ಕೊರಗುತ್ತಿದ್ದೀರಿ. ಆತ ನಿಮ್ಮೊಡನೆ ಮಾತನಾಡುವುದಿಲ್ಲ, ನಿಮ್ಮತ್ತ ದೃಷ್ಟಿ ಬೀರುವುದಿಲ್ಲ. ನಾನು ಬಲ್ಲೆ. ಅವನ ಮನಸ್ಸು ಮುರಿದುಹೋಗಿದೆ. ನೀವು ಮಾತ್ರ ಇಲ್ಲದ ವ್ಯಾಮೋಹವನ್ನು ಬೆಳೆಸಿಕೊಂಡು ಮಗನಿಗಾಗಿ ಹಂಬಲಿಸುತ್ತಿದ್ದೀರಿ. ನಿಮ್ಮ ಸ್ಥಾನಮಾನಗಳನ್ನು ಉಳಿಸಿಕೊಂಡು ಬರಲಿಕ್ಕೆ ನೀವು ಇಟ್ಟ ಹೆಜ್ಜೆ ಈ ವಯಸ್ಸಿನಲ್ಲಿ ಹೀಗೆ ನಿಮ್ಮನ್ನು ಕಾಡುತ್ತಿದೆ. ಇನ್ನಾದರೂ ನೀವು ಸತ್ಯಾನ ತಿಳಕೊಳ್ಳೋದು ಒಳ್ಳೇದು ಅಂತ ನನಗನಿಸುತ್ತೆ. ಹಾಗಂತಾನೆ ನಿಮಗೆ ಎಲ್ಲ ವಿಷಯಗಳನ್ನೂ ಹೇಳಿಬಿಡಬೇಕು ಅಂತ ನಾನು ನಿರ್ಧಾರ ಮಾಡಿದೀನಿ.

ಈಗ ಒಂದು ತಿಂಗಳ ಹಿಂದೆ ತುಮಕೂರಿಗೆ ನಾನು ಹೋಗಿದ್ದೆ. ನನ್ನ ಜತೆ ಬನ್ನಿ ಅಂದರೂ ನೀವು ಬಂದಿರಲಿಲ್ಲ. ಸೊಸೆ ಹುಷಾರಿಲ್ಲ ಅಂತ ಮಲಗಿದ್ದು ಗೊತ್ತಾಗಿಯೇ ನಾನು ಅಲ್ಲಿಗೆ ಹೋಗಿದ್ದೆ. ಸುಮಾರು ಹದಿನೈದು ದಿನ ಮಗನ ಜೊತೆ ಇದ್ದೆ. ಆಗಲೆ ಎಲ್ಲ ನನಗೆ ತಿಳಿಯಿತು. ನಿಮ್ಮ ಮಗ ತನ್ನ ಮನಸ್ಸಿನಿಂದ ನಿಮ್ಮನ್ನು ಎತ್ತಿ ಹೊರಗೆ ಚೆಲ್ಲಿಬಿಟ್ಟಿದ್ದಾನೆ. ಅದು ಹೇಗೋ ಅವನಿಗೆ ಎಲ್ಲ ಗೊತ್ತಾಗಿದೆ. ಅವನ ತಂದೆ ಈಗ ದಾವಣಗೆರೆಯಲ್ಲಿ ಇದ್ದಾನೆ. ನಿಮ್ಮ ಮಗ ತನ್ನೆಲ್ಲ ಆಸಕ್ತಿ ಪ್ರೀತಿಯನ್ನು ಈಗ ಅವನ ತಂದೆಯತ್ತ ಕೇಂದ್ರೀಕರಿಸಿದ್ದಾನೆ.

''ಅವರಿಗೆ ಯಾರೂ ಇಲ್ಲ.... ನಾನು ಅವರನ್ನೇ ನೋಡಿಕೋಬೇಕಂತ ನಿರ್ಧಾರ ಮಾಡಿದ್ದೀನಿ... ಇದನ್ನ ನೀನೂ ಕೂಡ ತಪ್ಪು ಅಂತ ಹೇಳಲಿಕ್ಕಿಲ್ಲ ಅನ್ನುವ ಭರವಸೆ ನನಗಿದೆ'', ಎಂದು ಮಗ ನನಗೆ ಹೇಳಿದ.

ನಾನು ಏನೂ ಹೇಳಲಿಲ್ಲ.

ನಲವತ್ತು ವರುಷಗಳ ನಮ್ಮ ಒಡನಾಟ, ಮೂರು ದಿನಗಳ ಆ ಇನ್ನೊಂದು ಒಡನಾಟ ಎರಡರಲ್ಲಿ ಯಾವುದು ಅರ್ಥಪೂರ್ಣ ಅಂತಾನು ವಿಚಾರ ಮಾಡಿದೆ.

ಇನ್ನು ನೀವು ನಿಮ್ಮ ''ಮಗ''ನನ್ನು ಮರೆತುಬಿಡಿ. ನೀವು ಅಧಿಕಾರದಲ್ಲಿದ್ದಾಗ ದುಡಿದ ಹಣ ಸಾಕಷ್ಟು ಉಳಿದಿದೆ. ಶೇರು ಸರ್ಟಿಫಿಕೇಟುಗಳು, ಠೇವಣಿ ಪತ್ರಗಳೂ ಇವೆ. ಬಂಗಾರದ ಬಿಸ್ಕೇಟುಗಳಿವೆ. ಮನೆ ತೋಟ ಸೈಟುಗಳು ನಿಮ್ಮ ಹೆಸರಿನಲ್ಲೇ ಇವೆ. ಸಾಧ್ಯವಾದರೆ ನಾನೂ ಒಂದು ಸಾರಿ ದಾವಣಗೆರೆಗೆ ಹೋಗಿ ಬರುವ ವಿಚಾರದಲ್ಲಿದ್ದೇನೆ. ಮುಂದೆ ನೀವು ಒಬ್ಬರೇನೇ ಇರಬೇಕಾಗಿ ಬರಬಹುದು. ಅದಕ್ಕೆ ಸಿದ್ಧರಾಗಿ. ಅಂತ್ಯಕಾಲದಲ್ಲಿ ಹೀಗೆ ಬದುಕಬೇಕಾಗಿಬಂತಲ್ಲ ಅಂತ ನೀವು ಯೋಚನೆ ಮಾಡಬಹುದು. ಯಾವತ್ತೋ ಬಿತ್ತಿದ ಬೀಜ ಮತ್ತೆ ಯಾವತ್ತೋ ಮರವಾಗಿ ಫಲ ಕೊಡುತ್ತೆ ಅನ್ನೋದು ನಿಮಗೆ ಈಗ ಅರ್ಥವಾಗಬೇಕು. ಅರ್ಥವಾಗ ಬಹುದು ಅಂತ ನಾನು ಅಂದುಕೊಂಡಿದ್ದೇನೆ.

ನಾ. ಡಿಸೋಜ
೧೫/೧೪, ೨ನೇ ಕ್ರಾಸ್, ನೆಹರು ನಗರ, ಸಾಗರ - ೫೭೭ ೪೦೧.

(೫ನೇ ಪುಟದಿಂದ)

ಪ್ರಸ್ತುತವೆನಿಸಿಲ್ಲದಿರುವುದು ಅವರ ಅಮೆರಿಕಾ ಬಂಧುತ್ವದಿಂದಾಗಿ. ನಮ್ಮ ಸರ್ಕಾರವು ಸ್ವತಃ ಅಣ್ವಸ್ತ್ರ ತಯಾರಿಸುವ ತರಾತುರಿಯಲ್ಲಿ ಪಕ್ಕದಲ್ಲೇ ದೊಡ್ಡಣ್ಣ ಬೆಂಕಿ ಇಡಲು ಸಜ್ಜಾಗಿ ಕೂತಿರುವುದನ್ನು ನೋಡುತ್ತಿಲ್ಲ. ಡೀಗೋ ಗಾರ್ಸಿಯಾ ದ್ವೀಪಗಳಿಂದ ಹೊರದೂಡಲ್ಪಟ್ಟ ಜನರ ಬಗ್ಗೆ ಮಾನವ ಹಕ್ಕುಗಳ ಪ್ರತಿಪಾದಕರು ತಿರುಗಿ ನೋಡುತ್ತಿಲ್ಲ. ಅಲ್ಲಿ ಯಾರೂ ವಾಸಿಸುತ್ತಿರಲಿಲ್ಲವೆಂಬ ಶುದ್ಧ ಸುಳ್ಳನ್ನು ಬ್ರಿಟನ್ ಹೇಳುತ್ತಲೇ ಇದೆ. ಅವರನ್ನು ಹೊರಕ್ಕಟ್ಟಿ ದ್ವೀಪಗಳನ್ನು ೫೦ ಕೋಟಿ ರೂಪಾಯಿಗಳಿಗೆ ಅಮೆರಿಕಾಕ್ಕೆ ಮಾರಿದ್ದು ಬ್ರಿಟನ್ನಿನ ಅಂದಿನ ಪ್ರಧಾನಿ ಹೆರಾಲ್ಡ್ ವಿಲ್ಸನ್. ಯಾರನ್ನೂ ದ್ವೀಪದೊಳಕ್ಕೆ ಬಿಡದೆ ಅಣ್ವಸ್ತ್ರಗಳನ್ನು ಅಮೆರಿಕಾ ಅಲ್ಲಿ ತುಂಬಿಕೊಂಡಿದೆ. ಇತ್ತೀಚೆಗೆ ಲಂಡನ್ನಿನ ಒಂದು ನ್ಯಾಯಾಲಯವು ದ್ವೀಪಗಳಿಂದ ಹೊರದೂಡಲ್ಪಟ್ಟಿದ್ದ ಜನರು ಅಲ್ಲಿಗೆ ಹಿಂದಿರುಗಲು ಹಕ್ಕುದಾರರೆಂಬ ತೀರ್ಪನ್ನು ನೀಡಿದೆ. ಇದನ್ನು ಬೆಂಬಲಿಸಿ ಭಾರತವು ಅವರಿಗೆ ದ್ವೀಪವು ಹಿಂದಿರುಗುವಂತೆ ಮಾಡಬೇಕು, ಅಣ್ವಸ್ತ್ರಗಳ ಅಪಾಯದಿಂದ ಪಾರಾಗಬೇಕು, ಅಮೆರಿಕಾಕ್ಕೆ ಭಾರತದ ಸುತ್ತಮುತ್ತ ಬೇರೆಲ್ಲೂ ನೆಲೆ ದೊರಕದಂತೆ ಮಾಡಬೇಕು.

* * *

ರಾಜಕುಮಾರ್ ಬಿಡುಗಡೆಗೆ ಟಾಡಾ ಬಂಧಿತರ ಬಿಡುಗಡೆ ವೀರಪ್ಪನ ಒಂದು ಷರತ್ತು. ಕೊಲೆಪಾತಕನೊಬ್ಬನಿಗೆ ಮಣಿಯುವುದು ಸರ್ಕಾರವು ಮಾಡಬಾರದ ಕೆಲಸವೆಂದು ಸರ್ವೋಚ್ಚ ನ್ಯಾಯಾಲಯವು ತೀರ್ಪಿತ್ತಿದೆ. ಯಾವ ಅಪರಾಧವೂ ಮಾಡಿಲ್ಲದ ಕೆಲವರು ಈ ಟಾಡಾ ಬಂಧಿತರಲ್ಲಿದ್ದಾರೆಂದು ಮಾನವ ಹಕ್ಕುಗಳ ಆಯೋಗವು ಗಮನಿಸಿದಂತಿದೆ ಯಾದರೂ ಮಧ್ಯಪ್ರವೇಶ ಮಾಡಲು ನಿರಾಕರಿಸಿರುವುದು ಆಕ್ಷೇಪಣೀಯ. ಗುಜರಾತಿನ ಒಂದು ಘಟನೆ ಸರ್ವೋಚ್ಚ ನ್ಯಾಯಾಲಯದ ಗಮನಕ್ಕೆ ಬಂದಿದೆಯೋ ಇಲ್ಲವೋ ಗೊತ್ತಿಲ್ಲ. ಒಂದು ಬಹುಮಹಡಿ ಸಂಕೀರ್ಣಕ್ಕೆ ವಿದ್ಯುತ್ ಸರಬರಾಜು ನಿಲ್ಲಿಸಬೇಕೆಂದು ಗುಜರಾತ್ ಉಚ್ಚನ್ಯಾಯಾಲಯ ಹೇಳಿತ್ತು. ಕಟ್ಟಡದ ರಚನೆಯಲ್ಲಿ ಅಪಾಯಕಾರಿ ಅಂಶಗಳಿವೆಯೆಂಬ ಕಾರಣದಿಂದ. ಆ ಕಟ್ಟಡದ ನಿವಾಸಿಗಳು ಸಂಬಂಧಪಟ್ಟ ನ್ಯಾಯಾಧೀಶರ ಮನೆಯ ಮುಂದೆ ಘೇರಾಯಿಸಿ ಗೊಂದಲವೆಬ್ಬಿಸಿದರು. ನ್ಯಾಯಾಲಯದ ಆಜ್ಞೆ ಹಿಂತೆಗೆಯಲಾಯಿತು. ಈಗ ಆ ಕಟ್ಟಡದಲ್ಲಿ ದೀಪಗಳು ಝಗಮಗಿಸುತ್ತಿವೆ. ಮೈಸೂರಿನ ಜೈಲಿನಲ್ಲಿರುವ ಟಾಡಾ ಬಂಧಿತರು ಯಾರನ್ನು ತಾನೆ ಘೇರಾಯಿಸಿಯಾರು! ದೆಹಲಿಯಲ್ಲಿರುವ ಸರ್ವೋಚ್ಚ ನ್ಯಾಯಾಲಯವು ಗುಜರಾತಿನ ಘಟನೆಯ ಬಗ್ಗೆ ವರದಿ ತರಿಸಿಕೊಳ್ಳಬಹುದೆಂದು ನಿರೀಕ್ಷೆಯಲ್ಲಿರೋಣ.

ಜ್ಯೋತಿಷಿಗಳೆಲ್ಲರ ಬೊಗಳೆಗಳನ್ನು ಸುಳ್ಳು ಮಾಡಿ ವೀರಪ್ಪ ಹಠಾತ್ತನೆ ಡಾ॥ ರಾಜಕುಮಾರ್ ಅವರನ್ನು ಕಾಡಿನಿಂದ ಹೊರಕ್ಕೆ ಕಳಿಸಿ ಎಲ್ಲರಿಗೂ ಸಂತಸ ತಂದಿದ್ದಾನೆ. ಬಲವಂತದ ವಾನಪ್ರಸ್ಥಾಶ್ರಮದ ೧೦೮ ದಿನಗಳು ರಾಜ್ ಅವರ ಆರೋಗ್ಯಕ್ಕೆ ಕೆಡುಕನ್ನು ತರದಿರುವುದು ಅವರ ದೇಹದಾರ್ಢ್ಯದ ಕುರುಹಾಗಿರುವಂತೆ ವೀರಪ್ಪನ ಗೌರವದ ಸಂಕೇತವೂ ಆಗಿದೆ. ಸಿನಿಮಾಲೋಕದ ಕೆಲವು ಮೂರ್ಖ ತಾರ-ತಾರೆಯರು ಮಾತ್ರ ತಾವು ಭಗವಂತನಿಗೆ ಸಲ್ಲಿಸಿದ ಉರುಳುಸೇವೆ ಮುಂತಾದ ಕೈಂಕರ್ಯಗಳ ಬಲದಿಂದ ರಾಜ್ ಮರಳಿಬಂದಿದ್ದಾರೆಂದು ಲಪಲಪಿಸುತ್ತಿದ್ದಾರೆ. ಅಂಥವರಿಗೆ ಬೌದ್ಧಿಕ ಉರುಳೇ ಗತಿ ! ಎರಡೂ ಸರ್ಕಾರಗಳು ಗೋಪಾಲ್ ಮತ್ತು ನೆಡುಮಾರನ್ ಮುಖಾಂತರ ಏನು ಸಂಧಾನ ನಡೆಸಿದುವು, ಯಾವ ಒಪ್ಪಂದಕ್ಕೆ ಬಂದವು ಮತ್ತು ವ್ಯವಹಾರ ಹೇಗೆ (ಮತ್ತು ಎಷ್ಟಕ್ಕೆ ?) ಕುದುರಿಸಿಕೊಂಡವು ಎಂಬುದೊಂದು ಚಿದಂಬರ ರಹಸ್ಯ. ಸರ್ವೋಚ್ಚ ನ್ಯಾಯಾಲಯದ ಬಿಗಿ ಕಾನೂನು ಪ್ರಜ್ಞೆಗೆ ಬೆದರಿ ವೀರಪ್ಪ ರಾಜ್ ಅವರನ್ನು ಬಿಡುಗಡೆ ಮಾಡಿಲ್ಲವೆಂಬುದಕ್ಕೆ ಪುರಾವೆಯೇನೂ ಬೇಕಿಲ್ಲ. ಹಾಗಿದ್ದರೆ ಯಾವ ಪ್ರೇರಣೆ ಆತನ ಮನಸ್ಸನ್ನು ಬದಲಾಯಿಸಿತು ? ಕಾಡಿನಲ್ಲಿ ಆತನ ಕ್ಷೇಮದ ಬಗ್ಗೆ ಸರ್ಕಾರಗಳೇನಾದರೂ ಒಡಂಬಡಿಕೆ ಮಾಡಿಕೊಂಡಿವೆಯೆ ? ರಾಜ್ ಅವರನ್ನು ಬಂಧನದಿಂದ ಮುಕ್ತರನ್ನಾಗಿಸಿದ್ದರೂ ಅವರ ಬಂಗಲೆ, ತೋಟ, ವ್ಯವಹಾರಗಳು ಕಾಡಿನ ಪಕ್ಕದ ಗಾಜನೂರಿನಲ್ಲೇ ನಡೆಯಬೇಕಾಗಿರುವುದನ್ನು ಮರೆಯುವಂತಿಲ್ಲ. ಅದು ಒಂದು ರೀತಿಯಲ್ಲಿ ವೀರಪ್ಪನ ಒತ್ತೆಯಲ್ಲೇ ಉಳಿದಿರುತ್ತದೆಯೆಂಬುದು ಸಂಶಯಾತೀತ. ಯಾರನ್ನೂ ಲೆಕ್ಕಿಸದೆ ಇನ್ನಾದರೂ ಅವನನ್ನು ಹಿಡಿದುಹಾಕುವ ಕರ್ತವ್ಯ ಸರ್ಕಾರಗಳಿಗಿದೆ. ಅವನ ಎಂಜಲುಂಡು ಬದುಕಿರುವ ರಾಜಕಾರಣಗಳ ಬಣ್ಣವೂ ಬಯಲಾಗಬೇಕು.



ರಾಜ್ ಅಪಹರಣದ ಹಿನ್ನೆಲೆಯಿಂದ ಹಿಡಿದು ಅವರು ಸ್ವಾಸ್ಥ್ಯದಿಂದ ಹಿಂದಿರುಗಿದ ಘಟನೆಯ ವರೆಗಿನ ಎಲ್ಲ ಅಂಶಗಳನ್ನೂ ಆಮೂಲಾಗ್ರವಾಗಿ ಪರಿಶೀಲಿಸಿ, ತನಿಖೆ ನಡೆಸಿ, ಸಮಗ್ರ ವರದಿಯೊಂದನ್ನು ಸಲ್ಲಿಸುವಂತೆ ಉನ್ನತ ಮಟ್ಟದ ನಾಗರಿಕ ಸಮಿತಿಯೊಂದನ್ನು ಎರಡೂ ಸರ್ಕಾರಗಳು ಜಂಟಿಯಾಗಿ ರಚಿಸಬೇಕಾದ್ದು ಅತ್ಯವಶ್ಯಕ. ಕಳೆದ ೧೦೮ ದಿನಗಳಲ್ಲಿ ಎದ್ದ ಪ್ರಶ್ನೆಗಳು, ಊಹಾಪೋಹಗಳು, ಬಹಿರಂಗ ಚರ್ಚೆಗಳು ಎಲ್ಲವನ್ನೂ ಈ ಸಮಿತಿಯ ಅವಗಾಹನೆಗೆ ತರಬೇಕು; ಈ ಪ್ರಸಂಗದಲ್ಲಿ ಭಾಗವಹಿಸಿದ ಎಲ್ಲ ಸ್ತರದ ಜನಗಳನ್ನೂ ಸಮಿತಿಯು ಸಂದರ್ಶಿಸಬೇಕು. ಕಾನೂನು, ಕೋರ್ಟಿನ ಪ್ರಶ್ನೆಯೇ ಬೇರೆ, ನಾಗರಿಕ ಸಮಿತಿಯ ಜವಾಬ್ದಾರಿಯೇ ಬೇರೆ. ಇದು ಜನತೆಯ ಸಮಿತಿಯಾಗಬೇಕು.

ರಾಜ್ ಅವರಿಗೆ 'ಹೊಸತು' ಹರ್ಷದಿಂದ ಸ್ವಾಗತ ನೀಡುತ್ತದೆ, ಶುಭ ಕೋರುತ್ತದೆ, ಆಯುರಾರೋಗ್ಯ ವೃದ್ಧಿಸಲೆಂದು ಆಶಿಸುತ್ತದೆ. ಅವರು ಮನಸ್ಸು ಮಾಡಿದ್ದರೆ ಬಹುಶಃ ಇನ್ನೂ ಮುಂಚೆಯೇ ಹಿಂದಿರುಗಬಹುದಿತ್ತೆಂಬ ಸಾಧಾರವಾದ ಮಾತುಗಳು ಕೇಳಿಬಂದಿವೆ. ಉದಾಹರಣೆಗೆ, ವೀರಪ್ಪನ ಆಣತಿಯಂತೆ ಜಾಗದಿಂದ ಜಾಗಕ್ಕೆ ನಡೆದು ಹೋಗಲು ನಿರಾಕರಿಸಿ ರಾಜ್ ಸತ್ಯಾಗ್ರಹ ಹೂಡಿದ್ದರೆ ವೀರಪ್ಪ ಏನು ಮಾಡಬೇಕಿತ್ತು ? ಅಥವಾ ಕಾಡಿನಲ್ಲಿ ಬಂಧನದಲ್ಲಿರಿಸಿಕೊಂಡಿರುವವರೆಗೆ ಯಾವ ಆಹಾರವನ್ನೂ ಸ್ವೀಕರಿಸುವುದಿಲ್ಲವೆಂದು ಆಗ್ರಹಿಸಿದ್ದರೆ ಆತ ಏನು ಮಾಡುತ್ತಿದ್ದ? ಅವನ ಒತ್ತಾಯಗಳಿಗೆಲ್ಲಾ ಸರ್ಕಾರಗಳು ಮಣಿಯಬಾರದು, ಯಾವುದು ಎರಡೂ ರಾಜ್ಯಗಳಿಗೆ ಕಾನೂನು ರೀತ್ಯಾ ಹಿತಕರವೋ ಅದನ್ನು ಮಾತ್ರವೇ ಒಪ್ಪಿಕೊಳ್ಳಬೇಕೆಂದು ಕ್ಯಾಸೆಟ್ಟುಗಳ ಮೂಲಕ ರಾಜ್ ಅವರು ಸಂದೇಶ ಕಳಿಸಿದ್ದರೆ ಕೃಷ್ಣ - ಕರುಣಾನಿಧಿ - ಗೋಪಾಲ್ - ವೀರಪ್ಪ ಏನು ಮಾಡಬೇಕಾಗುತ್ತಿತ್ತು ? ರಾಜ್ ಅವರು ಯಾವ ಸಿನಿಮಾದಲ್ಲೂ ಗಾಂಧೀಜಿಯ ಪಾತ್ರ ನಿರ್ವಹಿಸದಿದ್ದುದು ಬಹುಶಃ ಕಾಡಿನಲ್ಲಿ ಅವರಿಗೆ ಬೇಸರ ತಂದಿದ್ದಿರಬೇಕು. ಪಾತ್ರ ಮಾಡಿದ್ದಿದ್ದರೂ ಅಷ್ಟೆ. ಅವರ ಢಿಶುಂ ಸಾಹಸಗಳಂತೆ ಅದೂ ತೆರೆಗೆ ಮಾತ್ರವೇ ಸೀಮಿತವಾಗಿಬಿಡುತ್ತಿತ್ತು. ನಿಜಜೀವನದಲ್ಲಿ ಗಾಂಧೀಜಿಯಂತೆ ಉದಾತ್ತ ವ್ಯಕ್ತಿತ್ವ ಬೆಳೆಸಿಕೊಳ್ಳುವುದು ಯಾರಿಗೇ ಆಗಲಿ ತೀರಾ ದೊಡ್ಡ ಸವಾಲೇ.ಆದಾಗ್ಯೂ ನೆಡುಮಾರನ್ ಮಧ್ಯಸ್ಥಿಕೆಯ ನೈಜ ಸ್ವರೂಪವೇನೆಂದು ಅವರಿಗೆ ತಿಳಿದಿದ್ದರೆ ಅದನ್ನು ಜನರಿಗೆ ತಿಳಿಸಿ ಉಪಕಾರ ಮಾಡಬಹುದು. ವೀರಪ್ಪನ ಭವಿಷ್ಯದ ಯೋಜನೆಗಳ ಬಗೆಗೂ ಅವರಿಗೆ ಏನಾದರೂ ಕಲ್ಪನೆ ಇರಲು ಶಕ್ಯವಿದೆ. ಆದರೆ ಇದಾವುದರ ಗೋಜಿಗೂ ಹೋಗದೆ ಕೆಲಕಾಲ ಅವರು ಸಂಪೂರ್ಣ ವಿಶ್ರಾಂತಿ ಪಡೆದು ಮಾನಸಿಕ - ದೈಹಿಕ ಲವಲವಿಕೆಗಳನ್ನು ಮೈಗೂಡಿಸಿಕೊಳ್ಳಲು ಸಾಧ್ಯವಾಗಲೆಂದು 'ಹೊಸತು' ಹಾರೈಸುತ್ತದೆ. ಇತರರೊಡನೆ ದನಿಗೂಡಿಸಿ ಅವರು ಹಿಂದಿರುಗಿರುವುದನ್ನು ಉಲ್ಲಾಸದಿಂದ ನೆನೆಯುತ್ತದೆ.

೧೦೮ ದಿನಗಳ ಕಾಲ ಒಬ್ಬ ವಿನಯವಂತರೊಡನಿದ್ದ ವೀರಪ್ಪ ಈಗ ಕಾಡಿನಲ್ಲಿ ಒಂಟಿತನದಿಂದ ನರಳುತ್ತಿರಬಹುದು; ರಾಜ್‌ರಂತೆ ತಾನೂ ಕಾಡಿನಿಂದ ಹೊರಬರುವಂತಿದ್ದರೆ ಎಷ್ಟು ಸೊಗಸಿರುತ್ತಿತ್ತೆಂದು ಪರಿತಪಿಸುತ್ತಿರಬಹುದು; ಮುಂದಿನ ವರ್ಷದ ತಮಿಳುನಾಡು ಚುನಾವಣೆಗಳ ಬಗ್ಗೆ ಲೆಕ್ಕಾಚಾರವನ್ನೂ ಮಾಡುತ್ತಿರಬಹುದು. ರಾಜ್ ಬಿಡುಗಡೆಯಾಗುವ ಹಿಂದಿನ ದಿನವಷ್ಟೇ ಕರುಣಾನಿಧಿ ಶಾಸನ ಸಭೆಯಲ್ಲಿ ಕರ್ನಾಟಕದ ಪಟೇಲ್ ಸರ್ಕಾರಕ್ಕೆ ಛೀಮಾರಿ ಹಾಕಿದ್ದು ಕೇವಲ ಕಾಕತಾಳೀಯವಲ್ಲ. ಪಟೇಲ್ ನುಡಿದಂತೆ ನಡೆಯಲಿಲ್ಲವಾದ್ದರಿಂದ ಟಾಡಾ ಬಂದಿಗಳ ಬಿಡುಗಡೆಯಾಗಲಿಲ್ಲವೆಂಬುದು ತಮಿಳುನಾಡು ಮತದಾರರಿಗೆ ಇದು ಮುಖ್ಯಮಂತ್ರಿಗಳ ವಿವರಣೆ ಎಂದರೆ ತಪ್ಪಾಗುವುದಿಲ್ಲ. ಗೋಪಾಲ್ ಕಾಡಿಗೆ ತೆರಳದಿದ್ದಾಗ ನೆಡುಮಾರನ್ ಮೂಲಕವೇ ರಾಜ್ ಬಿಡುಗಡೆ ಆಗಿರುವುದರ ಪರಿಣಾಮವನ್ನು ತಿಳಿಯಬೇಕಾಗಿದೆ. ಜೊತೆಗೆ ಡಾ॥ ಬಾನು, ಮಣಿ ಮತ್ತು ರಾಮಕುಮಾರ್ ವೀರಪ್ಪನ ಜೊತೆ ಅನ್ಯೋನ್ಯವಾಗಿದ್ದಾರೆ. ಇವರು ಯಾರು ? ವೀರಪ್ಪನೊಡನೆ ಇವರ ಸಂಬಂಧ ಎಂತಹುದು ? ಇದು ಕೇವಲ ಕುತೂಹಲವಲ್ಲ. ಅವ್ಯವಹಾರಗಳ ಸರಪಳಿ ದೊಡ್ಡದಾಗಿದೆ ಎಂದು ತೋರುತ್ತದೆ. ಏನೇ ಇರಲಿ, ವೀರಪ್ಪನ್ ನಾಡಿಗೆ ಮರಳಿ ಜನಕ್ಕೆ ಶರಣಾಗುವುದು ಸಂಭ್ರಮದ ಸುದ್ದಿಯಾದೀತು. ರಾಜ್ ಅವರ ಸಂಪರ್ಕ ಆತನಿಗೆ ಅದನ್ನು ಕಲಿಸಿತೇ ಎಂಬುದನ್ನು ಕಾದು ನೋಡೋಣ.

## ಯಾವ ಮಾಯೆಯಲ್ಲಾದರೂ

ಯಾವ ಮಾಯೆಯಲ್ಲಾದರೂ
ಅವರು ಬರಬಹುದು !
ತೆರೆ ಮರೆಯಲ್ಲೇ ಕಾದಿದ್ದು
ತಟ್ಟನೆ ಬರುತ್ತಾರಲ್ಲ ಕೇಳಿಕೆಯಲ್ಲಿ
ಅದೂ ಸಹಜವೆಂಬಂತೆ.
ಬಹು ಯೋಜನೆಗಳಾಚೆಯಿಂದ ಬಂದವರಂತೆ
ಕಣ್ಣ ಮರೆಯಿಂದ ಬಂದವರು ಖಂಡಿತ
ಅಲ್ಲವೆಂಬಂತೆ
ಇನ್ನೇನು ಬರಬಹುದು
ಯಾವ ದಿಕ್ಕಿನಿಂದಾದರೂ
ಕಾಯುತ್ತಿವೆ ಹೀಗೆ ಹಾದಿ
ದಿನ ತಿಂಗಳು ವರ್ಷ ಯುಗ ಆದಿ
ಹಾದಿ ಬದಿಯ ಮರ
ಮರದ ಎಲೆ
ಚಿಗುರು
ಕಾಯುತ್ತಿವೆ ಒಂದರ ಚಹರೆ ಇನ್ನೊಂದರಿಯದಂತೆ
ಕಣ್ಣಾಗಿ ಕಾಯುತ್ತ ಹಣ್ಣಾಗಿ ಉದುರಿ
ತರಗೆಲೆಯಾದರೂ ಕಾಯುತ್ತಿವೆ!
ಒಣ ಎಲೆಯ ಒಳಗೂ ನಿಮಿರುವ ಕಿವಿ
ಸುರುಗನ್ನ ತುಳಿದು ಪುಡಿಗುಟ್ಟಿಸುತ್ತಾ ಬರುವ ಸದ್ದಿಗೆ
ಈಗಷ್ಟೇ ಎವೆ ತೆರೆವ ಚಿಗುರೆಲೆಗೂ ಅದೇ ಕನಸು !
ಬಯಕೆ ಬಾಯಿ ತೆರೆದು ಆಕಳಿಸಿದಂತೆ
ಕತ್ತರಿಸಿದ ಗಾಯದಲ್ಲಿ ಕಣ್ಣೊಡೆಯುವುದು ಕುಡಿ
ಅವರು ಬಂದೇ ಬಿಟ್ಟಂತೆ!
ಅಲ್ಲ? ಬಂದವರು ಅವರಲ್ಲ ಎಂಬ ಚಿಂತೆ.



ಇನ್ನು ಹೆಚ್ಚು ಹೊತ್ತು ಕಾಯಬೇಕಿಲ್ಲ
ಯಾರ ನಿಟ್ಟುಸಿರೋ ಗುಡಿಸುತ್ತದೆ
ಹಾದಿಯ ಮೇಲಿನ ತರಗೆಲೆಯನ್ನ !
ಯಾವ ಭರವಸೆಯೊ ಒರೆಸುತ್ತದೆ
ಚಿಗುರ ಕಂಗಳ ದುಃಖದ ಹನಿಗಳನ್ನ!
ಇಂದು ಈಗಲೇ ಬಂದೇ ಬರುತ್ತಾರೆ
ಎಂದೂ ಬಾರದವರು
ಎಂದೋ ಬರಬೇಕಿದ್ದವರು
ಯಾವ ಮಾಯೆಯಲ್ಲಾದರೂ
ಯಾವ ದಿಕ್ಕಿನಿಂದಾದರೂ
ನೆನೆವ ಮನಕ್ಕಿಂತ ಬೇರುಂಟೆ ಶುಭ ನುಡಿವ ಶಕುನ
ಅಗೋ ಅದೋ ತರಗೆಲೆಯ ಸಪ್ಪಳ!
ಬಂದಿದ್ದಾರೆ ಬಾಗಿಲಿಗೆ?
ಬಂದವರು ಪರ ಊರಿಗೆ ದಾರಿ ಕೇಳುತ್ತಿದ್ದಾರೆ
ಯಾವತ್ತಿನಂತೆ, ಅದೂ ಸಹಜವೆಂಬಂತೆ.......

**ಡಾ॥ ಕೆ. ವೈ. ನಾರಾಯಣ ಸ್ವಾಮಿ**
ಕನ್ನಡ ಉಪನ್ಯಾಸಕ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಚಿಂತಾಮಣಿ - ೫೬೩ ೧೨೫, ಕೋಲಾರ -ಜಿಲ್ಲೆ

## ಶೂನ್ಯ ಪೀಠದ ಗುರುವಿನ ಅಂತರಂಗ

ಶೂನ್ಯಕ್ಕೆ ಬಾಗಿಲು ತೆರೆದು
ಕೂತಿದ್ದಾನೆ ಶೂನ್ಯ ಪೀಠದ ಗುರು!

ಮದ್ದಲೆ ಬಾರಿಸುತ್ತಿದೆ ಒಳಗೆ
ಯಜ್ಞಕುಂಡಕ್ಕೆ ಯಾವ ಪ್ರಾಣಿಯ
ಬಲಿಕೊಡಲಿ ನಾನು?
ಚಿಟ್ಟೆ, ನವಿಲು, ಮೊಲ.......
ಇಲ್ಲ.....ಹುಲಿಯನ್ನೇ ಹಿಡಿಯಲೋ
ಹೇಗೆ ಘಟ್ಟಿಗೊಳಿಸಲಿ
ಈ ನನ್ನ ಶೂನ್ಯಪೀಠದ
ಕಾಲುಗಳನ್ನ?
ಜಗತ್ತಿನ ಪ್ರಶ್ನೆಗಳಿಗೆ
ಉತ್ತರ ಕೊಡಲು ಕಂಗಾಲಾಗಿ
ಶೂನ್ಯಪೀಠವನ್ನೇನೋ ಏರಿದ್ದಾಯ್ತು
ಈಗ ನಿಧಾನಕ್ಕೆ
ಈ ಶೂನ್ಯ ಪೀಠಕ್ಕೆ
ಮಕಮಲ್ಲು ಹೊದಿಸಿ
ಯಾರೂ ಇಲ್ಲದಾಗ
ಕಾಯಬಹುದಲ್ಲ
ಬಣ್ಣದ ಚಿಟ್ಟೆ ಬರುವುದೆಂದು
ಮೆತ್ತನೆಯ ಮಕಮಲ್ಲು!
ಅದರ ತಳದಲ್ಲಿದೆ
ಬಲಿಕೊಟ್ಟ ಪ್ರಾಣಿಯ ರಕ್ತ
ಸದ್ಯ..... ಅದಾರಿಗೂ ಕಾಣುತ್ತಿಲ್ಲ

ಚಿಟ್ಟೆ ಬಂದರೆ
ಅದರ ಬಣ್ಣಗಳ
ತಾನು ಮೆತ್ತಿಕೊಂಡು



ಭಕ್ತ ಸಮೂಹಕ್ಕೆ
ಗೊತ್ತಾಗದ ಹಾಗೆ
ಅದರ ರೆಕ್ಕೆಗಳ ಹರಿದು
ಹಿಂಬದಿಯ ಗೋಡೆಗೆ
ಅದನ್ನು ಗುಟ್ಟಾಗಿ ಅಂಟಿಸಿ
ನೆನಪಿನಲ್ಲೇ ಮುಷ್ಟಿಮೈಥುನ
ನಡೆಸುತ್ತ......ಕಾಯುತ್ತೇನೆ.....ಮತ್ತೆ
ಶೂನ್ಯಕ್ಕೆ ಬಾಗಿಲು ತೆರೆದು.
ಕೂತಿದ್ದಾನೆ ಶೂನ್ಯಪೀಠದ ಗುರು!
ಆಧುನಿಕ ಅಲ್ಲಮ !

**ಎಸ್. ಮಾಲತಿ**
ಮಹಾಲಸ ನಿಲಯ, ಜೋಗ ರಸ್ತೆ
ಸಾಗರ - ೫೭೭ ೪೦೧, ಶಿವಮೊಗ್ಗ ಜಿಲ್ಲೆ

## ಅರಿವು!

ಹಗಲಿರುಳು
ಹಪಹಪಿಸಿ
ಹಣ-ಆಸ್ತಿಗಾಗಿ
ಹವಣಿಸಿದನು ಅವನು....!
ಅರ್ಧ
ಆಯಸ್ಸಿಗೆ
ಹರನ ಪಾದ
ಸೇರುತ್ತೇನೆಂದು
ಅವನು
ಮೊದಲೇ
ಅರಿಯದಾದನು !

**ಕ. ಬ. ವೀರಣ್ಣ ಕಣ್ಣಾಗಾಲ**
ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ
ರಾಜರಾಜೇಶ್ವರಿ ನಗರ, ಬೆಂಗಳೂರು - ೫೬೦ ೦೯೮.

ಎಚ್‌ಎಮ್ ಟಿ
ಬಹುಮಾನಿತ ಲೇಖನ




# ಪ್ರಜಾಪ್ರಭುತ್ವದ ಚಿಂತಿ ನಮಗ್ಯಾಕ?

ಸ. ರಾ. ಸುಳಕೂಡೆ

ಏನಿದ್ದರೂ ನಮ್ಮ ಗತಿ ನಿರ್ಗತಿ. ಹೇಳೋದೇನು? ಮಾಡೋದೇನು? ಮೂಗಿಗೆ ತುಪ್ಪಾ ಸವರಿ ಕುಣಸೋದೇನು? ಬಣ್ಣ ಬಣ್ಣ ಚಂದ ಚಂದದ ಮಾತಿನ ಮಂಟಪ, ವಿವೇಚನವಿಲ್ಲದ ಭರವಸೆ, ಭಾಷ್ಯ, ವಚನ ಭ್ರಷ್ಟತೆ, ಒಳಸಂಚು, ಬಹುಮತದ ಗುದ್ದಾಟ, ಹೆಂಗಿದ್ದು ಹೆಂಗಾಗೇವ? ಎಲ್ಲರೂ ಮೂಗಿನ ನೇರಕ್ಕೆ ನಡೆಯುವವರೇ. ಒಂದು ನಾಲಿಗೆ ಇದ್ದವರಿಂದು ಸಿಗೋದ ಕಠಿಣೈತಿ. ಮುಗಿಯದ ರಾದ್ಧಾಂತ ಹುದಲಿನಾಗ ಪ್ರಜೆ, ಪ್ರಜಾಪ್ರಭುತ್ವ ಮುಳಿಗಿಕೊಂಡಾವ, ಮಲಗಿಕೊಂಡಾವ ಅನಕೋತ ಅನಕೋತ ಐವತ್ತು ವರ್ಷನ ಕಳಕೊಂಡ ಕುಂತೇವಿ. ಇಂದ ಪ್ರಜೆ, ಪ್ರಜಾಪ್ರಭುತ್ವ ಎಲ್ಲೈತಿ ಎಂದ ಕೇಳುವ ಪ್ರಸಂಗನ ಒದಗೇತಿ ಎಂಬ ಮಲ್ಲೇಶಿಯ ಮಾತಿಗೆ ಕಲ್ಲೇಶನಾದರೂ ಏನ ಹೇಳಾಂವ? ಆದರೂ ಧೈರ್ಯ ಕೂಡಿಸಿಕೊಂಡ ಕಲ್ಲೇಶಿ ಮಾತು ಬೆಳೆಸಿದ. ತನ್ನಲ್ಲಿಯ ಕಾವ್ಯಶೈಲಿ ಜಾಗ್ರತಗೊಳಿಸಿ ಚುಟಕಿನ ತಟಕ ನಿವೇದಿಸಿಯೇ ಬಿಟ್ಟ :

ಸಾಗರದಾಚೆ, ಸಾಗರದೀಚೆ
ನಡದೈತಿ ದುರಾಡಳಿತ ಸಮರ
ಆಳುವವರ ಅಹಂಕಾರದ ಮುತ್ತಿನ ಹಾರ !
ದುಡಿದ ದುಡಿಮೇಗಿಲ್ಲ ಪುರಸ್ಕಾರ
ದಿನಕ್ಕೊಂದು ನೀತಿಶಾಸ್ತ್ರ ಕಾರ್ಗತ್ತಲೆ ಕಾರಭಾರ
ಪ್ರಜೆ, ಪ್ರಜಾಪ್ರಭುತ್ವ ನಿರಂತರ ನಿರಾಧಾರ!

ಹುಚ್ಚಿ ಮದವ್ಯಾಗ ಉಂಡವನ ಜಾಣ ಎಂದಾಂಗ ಎಲ್ಲಾನು ನಡದೈತಿ. ಸಮಾನತೆ, ಸಹಕಾರ, ಸಮ್ಮತ, ಸದುವಿನಯ ಕತ್ತಲಿ ಪಾಲಾಗ್ಯಾವ ಎಂದ ಕಲ್ಲೇಶಿ ಮಾತಿಗೆ ಮಲ್ಲೇಶಿಗೆ ಹುರುಪು ಬಂದಾಂಗ ಆಗಿ ಪ್ರಜೆ, ಪ್ರಜಾಪ್ರಭುತ್ವದ ವಿಚಾರಗುಂಟ ವಿಹಂಗಮ ನೋಟ ಬೀರಿ ಏನೋ ಹೊಳೆದಾಂಗ ಆಗಿ ಕಲ್ಲೇಶಿ, ನಾಡಿನಾಗ ಪ್ರಜೆ, ಪ್ರಜಾಪ್ರಭುತ್ವದ ನೆಲೆ-ಬೆಲೆ ತಿಳಕೋಕ ನಾವಿಬ್ಬರೂ ಏಕೆ ಸಂಚಾರ ಕೈಕೊಳ್ಳಬಾರದೆಂದು ಕೇಳಿಯೇ ಬಿಟ್ಟ, ಪ್ರಜೆ, ಪ್ರಜಾಪ್ರಭುತ್ವದ ಚಿಂತೆ ನಮಗ್ಯಾಕಪ್ಪ ಎಂದ ಕಲ್ಲೇಶಿ ಪ್ರಜೆ, ಪ್ರಜಾಪ್ರಭುತ್ವ ಹಳವಂಡಾಗಿ ಹಳಸಿ ಹೋಗಿರುವಾಗ ಅದರ ಬಗ್ಗೆ ಚಿಂತಿ, ಚಿಂತನೆ ಮಾಡಿದರೇನು ಫಲವಿಲ್ಲೆಂದು ಖಂಡತುಂಡಾಗಿ ವಿವರಿಸಿಯೇ ಬಿಟ್ಟ, ಆದರೇನಾಯಿತು ಸಂಚಾರ ಅಂದರ ನನಗೆ ಬಲು ಖುಷಿ, ಇದರ ನೆಪದಿಂದಾದರೂ ನಾಡನ ಸುತ್ತೋಣ ನಡಿ ಎಂದ ಕಲ್ಲೇಶಿ. ಮಲ್ಲೇಶಿ ಯಾರ್‍ಯಾರನ ಎಲ್ಲೆಲ್ಲಿ ಭೆಟ್ಟಿಯಾಗಿ ಪ್ರಜೆ, ಪ್ರಜಾಪ್ರಭುತ್ವದ ಬೆಳಕ ಪಡಿಬಹುದೆಂದು ಲೆಕ್ಕ ಹಾಕಿ ತನ್ನ ವಿಚಾರದ ಸುರಳಿಯನ್ನು ಕಲ್ಲೇಶಿ ಮುಂದ ಹರಿವಿದ. ಸದ್ಯಕ ನಮ್ಮೂರ ಸಮೀಪ ಇರುವ ಸ್ವಾತಂತ್ರ್ಯಯೋಧರಾದ ರಮಾನಂದರನ ಭೆಟ್ಟಿಯಾಗಾಕ ಹೋಗೋಣ, ಅವರ ವಿಚಾರ ತಿಳಕೊಂಡ ಮುಂದ ಮುಂದಕ ಹೋದರಾಯ್ತು ಎಂದ ಮಲ್ಲೇಶಿ ಮಾತಿಗೆ ಕಲ್ಲೇಶಿ ಮನಬಿಚ್ಚಿ ಒಪ್ಪಿಕೊಂಡ.



ರಮಾನಂದರ ಮನೆ ಮುಟ್ಟಿದಾಗ ಇಳ ಹೊತ್ತಾಗಿತ್ತು. ನಾ ಮಲ್ಲೇಶಿ, ಇಂವ ಕಲ್ಲೇಶಿ. ನಿಮ್ಮ ಹತ್ರ ಸ್ವಲ್ಪ ಮಾತಾಡಿ ನಮ್ಮ ಮನಸ್ಸಿನಾಗಿನ ಪ್ರಜೆ, ಪ್ರಜಾಪ್ರಭುತ್ವದ ವಿಷಯದ ಸಮಸ್ಯಾ ಬಗೆ ಹರಿಸಿಕೊಳ್ಳಬೇಕಂತ ಮಾಡೇವಿ, ಎಂದಾಗ ಸ್ವಾತಂತ್ರ್ಯಯೋಧ ರಮಾನಂದರು ನೀವೇನ ಪೇಪರಿನವರ, ಆಕಾಶವಾಣಿಯವರ, ಇಲ್ಲ ದೂರದರ್ಶನದವರ ಎಂದು ಕೇಳಿಯೇಬಿಟ್ಟರು. ಕಲ್ಲೇಶಿ ತಟ್ಟನ ನಾಂವ ಹಿಂದಿನ ಊರಿನವರು. ಪ್ರಜೆ, ಪ್ರಜಾಪ್ರಭುತ್ವದ ಪರಿಸ್ಥಿತಿ ನಾಡಿನಾಂಗ ಹೆಂಗ ಐತಿ ತಿಳಕುಬೇಕೆಂಬ ಹಂಬಲದ ಕಡೆಯವರೆಂದು ಜೋರಾಗಿಯೇ ಹೇಳಿದ. ದೇಶದೊಳಗ ಈಗಂತೂ ಶಿಸ್ತನ ಉಳಿದಿಲ್ಲ, ನನ್ನ ಆರೋಗ್ಯನು ಅಷ್ಟ ಸರಿ ಉಳಿದಿಲ್ಲ. ನಮ್ಮ ಕಾಲದಾಗ ಮಾತ ಅಂದರ ಮಾತು. ಸ್ವಾತಂತ್ರ್ಯಯೋಧರಂದರ ಊರಿಗೆಲ್ಲ ಹೆಮ್ಮೆ, ಪ್ರೀತಿ. ಈಗ ನಮ್ಮನ್ ಕೇಳವರ ಇಲ್ಲ, ಎಲ್ಲಾ ಕೆಟ್ಟ ಹೋಗೇತಿ. ಪ್ರಜಾತಂತ್ರ ಏನೋ ಬಂತು, ಯಾರಿಗೂ ಜವಾಬ್ದಾರಿ ಬರಲೇ ಇಲ್ಲ. ಪ್ರಜಾತಂತ್ರ ಅನಕೋತ ಮಜಾತಂತ್ರ, ಬಲತಂತ್ರ, ಒಳತಂತ್ರ, ಪಕ್ಷಾಂತರ ಮಂತ್ರ ಬೆಳಕೋತ ಬೆಳಕೋತ ಅಲ್ಪ ಮತ ಬಹು ಮತದಾಗ ಎಲ್ಲಾ ಕರಗಿ ತಪ್ಪಾಗಿಬಿಟ್ಟಿತು. ತಮ್ಮಗೋಳೀರಾ, ನಾವರೇ ಏನ್ ಮಾಡಕ ಸಾಧ್ಯ ಐತಿ ಹೇಳರಿ. ಯಾರಾದರೂ ಬಂದ ನಮನ್ ಮಾತಾಡಸತಾರ? ಎಲ್ಲಾರಿಗೂ ಬೇಕಾಗೈತಿ ಅಧಿಕಾರ, ಅಂತಸ್ತು, ಸಾರ್ವಜನಿಕರ ಸಂಪತ್ತು. ಏನಾದರೂ ಹೇಳಾ ಹೋದ್ರೆ, ನಿಮ್ಮ ಕಾಲ ಮುಗದೈತಿ, ಮೂಲಿಹಿಡಕೊಂಡ ಕೂಡ್ರಿ, ಒಣ ಉಸಾಬರಿ ಮಾಡ್ಯಾಕ ನಾವ ಇದ್ದೇ ಇದ್ದೇವಿ, ಎಲ್ಲಾ ಚೊಲುನ ಐತಿ, ವಯಸ್ಸಾಯ್ತು ಅರಳು-ಮರಳು, ಎಂದೆಲ್ಲ ಹೇಳಿ ಬಾಯಿ ಮುಚ್ಚತಾರ. ಹಿಂಗಾದರ ಪ್ರಜಾಪ್ರಭುತ್ವ ಎಲ್ಲಿ ಐತಿ ನೀವೆ ಹೇಳ್ರಿ? ದೀಪವಿಲ್ಲ, ನಳದಾಗ ನೀರಿಲ್ಲ ಅಂದರ ಬೆಳಕ ಬಂದಾಗ ಹಚ್ಚಕೋರಿ, ನೀರ ಬಂದಾಗ ಹಿಡಕೋರಿ ಎನ್ನುವ ಧಿಮಾಕಿನ ಮಾತ ಕೇಳಿ ಕೇಳಿ ಸಾಕಾಗಿ ಹೋಗೇತಿ. ಪ್ರಜೆ ಅಂದರ ಕಾಲಕಸ ಆಗೇತಿ, ಅಲ್ಲಿ-ಇಲ್ಲಿ ಪುಂಡರದ ರಾಜ್ಯ. ಸೆರೆ ಸೇಂದಿ ಅಮಲಿನಾಗ ನಾಡ ತೂಗಾಡುತ್ತಿರುವಾಗ ಪ್ರಜೆ, ಪ್ರಜಾಪ್ರಭುತ್ವ ಜೋಲಿ ಹೊಡೆದು ಬಿಟ್ಟ ಹೆಂಗ ಇರತೈತಿ? ಇಂಥ ಸ್ಥಿತಿಯೊಳಗ ಪ್ರಜಾಪ್ರಭುತ್ವದ ಚಿಂತಿ ನಮಗ್ಯಾಕ ?

ರಮಾನಂದರ ಪ್ರಶ್ನೆಗೆ ಮಲ್ಲೇಶಿ ಉತ್ತರ ಹುಡಕಾಕ ವಿಚಾರದ ಗಂಟ ಬಿಚ್ಚಾಕನ ಬಾಳವ್ಯಾಳ್ಯಾ ಹಿಡುಹಂಗ ಕಂಡಾಂಗ ಕಲ್ಲೇಶಿ ನಾಂವ ಇನ್ನ ಬರತೇವ್ರಿ, ಧನ್ಯವಾದ ಅಂದ. ಮಲ್ಲೇಶಿ ಕಲ್ಲೇಶಿ ದಾರಿಗುಂಟ ಬರುವಾಗ ಕಲ್ಲೇಶಿ ಸನ್ನಿವೇಶಕೆ ತಕ್ಕ ಒಂದು ಚುಟಕಿನ ಚಟಾಕಿ ಹಾರಿಸಿದ :

ಸ್ವಾತಂತ್ರ್ಯಕ್ಕ ಪಟ್ಟ ಕಷ್ಟ ಅಷ್ಟಿಷ್ಟಲ್ಲ
ಪ್ರಜಾತಂತ್ರ ಸ್ಥಾಪಿಸಿದ್ದಂತೂ ಸುಳ್ಳಲ್ಲ
ಗಾಂಧೀಜಿ ಹೇಳದಂಗ ಏನೂ ನಡೆದಿಲ್ಲ
ಒಂದಿಷ್ಟೂ ಬದುಕು ಸಮಾನತೆಗೆ ಹೊಂದಿಲ್ಲ
ಸುತ್ತ-ಮುತ್ತ ಹರಕೊಳ್ಳವರ ಚಟ ತೀರಿಲ್ಲ
ಪ್ರಜೆಯಾಗಿ ಉಳಿಯುವ ಆಸೆ ಯಾರಿಗೂ ಇಲ್ಲ!

ಸ್ವಾತಂತ್ರ್ಯಯೋಧರ ಮಾತು ನನಗಂತೂ ಹಿಡಿಸಿದವು ಎಂದ ಕಲ್ಲೇಶಿ. ಮಲ್ಲೇಶಿ ಮಾತ್ರ ಮುಂದಿನ ಯೋಜನಾದಾಗ ಇದ್ದ. ನಾಳೆ ನಾವು ತಾಲೂಕಿನ

ಸ್ಥಳದಾಗ ನಡೆವ ರಾಜಕೀಯ ಮುಖಂಡರ ಸಭೆಗೆ ಹೋಗೋಣ, ಅಲ್ಲಿ ಈ ಕುರಿತು ವಿಚಾರಿಸೋಣ, ಎಂದದಕ್ಕೆ ಕಲ್ಲೇಶಿ ಗೋಣ ಅಲ್ಲಾಡಿಸಿದ.

ತಾಲೂಕಿನ ಸ್ಥಳದಲ್ಲಿ ರಂಗುರಂಗಿನ ಕಮಾನು, ಸುಸ್ವಾಗತದ ಬ್ಯಾನರುಗಳು, ಭಿತ್ತಿ ಪತ್ರಗಳು, ಸುಣ್ಣ ಸಿಂಗರಿಸಿಕೊಂಡ ರಸ್ತೆಗಳನ್ನು ನೋಡಿ ಕಲ್ಲೇಶಿ ಎಲ್ಲಾ ಡಂಭಾಚಾರ, ಯಾರಿಗೂ ಯಾರೂ ಸ್ವಾಗತ ಮನಸ್ಸಿನಿಂದ ಹೇಳಾವರ ಇಲ್ಲ, ಎಲ್ಲರಿಗೂ ತೋರಿಸಿಕೊಳ್ಳುವ ಹುಚ್ಚು ಅನ್ನೋದರಾಗ, ಮುಖಂಡರ ಭಾಷಣ ಎತ್ತರದ ಧ್ವನಿಯಲ್ಲಿ ಧ್ವನಿವರ್ಧಕದ ಮೂಲಕ ಕೇಳಸಾಕ ಸುರುವಾಯ್ತು. ಓ ನನ್ನ ಹಿಂಬಾಲಕರೆ, ಕುನ್ನಿಗಳೇ, ಕೂಸುಗಳೇ ಯಾವ ಚಿಂತಿಯೂ ನಿಮಗ ಬರಬಾರದು, ಚಿಂತಿ ಇದ್ದರೂ ಹಚ್ಚಕೋಬಾರದು, ನಿಮ್ಮನ್ನ ಸಾಕಿ ಸಲುಹುವ ಜವಾಬ್ದಾರಿ ನಮ್ಮ ಮ್ಯಾಲ ಇದೆ, ಏನಾದರೂ ತ್ರಾಸ ತೊಂದರೆ ಇದ್ದರೆ ನಿವಾರಿಸಾಕ ನಾವ ಇರೋದು, ಮೊದಲು ನೀವು ವಿಚಾರ ಮಾಡೋದನ್ನ ಬಿಟ್ಟ ಬಿಡ್ರಿ, ಸಾಲ ಮಾಡಾಕ ಕಲೀರಿ ಹಾಗೂ ರಿಯಾಯಿತಿ ನಗದಿಗಾಗಿ, ಕಾಳು ಕಡಿಗಾಗಿ ಸಾಲಿನ್ಯಾಗ ನಿಲ್ಲುವ ತರಬೇತಿ ಮಾಡಿಕೊಳ್ಳರಿ, ಈ ಭಾಗ ಎಲ್ಲದರಾಗ ಮುಂದ ಇರುಹಂಗ ಮಾಡೋದು ನನ್ನ ಕರ್ತವ್ಯ ಅಂತ ನಾನ ತಿಳಕೊಂಡಿದ್ದೇನೆ ಎನ್ನುವ ಪೂರ್ವದಲ್ಲಿಯೇ "ನಮ್ಮ ಮುಖಂಡರಿಗೆ ಜಯವಾಗಲಿ, ಚತುರ ಮುಖಂಡರಿಗೆ ಜಯವಾಗಲಿ", ಎಂಬ ಜಯ ಘೋಷಗಳು ಮೊಳಗತೊಡಗಿದವು. ಮಲ್ಲೇಶಿ ಅತ್ಯಂತ ಪ್ರಯಾಸಪಟ್ಟು ಸಭೆಗೆ ಬಂದು ಜಯಕಾರ ಹಾಕುತ್ತಿದ್ದವನನ್ನು ಸಭೆಯಾಚೆ ಕರೆದು ಮಾತಿಗೆ ಆರಂಭಿಸಿದ. ಪ್ರಜಾರಾಜ್ಯದಲ್ಲಿರುವ ನಿನ್ನ ಸ್ಥಾನ-ಮಾನ-ಮರ್ಯಾದೆ-ಮಹತ್ವ ಸ್ವಲ್ಪ ಬಿಡಿಸಿಹೇಳಲು ಸಭಿಕನಲ್ಲಿ ಕೇಳಿಕೊಂಡ. ಸಭಿಕ ಇದೇನು ಕೇಳೋದು? ಇಂಥ ವಿಚಾರ ನನಗ ಗೊತ್ತು ಇಲ್ಲ, ನನಗೇನಿದ್ದರೂ ನಮ್ಮ ಮುಖಂಡರ ಮಾನ-ಮರ್ಯಾದಿನ ಮುಖ್ಯ, ಅವರು ಜಯ ಅನ್ನು ಅಂದರ ಜೈ ಅನ್ನೋದು. ಧಿಕ್ಕಾರ ಧಿಕ್ಕಾರ ಅಂದರ ಹಂಗ ಅನ್ನೋದು, ನೀವ ಈಗ ಕೇಳಾಕ ಹತ್ತಿರೋದು ಇಲ್ಲದ ಉಸಾಬರಿ ಲೆಕ್ಕ. ಪ್ರಜೆ, ಪ್ರಜಾಪ್ರಭುತ್ವ ಚಿಂತಿ ನಮಗ್ಯಾಕ ಬೇಕ್ರಿ? ಅದನ ಬೆಳಸಾಕ, ಉಳಿಸಾಕ ನಮ್ಮ ಮುಖಂಡ ಸದಾ ಸಿದ್ಧ ಇದಾನ. ಭಾರಿ ಕುಳ, ಕೈ ತುಂಬ ರೊಕ್ಕ, ಊರ ತುಂಬ ಹೊಲ, ನೀವ ಕೇಳೋದು ಹೇಳೋದು ನೋಡಿದರ ಬೇರೆ ಕಡೆಯಿಂದ ಬಂದಾಂಗ ಕಾಣಸತ್ತೈತಿ, ನೀವು ನಮ್ಮ ಗೂಡ ಬನ್ನಿರಿ, ತೀರ್ಥ, ಶಾಸ್ತ್ರ ಎಲ್ಲಾ ವ್ಯವಸ್ಥಾ ಇದ, ಅಂದಾಗ ಮಲ್ಲೇಶಿ ಮಕ-ಮಕ ಅಂತ ಕಲ್ಲೇಶಿಯ ಮುಖ ನೋಡಾಕ ಹತ್ತಿದ.

ಮಲ್ಲೇಶಿ ಕಲ್ಲೇಶಿಗೆ ಪ್ರಜೆ, ಪ್ರಜಾಪ್ರಭುತ್ವದ ದಿಕ್ಕನ ತಿಳಿಯದ ಕಕ್ಕಾಬಿಕ್ಕಿಯಾಗಿ ನಿಲ್ಲೋದರಾಗ ಮಹಿಳೆಯರ ಮೇಲಿನ ದಬ್ಬಾಳಿಕೆಗೆ ಧಿಕ್ಕಾರ, ಮಹಿಳೆಯರಿಗೆ ಸಮಾನತೆ ಬೇಕು, ಮಹಿಳೆಯರಿಗೆ ಸ್ಥಾನ-ಮಾನ ಕೊಡಿ, ಆಸ್ತಿ ಹಕ್ಕು ಸಿಗಲಿ, ಅದು-ಇದು ಎಂದು ಮಹಿಳೆಯರ ಗುಂಪು ಹಾಯ್ದು ಹೋಯ್ತು. ಇದನ ನೋಡಿ ಕಲ್ಲೇಶಿಗೆ ಬಹಳ ಹಳಹಳಿ ಎನಿಸಿತು. ಮಹಿಳೆಯರಿಗಿನ್ನು ಸ್ವಾತಂತ್ರ್ಯನ ಸಿಕ್ಕಿಲ್ಲ, ಸಮಾನತೆ ದೊರತಿಲ್ಲ, ಘೋರ ಅನ್ಯಾಯ, ಎಂದು ಬಡಬಡಿಸತೊಡಗಿದ. ಮಲ್ಲೇಶಿ, ಕಲ್ಲೇಶಿ ನಿನಗೂ ಏನೂ ಗೊತ್ತಿಲ್ಲದಂತೆ ಹಿಂಗ್ಯಾಕ ಒದರತಿ, ನಮ್ಮ ಸಂವಿಧಾನ ಗಂಡು-ಹೆಣ್ಣು ಭೇದ ಮಾಡದ ಎಲ್ಲರಿಗೂ ಮೂಲಭೂತ ಹಕ್ಕು ಕೊಟ್ಟೇತಿ. ಹಿಂಗ ಇದ್ದಾಗ ಈ ಮಹಿಳೆಯರು ಸ್ವಾತಂತ್ರ್ಯ ಕೊಡಿ ಅನ್ನಾಕ ಹತ್ತಿದ್ ನೋಡಿದರ ಒಂದು ರೀತಿ ಪ್ರಜೆ, ಪ್ರಜಾಪ್ರಭುತ್ವದ ಕತ್ತಲಿ ಕವಿದಂಗ ಅನುಸುದಿಲ್ಲ ಏನೆಂದು ಮಲ್ಲೇಶಿ ಕೇಳಿಯೇಬಿಟ್ಟ. ಇಟ್ಟ ಹೇಳಿ ನಿಲ್ಲೋದರಾಗ ಕಲ್ಲೇಶಿ ಮತ್ತೊಂದು ಚುಟುಕ ಹಾರಿಸೇಬಿಟ್ಟ :

ಜಯಕಾರ, ಧಿಕ್ಕಾರ ಎಲ್ಲಾ ಚಮತ್ಕಾರ<br>
ಮಹಿಳೆಯರಿಗಿನ್ನೂ ಬಂದಿಲ್ಲ ಸ್ವಾತಂತ್ರ್ಯ<br>
ಹಕ್ಕು ಹಕ್ಕೆಂದು ಹಲಬುತ ಹಳಹಳಿಸುವರಲ್ಲಾ!<br>
ಅಬಲೆಯರ ಅಹವಾಲು ನೆನಗುದಿಯ ಪಾಲ<br>
ಮೀಸಲಾತಿ ಮಸೂದೆ ನಡೆದಾಡಲಾಗಲಿಲ್ಲಾ<br>
ಸರಿಸಮಾನತೆಯ ಕೊರಗಿನಲಿ ಸರಿದವು ದಿನಾ !<br>
ಇರಲಿ ನಡಿ ಮಲ್ಲೇಶಿ ಎಂದ ಕಲ್ಲೇಶಿ.

ಪ್ರಜೆ, ಪ್ರಜಾಪ್ರಭುತ್ವದ ತೊಡಕಿನ ಎಳೆ ಇನ್ನಷ್ಟು ತೊಡಕಾಗಿ ಎಲ್ಲಿ ನೋಡಿದಲ್ಲಿ ಹಕ್ಕಿಲ್ಲ ಹಕ್ಕಿಲ್ಲ, ಏನೇನೂ ದಕ್ಕಿಲ್ಲ ಎನ್ನುವ ಜನರ ಭಾವನಾ ನೋಡಿ ಪ್ರಜಾಪ್ರಭುತ್ವ ಕಾಗದ ಕುದಿರ್ಯಾಗಿ ನಿಂತಂತೆ ಮಲ್ಲೇಶಿಗೆ ಭಾಸವಾಗಕೆ ಹತ್ತಿತ್ತು. ಏನಾದರಾಗಲಿ ನವ ಪೀಳಿಗಿ ಯುವಕರನ್ನು ಮಾತಾಡಿಸಿದರ ಏನಾದರೂ ಪ್ರಜಾಪ್ರಭುತ್ವದ ಬೆಳಕು ಕಂಡೀತೆಂದು ನಿರ್ಣಯಿಸಿ ಒಬ್ಬ ಯುವಕನ ಮಾತಾಡಿಸೋದ ತಡ, ಅಂವಾ ತನ್ನ ವಿಚಾರಧಾರೆಯನು ಬಿಚ್ಚಿ, ಯಾಕರೇ ನಮ್ಮನ್ನು ಹಡದರು ತಿಳಿದಾಗೇತಿ, ಎಲ್ಲಿ ಹೋದರ ಅದೇ ಹಾಡು ದಗಲಭಾಜಿ, ವಶೀಲಿ, ಮಸಲತ್ತು ಎಲ್ಲದರಾಗ ರಾಜಕಾರಣ....ಭವಿಷ್ಯಕ್ಕಿಂತ ಬದುಕೋದ ಕಷ್ಟಾಗೇತಿ, ಇಂಥಾದರಾಗ ಪ್ರಜೆ, ಪ್ರಜಾಪ್ರಭುತ್ವ ಹಕ್ಕು ಅನಕಾ ಹತ್ತಿದ್ದಿರಲ್ಲ ನಿಮಗೇನಾದರೂ ವಾಸ್ತವದ ಅರಿವಾದರೂ ಐತೋ ಇಲ್ಲ ನನಗ ತಿಳಿವಲ್ದು ; ನಮಗ ಉದ್ಯೋಗ ಬೇಕಾಗೈತಿ, ಅದನ ಕೊಟ್ಟ ನಿಮ್ಮ ಪ್ರಜೆ, ಪ್ರಜಾಪ್ರಭುತ್ವ ನಿಮ್ಮ ಹತ್ತರನ ಭದ್ರವಾಗಿ ಇಟಕೊಂಡ ಬಿಡ್ರಿ ಮಹಾರಾಯರೇ; ಈಗರೇ ತಿಳಿತೋ ಇಲ್ಲ ಎಂದ ಯುವಕ ದಬಾಯ್ಸೇಬಿಟ್ಟ. ಕಲ್ಲೇಶಿ, ಏ ತಮ್ಮಾ ಸಿಟ್ಟಾಗಬೇಡ. ಉದ್ಯೋಗ ಉದ್ಯೋಗ ಅಂದರ ಹೆಂಗ ತಂದ ಕೊಡಾಕ ಆಗತೈತಿ ಸ್ವಲ್ಪ ವಿಚಾರಿಸು, ಪ್ರಜಾಪ್ರಭುತ್ವದ ಪದ್ಧತಿ ಗಟ್ಟಿ ಮುಟ್ಟ ಆದರ ಇದ ಸಾಧ್ಯ ಅಂದಾಗ ಯುವಕ ಏನಾದರೂ ಗಟ್ಟಿದ ಆಗಲಿ, ತೆಳ್ಳಗದ ಆಗಲಿ ನೌಕರಿ ಒಂದು ಸಿಕ್ಕರ ಪ್ರಜಾಪ್ರಭುತ್ವ ಐತಿ ಅಂತ ಖಾತ್ರಿ, ನನಗ ನೌಕರಿ ಇಲ್ಲ ಅಂದಾಗ ಎಲ್ಲಿದೆ ಪ್ರಜಾಪ್ರಭುತ್ವ? ಈ ಪ್ರಶ್ನೆಗೆ ಉತ್ತರ ಕೊಡೋದು ಅಷ್ಟ ಹಗರ ಕೆಲಸ ಅಲ್ಲಂತ ಕಲ್ಲೇಶಿ ಮಲ್ಲೇಶಿ ಕಾಲಿಗೆ ಬುದ್ಧಿ ಹೇಳಿಯೇಬಿಟ್ರು.

ಮಲ್ಲೇಶಿ, ಕಲ್ಲೇಶಿ ನೌಕರಿ ಮಾಡುವವರನು ಕಂಡರು, ವ್ಯಾಪಾರ-ವ್ಯವಹಾರ ಕುಶಲರನ್ನು ಮಾತಾಡಿಸಿದರು, ಎಲ್ಲರದು, ತಮ್ಮ ತಮ್ಮ ಚಿಂತಿ. ಪ್ರಜಾಪ್ರಭುತ್ವದ ಚಿಂತಿ ನಮಗ್ಯಾಕ, ಅದರ ಪಾಡಿಗೆ ಅದು ಮೂಲಿ ಹಿಡದೈತಿ, ಅದಕೆ ಸುಮ್ಮನ ತ್ರಾಸ ಕೊಡಬೇಡ್ರಿ, ಇನ್ನಷ್ಟ ದಿನ ಮಲಕೊಂಡ ಇರಲಿ, ಎನ್ನುವವರೇ ಸಿಕ್ಕರು. ಇನ್ನ ತಿರುಗಾಟ ಸಾಕು ತಮ್ಮ, ಒಂದು ಕೆಲಸಾ ಮಾಡೋಣ, ಪ್ರಜೆ, ಪ್ರಜಾಪ್ರಭುತ್ವ ಚಿಂತಿ ಮಾಡುವವರ ಸಂಘ ಸ್ಥಾಪನಾ ಮಾಡಾಕ ಸುದ್ದಿ ಮಾಧ್ಯಮದಾಗ ಒಂದು ಜಾಹೀರಾತು ಕೊಡೋಣ. ಆಗರ ತುಸು ಮಂದಿ ಪ್ರಜಾಪ್ರಭುತ್ವದ ಚಿಂತಿ ಮಾಡಕಾದರೂ ಸುರು ಮಾಡ್ಯಾರು ಎಂಬ ಮಲ್ಲೇಶಿಯ ಸಲಹೆಗೆ ಕಲ್ಲೇಶಿ ಒಪ್ಪಿಗಿ ಸೂಚಿಸಿದ. ಸುದ್ದಿ ಮಾಧ್ಯಮದಲ್ಲಿ ಒಂದು ಜಾಹೀರಾತು ಮಲ್ಲೇಶಿ-ಕಲ್ಲೇಶಿ ಕೂಡಿಯೇ ಹೊರಡಿಸಿದರು. ಇದನ ಪರಾಮರ್ಶಿಸಿದ ಗೃಹ ಖಾತೆ, ಸುಮ್ಮನಿರುವ ಜನರ ಮನಸ್ಸು ಕಲಕುವ ಕೆಲಸ ಮಾಡಿರುವ ಕಲ್ಲೇಶಿ-ಮಲ್ಲೇಶಿಗೆ ಯಾಕ ದಂಡ ಸಂಹಿತೆಯ ಪ್ರಕಾರ ಕ್ರಮ ಜರುಗಿಸಬಾರದೆಂದು ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲು ಆಜ್ಞೆ ಮಾಡಿದ ಸುದ್ದಿ ಕೇಳಿದ ಮೇಲಂತೂ ಜನ ಪ್ರಜಾಪ್ರಭುತ್ವದ ಸುದ್ದಿ ಮಾತಾಡೋದನ್ ನಿಲ್ಲಿಸಿದರು. ಮಲ್ಲೇಶಿ-ಕಲ್ಲೇಶಿನ ಹುಡುಕೊಂಡು ಪೊಲೀಸರು ಬಂದರು: ಪ್ರಜಾಪ್ರಭುತ್ವದ ಭೂಪರ, ಬರ್ರಿ; ಗೊತ್ತಾಗತದ ಹೆಂಗ ಇರತದ ಪ್ರಭುತ್ವ, ಎಂದಾಗ ಮಲ್ಲೇಶಿ-ಕಲ್ಲೇಶಿ ಒಬ್ಬರ ಮುಖ ಒಬ್ಬರು ನೋಡಿಕೊಂಡರು, ಅವರ ಮುಖದಾಗ ಭಯ ಮೂಡಿ ನಿಂತಿತ್ತು; ಪ್ರಜೆ, ಪ್ರಜಾಪ್ರಭುತ್ವದ ಸುದ್ದಿ ಸದ್ದಿಲ್ಲದೆ ಕತ್ತಲೆಯೊಳಗ ಖುಷಿಯಿಂದ ಇದ್ದಂತೆ ಭಾಸವಾಗತೊಡಗಿತ್ತು.

ಸ. ರಾ. ಸುಳಕೂಡೆ
ಜಿಲ್ಲಾ ಸಂಖ್ಯಾ ಸಂಗ್ರಹ ಕಚೇರಿ, ಬೆಳಗಾವಿ - ೫೯೦ ೦೧೬.



# ಬಸ್ಸು ನಿಲ್ದಾಣದ ಚಿತ್ರಗಳು

ಪಿ. ಬಿ. ಪ್ರಸನ್ನ

ನಮ್ಮ ಶಾಮು ಮಾವ, ಊರಿಗೆ ಯಾರೇ ನಮ್ಮ ಸಂಬಂಧಿಕರು ಬರುವುದಿದ್ದರೆ ಅವರನ್ನು ಕರೆದುಕೊಂಡು ಬರಲು ಒಂದು ಗಂಟೆ ಮುಂಚಿತವಾಗಿಯೇ ಬಸ್ಸು ನಿಲ್ದಾಣಕ್ಕೆ ಓಡುತ್ತಿದ್ದನು. ಮನೆಯಲ್ಲಿದ್ದವರು, ''ಬಸ್ಸು ಬರೋದು ಒಂಬತ್ತು ಗಂಟೆಗೆ. ನೀನ್ಯಾಕೆ ಮಾರಾಯ ಏಳೂವರೆಗೇ ಅಲ್ಲಿರೋದು? ಎಂಟೂವರೆ ಮೇಲೆ ಹೋಗ್ಬಾರ್ದಾ?'' ಎಂದು ಕೇಳಿದರೆ, ''ಬಸ್‌ಸ್ಟ್ಯಾಂಡಿನಲ್ಲಿ ಇರೋ ಮಜಾನೇ ಬೇರೆ. ನಿಮ್ಗೇನ್ರೋ ಗೊತ್ತು?'' ಎನ್ನುತ್ತಿದ್ದ. ''ಇಸ್ಸಿ.....ಬಸ್‌ಸ್ಟ್ಯಾಂಡಿನಲ್ಲಿ ಎಂತ ಸುಡುಗಾಡು ಮಜಾ? ಜನ ಜನ ಜನ ಗಲಾಟೆ ಗೌಜ ಗಲೀಜು ಶಿಕೌ.....'' ಎಂದು ನಾಗತ್ತೆ ಅವನ ಮಾತಿಗೆ ಮೂಗು ಮುರಿಯುತ್ತಿದ್ದಳು. ಆಗ ನಾನು, ''ಏನು ಮಾವ.... ಇಷ್ಟು ವರ್ಷ ಆದ್ರೂ ಲೈನ್ ಹೊಡಿಯೋ ಚಟ ಬಿಟ್ಟಿಲ್ಲವಾ?'' ಎಂದು ಛೇಡಿಸುತ್ತಿದ್ದೆ. ಯಾರು ಎಷ್ಟೇ ಹೇಳಿದರೂ ಶಾಮು ಮಾವ ಮಾತ್ರ ತನ್ನ ಚಾಳಿ ಬಿಡಲೇ ಇಲ್ಲ.

ಕೆಲವು ವರ್ಷಗಳ ನಂತರ ಉದ್ಯೋಗ ನಿಮಿತ್ತ ನಾನು ಊರನ್ನು ಬಿಟ್ಟು ದೂರದ ಒಂದು ನಗರದಲ್ಲಿ ವಾಸ ಮಾಡಬೇಕಾಗಿ ಬಂತು. ಆ ನಗರದಿಂದ ನಾನು ಕೆಲಸ ಮಾಡುತ್ತಿದ್ದ ಸ್ಥಳ ಐವತ್ತು ಕಿಲೋಮೀಟರ್‌ನಷ್ಟು ದೂರ. ನಿತ್ಯವೂ ಬಸ್ಸಿನಲ್ಲಿ ಒಂದೂವರೆ ಗಂಟೆ ಪ್ರಯಾಣ. ಜೊತೆಗೆ ಸರ್ಕಾರಿ ಬಸ್ಸು. ನಮ್ಮೂರಲ್ಲಾದರೆ ಖಾಸಗಿ ಬಸ್ಸು ನಿಮಿಷಕ್ಕೊಂದರಂತೆ. ಆದರೆ ಸರ್ಕಾರಿ ಬಸ್ಸು ಹಾಗಲ್ಲ. ಗಂಟೆ-ಎರಡು ಗಂಟೆಗೊಂದರಂತೆ. ನನಗೋ ಇದೆಲ್ಲ ಹೊಸ ಅನುಭವ. ಬಸ್‌ಸ್ಟ್ಯಾಂಡಿನಲ್ಲಿ ಬೆಳಿಗ್ಗೆ-ಸಂಜೆ ಒಂದರಿಂದ ಒಂದೂವರೆ ಗಂಟೆ ಕಾಯಬೇಕಾಗಿಬರುತ್ತಿತ್ತು. ಪ್ರಾರಂಭದಲ್ಲಿ ಹಿಂಸೆ ಅನ್ನಿಸುತ್ತಿತ್ತು. ಒಮ್ಮೆ ಊರಿಗೆ ಹೋಗಿದ್ದಾಗ ಶಾಮು ಮಾವ ನನ್ನ ಪಾಡು ಕೇಳಿ ನಕ್ಕ. ''ಬಸ್‌ಸ್ಟ್ಯಾಂಡಿನಲ್ಲಿ ಸಿಗುವ ಅನುಭವಗಳಿಗೆ ತೆರ್ರೋಬೇಕು. ಆಗ ಸಿಗೋದು ಮಜಾ!'' ಎಂದ. ಅವನು ಹೇಳಿದಂತೆ ಮಾಡತೊಡಗಿದೆ. ದಿನದ ಎಂಟನೇ ಒಂದು ಭಾಗವನ್ನು ಬಸ್‌ನಿಲ್ದಾಣದಲ್ಲಿಯೇ ಕಳೆಯಬೇಕಾಗಿತ್ತಲ್ಲವೆ? ಕ್ರಮೇಣ ಶಾಮು ಮಾವ ಹೇಳಿದ್ದು ನಿಜ ಅನ್ನಿಸಿತು. ಈಗ ನನಗೆ ಬಸ್ಸು ನಿಲ್ದಾಣ ಒಂದು ವಿಶ್ವವಿದ್ಯಾಲಯದಂತೆ ಕಾಣತೊಡಗಿದೆ.

ಕುಮಾರವ್ಯಾಸ ತನ್ನ ಭಾರತದ ಪ್ರಾರಂಭದಲ್ಲಿ ''ಅರಸುಗಳಿಗಿದು ವೀರ ದ್ವಿಜರಿಗೆ ಪರಮ ವೇದದ ಸಾರ...'' ಎಂದೆಲ್ಲ ತನ್ನ ಕಾವ್ಯದ ಮಲ್ಟಿಪರ್ಪಸ್ ಉಪಯೋಗಗಳನ್ನು ಹೇಳಿದ್ದಾನೆ. ಹಾಗೆಯೇ ಬಸ್ಸು ನಿಲ್ದಾಣ ಕೂಡ. ವ್ಯಾಪಾರಿಗಳ ಲಾಭದಾಗರ. ಜೇಬುಗಳ್ಳರ ಕರ್ಮಭೂಮಿ. ನಿರುದ್ಯೋಗಿಗಳ ಅಲೆದಾಟದ ತಾಣ. ಪ್ರಣಯಿಗಳ ಮಿಲನ-ಪಲಾಯನದ ರಂಗಸ್ಥಳ. ಅಲೆಮಾರಿ ದನ, ಕರು, ನಾಯಿ, ಕತ್ತೆ, ಹಂದಿಗಳ ನೆಲೆವೀಡು. ಹಲವು ಊರುಗಳ ಸಂಪರ್ಕ ಸೇತು. ಸೂರಿಲ್ಲದವರ ಆಶ್ರಯ ತಾಣ - ಹೀಗೆ ಹತ್ತು ಹಲವು ರೀತಿಯಲ್ಲಿ ಪ್ರಯೋಜನಕಾರಿ.

ನಮ್ಮೂರಲ್ಲಿ ಬಸ್ಸು ಬಂದ ತಕ್ಷಣ ಜನರು ಸೀಟು ಹಿಡಿಯುವುದನ್ನು ನೋಡುವುದೇ ಒಂದು ಚೆಂದ. ಒಂದು ಬಸ್ಸನ್ನು ಹತ್ತಲು ನಾಲ್ಕು ಬಸ್ಸಿನಷ್ಟು ಜನ. ಎಲ್ಲರಿಗೂ ಸೀಟಾಧಿಪತಿಗಳಾಗಬೇಕೆಂಬ ಹಂಬಲ. ಹಾಗಾಗಿ ಬಸ್ಸು ಬಂದ ತಕ್ಷಣ ಅದಕ್ಕೊಂದು ಬಾಗಿಲಿದೆ ಎಂದು ಯಾರೂ ತಿಳಿದುಕೊಳ್ಳುವುದಿಲ್ಲ. ಡ್ರೈವರನ ಪಕ್ಕದ ಬಾಗಿಲು, ಬಸ್ಸಿನ ಕಿಟಕಿಗಳಲ್ಲಿ ಪ್ರವೇಶ ಮಾಡುತ್ತಾರೆ. ದಪ್ಪ ಶರೀರಗಳಿಗೆ ನುಗ್ಗಾಟದಲ್ಲಿ ಕಷ್ಟವಾದರೆ ಹೆಂಡತಿ, ಮಕ್ಕಳನ್ನು ಛೂ ಬಿಡುತ್ತಾರೆ. ಅದೂ ಸಾಧ್ಯವಾಗದಿದ್ದರೆ 'ಶಲ್ಯಾಸ್ತ್ರ', 'ಬ್ಯಾಗಸ್ತ್ರ'ಗಳನ್ನು ಬಳಸಿ ಸೀಟನ್ನು ವಶಪಡಿಸಿಕೊಳ್ಳುತ್ತಾರೆ. ಯಾರ ಶಲ್ಯ, ಬ್ಯಾಗು ಸೀಟಲ್ಲಿ ನಾಟಿದೆಯೋ ಅವರದೇ ಸೀಟು. ನಿರಾಯುಧರಾಗಿ ಬಂದವರು ಚಪ್ಪಲನ್ನೇ ಅಸ್ತ್ರವಾಗಿಸಲು ಹಿಂದೆ ಮುಂದೆ ನೋಡುವುದಿಲ್ಲ. ಅಂತೂ ಹೋರಾಟದಲ್ಲಿ ಯಾರು ಬಲಶಾಲಿಗಳೋ ಅವರು ಗೆಲ್ಲುತ್ತಾರೆ. ಉಳಿದವರು ನಿರಾಶರಾಗುವುದಿಲ್ಲ. ಬಸ್ಸಿನ ಛಾವಣಿಯನ್ನೇರಿ ಪ್ರಕೃತಿಗೆ ತಮ್ಮ ದೇಹವನ್ನು ಒಡ್ಡಿಕೊಂಡು ಕಡ್ಲೆಕಾಯಿ ಮೆಲ್ಲುತ್ತ, ಉಳಿದವರ ಬಳಿ ಹರಟುತ್ತ ಟಾಪ್‌ಕ್ಲಾಸ್ ಪ್ರಯಾಣದ ಸುಖವನ್ನು ಅನುಭವಿಸುತ್ತಾರೆ.

ದೇವಸ್ಥಾನದಲ್ಲಿ ತುಳಸಿ ಅರ್ಚನೆ, ಬಿಲ್ವಾರ್ಚನೆ, ಅಷ್ಟೋತ್ತರ ಮೊದಲಾದವುಗಳನ್ನು ನೀವು ನೋಡಿರಬಹುದು. ಅಂತೆಯೇ ಕ್ಷೀರಾಭಿಷೇಕ, ಪಂಚಾಮೃತವೇ ಮೊದಲಾದವುಗಳನ್ನೂ ನೋಡಿರಬಹುದು. ಅಂಥ ಸೇವೆಗಳು ನಿಮಗೆ ಆಗಬೇಕೆ ? ಬಸ್ಸು ನಿಲ್ದಾಣದಲ್ಲಿ ಜನರಿಂದ ತುಂಬಿರುವ ಬಸ್ಸುಗಳ ಕೆಳಗೆ ನಿಂತರೆ ಸಾಕು. ಮುಸುಂಬಿ, ಬಾಳೆಹಣ್ಣು, ಕಿತ್ತಲೆಯೇ ಮೊದಲಾದ ಹಣ್ಣುಗಳ ಸಿಪ್ಪೆಯಿಂದ ಅರ್ಚನೆ ಮಾಡಿಸಿಕೊಳ್ಳಬಹುದು. ವೀಳ್ಯರಸಾಭಿಷೇಕ, ಪುಟ್ಟ ಮಕ್ಕಳ ಮೂತ್ರಾಭಿಷೇಕಗಳನ್ನು ಕೂಡ ಬಸ್ಸಿನ ಕೆಳಗೆ ನಿಂತು ಮಾಡಿಸಿಕೊಳ್ಳಬಹುದು.

ಬಸ್ಸು ನಿಲ್ದಾಣ ಭಿಕ್ಷುಕರ ಆಗರವೂ ಹೌದು. ನಿಜವಾಗಿ ನಿರ್ಗತಿಕರಾಗಿದ್ದು ಅಶಕ್ತಿಯಿಂದ ಭಿಕ್ಷೆ ಬೇಡುವವರು ಕೆಲವರು. ಅದನ್ನೇ ವೃತ್ತಿ ಮಾಡಿಕೊಂಡು ಕೈಕಾಲು ಗಟ್ಟಿಯಾಗಿದ್ದರೂ ಬೇಡುವವರು ಹಲವರು. ಮಹಾನಗರಗಳ ಬಸ್ಸು ನಿಲ್ದಾಣಗಳಲ್ಲಿ ಭಿಕ್ಷೆ ಬೇಡುವುದಕ್ಕೂ ಷಿಫ್ಟ್ ಇದೆ. ಬೆಳಿಗ್ಗೆ ಆರರಿಂದ ಹನ್ನೆರಡು, ಹನ್ನೆರಡರಿಂದ ಸಂಜೆ ಆರು ಹಾಗೂ ಸಂಜೆ ಆರರಿಂದ ರಾತ್ರಿ ಹನ್ನೊಂದು-ಹನ್ನೆರಡರವರೆಗೆ ಕೊನೆಯ ಪಾಳಿ. ಹೀಗೆ ಭಿಕ್ಷೆ ಎತ್ತುವವರಿಗೆ ಒಬ್ಬ ಭಿಕ್ಷಾಧಿಪತಿ ಇರುತ್ತಾನೆ. ಆತನಿಗೆ ಪ್ರತಿಯೊಬ್ಬರೂ ದಿನದ ಆದಾಯದ ಇಂತಿಷ್ಟನ್ನು ಕೊಡಬೇಕು. ಎಷ್ಟೋ ಸಂದರ್ಭದಲ್ಲಿ ಶಾಲೆಗೆ ಹೋಗಬೇಕಾದ ಪುಟ್ಟ ಮಕ್ಕಳನ್ನು ವಿಕಲಾಂಗಗೊಳಿಸಿ ಈ ವೃತ್ತಿಗೆ ತಳ್ಳುವುದಿದೆ. ಇಂಥ ಕರಾಳ ರೂಪಗಳನ್ನು ನೀವು ನೋಡಬೇಕಾದರೆ ಕತ್ತಲೆಯ ಹೊತ್ತಿನಲ್ಲಿ ಬಸ್‌ಸ್ಟ್ಯಾಂಡಿನ ಮೂಲೆಗಳಲ್ಲಿ ನೀವಿರಬೇಕು. ಭಿಕ್ಷಾಧಿಪತಿಗಳು ಮಕ್ಕಳನ್ನು ಬೆದರಿಸುವ, ಭಿಕ್ಷೆ ಎತ್ತಲು ತರಬೇತಿ ಕೊಡುವ, ಪ್ರಾಣಿಗಳಂತೆ ಕಾಣುವ ದೃಶ್ಯಗಳನ್ನು ನೋಡಬಹುದು.

ನಾನು ಕಛೇರಿಯ ಕೆಲಸ ಮುಗಿಸಿ, ಸಂಜೆ ಹೊತ್ತು ಬಸ್ಸಿಗಾಗಿ ಕಾಯುವಾಗ ಹೊಸ ಶೈಲಿಯ ಭಿಕ್ಷುಕರನ್ನು ಎದುರಿಸಿದ್ದೇನೆ. ಅವರು ಹಣ ವಸೂಲಿ ಮಾಡುವ ಪದ್ಧತಿ ಹೀಗೆ :

''ಸಾರ್, .....ನಮಸ್ಕಾರ''

''ನಮಸ್ಕಾರ''

''ಪರಿಚಯ ಆಗ್ಲಿಲ್ವೇ?''

''ಇಲ್ವಲ್ಲಾ''

''ನಾನು ಸಾರ್......ಕುಬೇರಪ್ಪ. ಇಷ್ಟು ಬೇಗ ಮರ್ತು ಬಿಟ್ರಾ?''

''ಕುಬೇರಪ್ಪನಾ?........ ಒಳ್ಳೇದು, ಏನು ವಿಷ್ಯ ಹೇಳಿ''

ಈ ಮಾತುಕತೆ ನಮ್ಮಿಬ್ಬರಲ್ಲಿ ನಡೆಯುತ್ತಿದ್ದಂತೆ ಬಸ್ಸು ಬಂತು. ನನಗೆ ಸೀಟು ಹಿಡಿಯಲು ಆತುರ. ತಕ್ಷಣ ಆ ಕುಬೇರಪ್ಪ ಬಸ್ಸಿನೊಳಗಿದ್ದ ಜನರು ಇಳಿಯುವ ಮೊದಲೇ ಛಂಗನೆ ನುಗ್ಗಿ ನನಗಾಗಿ ಕಿಟಕಿ ಬದಿಯ ಸೀಟು ಹಿಡಿದಿದ್ದ. ಅವನಿಗೆ ಥ್ಯಾಂಕ್ಸ್ ಹೇಳಿ ಆಸೀನನಾದೆ. ಇನ್ನೇನು ಬಸ್ಸು ಹೊರಡಬೇಕು ಅಷ್ಟರಲ್ಲಿ, ''ಸಾರ್ ಹತ್ತು ರೂಪಾಯಿ ಕೊಡಿ'' ಎಂದ ಆದೇಶದ ಧ್ವನಿಯಲ್ಲಿ. ನನಗೆ ಆಶ್ಚರ್ಯ. ''ಯಾಕೆ?'' ಎಂದೆ. ''ಏನ್ಸಾರ್..... ಹತ್ತು ದಿನದಿಂದ ನಿಮ್ಗೆ ಸೀಟು ರಿಸರ್ವ್ ಮಾಡ್ತಾ ಇದ್ದೇನೆ. ಒಟ್ಟು ಸೇರ್‍ಸಿ ಕೊಡ್ಬಾರ್ದಾ ? ಬಡವ್ನ ಹೊಟ್ಟೇ ಮೇಲೆ ಹೊಡೀಬೇಡಿ ಸಾರ್'' ಎಂದ. ನನಗಿದು ಎರಡನೆಯ ಆಘಾತ. ''ಏನಯ್ಯ... ನಿನ್ನನ್ನ



ನೋಡ್ತಾ ಇರೋದೇ ಇವತ್ತು. ಹತ್ತು ದಿನದಿಂದ ಸೀಟು ಹಿಡೀತಾ ಇದ್ದೇನೇಂತ ಹೇಳ್ತಾ ಇದ್ದೀಯ. ಇವತ್ತೂ ಕೂಡ ನಾನೇನೂ ನಿಂಗೆ ಸೀಟು ಕಾದಿಡ್ತೂಂತ ಹೇಳ್ಳಿಲ್ಲ'' ಎಂದು ದಬಾಯಿಸಿದೆ. ಅವನ ಧ್ವನಿಯಲ್ಲಿದ್ದ ನಾಜೂಕುತನವು ಸಂಪೂರ್ಣ ಮಾಯವಾಯಿತು. ''ಏನ್ರೀ..... ನೋಡೋದಕ್ಕೆ ಸಭ್ಯರತರ ಕಾಣ್ತೀರಿ, ಮಾಡೋದು ಮಾತ್ರ ಇಂಥ ಹಲ್ಕಾ ಕೆಲಸ. ಹತ್ತು ರೂಪಾಯಿ ಸಾಲ ತಗೊಂಡು ಈಗ ಇಲ್ಲ ಅನ್ತೀರಾ? ಏನೋ ಆಫೀಸರ್ರೂಂತ ಕೊಟ್ಟೆದ್ದೆ. ನೋಡಿ ಸಾರ್ ಇವ್ರ ಕಿತಾಪತಿ. ಅಕ್ಷರ ಕಲ್ತು ಠಸ್ಸು ಪುಸ್ಸೂಂತ ಇಂಗ್ಲಿಷ್ ಮಾತಾಡೋರೆಲ್ಲ ಹೀಗೆ'' ಎಂದು ಬಸ್ಸಿನಲ್ಲಿ ಇದ್ದವರ ಬಳಿ ನ್ಯಾಯ ಒಪ್ಪಿಸಿದ. ಉಳಿದವರೆಲ್ಲ ನನ್ನನ್ನು ಅನುಮಾನದ ಕಣ್ಣುಗಳಿಂದ ನೋಡತೊಡಗಿದರು. 'ಸಾಲ ತಗೊಂಡಿದ್ದೇನೆ' ಅಂತ ಆತ ತನ್ನ ಪ್ಲೇಟು ಬದಲಾಯಿಸಿದರೂ ಕೂಡ ಎಲ್ಲರೂ ಅವನನ್ನೇ ನಂಬಲು ಸಿದ್ಧರಾಗಿದ್ದರು. ನನಗೂ ಪರಿಸ್ಥಿತಿ ಕೈಮೀರಿ ಹೋಗುತ್ತಿದೆ ಅನ್ನಿಸಿತು. ಗಲಾಟೆ ಕೇಳಿ ಬಸ್ಸಿನ ಕೆಳಗೂ ಒಂದಷ್ಟು ಜನ ಸೇರಿದ್ದರು. ಹತ್ತು ರೂಪಾಯಿ ತೆಗೆದು ಅವನ ಕೈಯೊಳಗಿಟ್ಟದ್ದೇ ಆತ ಕ್ಷಣಾರ್ಧದಲ್ಲಿ ಮಾಯವಾದ! ಅಷ್ಟರವರೆಗೆ ಸುಮ್ಮನಿದ್ದ ಒಬ್ಬರು ಪ್ರಯಾಣಿಕರು, ''ಹ್ಹೆ......ಹ್ಹೆ......ಹ್ಹೆ...... ನೀವೂ ಜಾರಿ ಬಿದ್ರಾ. ಇವ್ನ ಚಾಳೀನೇ ಇದು ಸಾರ್, ಕಳ್ದವಾರ ನನ್ನೂ ಇದೇ ತರ ಮಾಡಿ ಇಪ್ಪತ್ತು ಕಿತ್ತಿದ್ದ. ನೀವೇ ಲಕ್ಕಿ ಹತ್ತು ಕೊಟ್ರಿ. ಇದೊಂಥರ ದರೋಡೆ ರೀತಿಯ ಭಿಕ್ಷೆ'' ಎಂದರು.

ನಿಲ್ದಾಣದಿಂದ ಹೊರಡುತ್ತಿರುವ ಬಸ್ಸನ್ನು ಹತ್ತುವ ಚಟದವರು ನಮ್ಮೂರಲ್ಲಿ ಬಹಳ ಮಂದಿ ಇದ್ದಾರೆ. ಕಂಡಕ್ಟರನು ಬಸ್ಸಿನೊಳಗಿದ್ದ ಎಲ್ಲರಿಗೂ ಟಿಕೇಟು ಕೊಟ್ಟು, ಟಿ.ಸಿ. ಯ ಬಳಿ ಎಂಟ್ರಿ ಹಾಕಿಸಿ, ಬಸ್ಸನ್ನೇರಿ ಬಾಗಿಲು, ಚಿಲಕ ಹಾಕಿ ರೈಟ್ ಎಂದ ಬಳಿಕ ಇವರಿಗೆ ಬಸ್ಸನ್ನು ಏರಬೇಕು ಎಂದು ಜ್ಞಾನೋದಯವಾಗುತ್ತದೆ. ಅಷ್ಟರಲ್ಲಾಗಲೇ ಬಸ್ಸು ಕೆಲವು ಮೀಟರು 'ಡುರುಡುರು' ಎಂದು ನಿಧಾನವಾಗಿ ತುಂಬು ಗರ್ಭಿಣಿಯಂತೆ ಚಲಿಸುತ್ತಿರುತ್ತದೆ. ಅಷ್ಟರತನಕ ಬೀಡಿ ಎಳೆಯುತ್ತ, ಎಲ್ಲೋ ನೋಡುತ್ತ, ಹರಟೆ ಹೊಡೆಯುತ್ತಿದ್ದವರು ಒಮ್ಮೆಲೆ ಬಸ್ಸಿನ ಹಿಂದೆ ಓಡತೊಡಗುತ್ತಾರೆ. ಬಸ್ಸನ್ನು ಬಡಿಯುತ್ತ ''ನಿಲ್ಸಿ ನಿಲ್ಸಿ'' ಎನ್ನುತ್ತಾರೆ. ಬಸ್ಸು ಚಲಿಸುತ್ತಿದ್ದಂತೆ ಕಂಡಕ್ಟರು ಕರುಣೆಯಿಂದ ಬಾಗಿಲು ತೆರೆಯುತ್ತಾನೆ. ಇವರು ಓಡುತ್ತಲೇ ಹತ್ತುವ ಸಾಹಸಕ್ಕೆ ಮುಂದಾಗುತ್ತಾರೆ. ಆಗ ಫುಟ್‌ಬೋರ್ಡಿನಲ್ಲಿ ನಿಂತವರು ಯಾರಾದರೂ ಇವರ ಕಷ್ಟ ನೋಡಲಾರದೆ ಸಹಾಯದ ಹಸ್ತ ಚಾಚುತ್ತಾರೆ. ತಾಕತ್ತಿದ್ದವರು ಅವರ ನೆರವಿನಿಂದ ಒಳಹೊಕ್ಕು ಬಸ್ಸಿನಲ್ಲಿ ಪಾದ ಊರಲು ಸಮರ್ಥರಾಗುತ್ತಾರೆ. ಅದಿಲ್ಲವಾದರೆ ಸಹಾಯ ಹಸ್ತ ಚಾಚಿದವರನ್ನೇ ಕೆಳಕ್ಕೆಳಿಸಿಬಿಡುತ್ತಾರೆ! ''ನಾನಂತೂ ಹತ್ತುವುದಿಲ್ಲ, ನೀನೂ ಹೋಗಬೇಡ. ಸಮಾನ ದುಃಖಿಗಳಾಗೇ ಇರೋಣ'' ಎನ್ನುವ ಪಾಲಿಸಿ ಅವರದ್ದು. ಎಷ್ಟೋ ಸಾರಿ ಅವರಿಬ್ಬರೊಳಗೆ ಕೈ ಕೈ ಮಿಲಾಯಿಸುವವರೆಗೂ ಹೋಗುವುದಿದೆ.

ದೂರದ ಊರಿಗೆ ಸಂಬಂಧಿಕರನ್ನು ಮಿತ್ರರನ್ನು ಕಳುಹಿಸಲು ಬಸ್ಸು ನಿಲ್ದಾಣಕ್ಕೆ ಬರುವವರಿದ್ದಾರೆ. ಬಸ್ಸು ಗುರು ಗುರು ಎಂದು ಹೊರಡಲು ಸಿದ್ಧವಾದಾಗ ಕೊನೇಕ್ಷಣದ ಮಾತುಗಳು ಕೇಳಿಬರುತ್ತವೆ. ''ಕಾಗದ ಹಾಕು'' ''ಹೋದ ತಕ್ಷಣ ಫೋನ್ ಮಾಡು'', ''ಮಗು ಜೋಪಾನ. ಗಾಳಿ ಬೀಸೀತು ಕಿವಿ ಮುಚ್ಚು'' (ಕೆ. ಎಸ್. ನರಸಿಂಹಸ್ವಾಮಿ ಅವರ ರೈಲ್ವೆ ನಿಲ್ದಾಣದಲ್ಲಿ ಕವನ ನೆನಪಾಗುತ್ತದೆ) ಎಂದೆಲ್ಲ ಎಚ್ಚರಿಕೆ ಕೊಡುವವರಿದ್ದಾರೆ. ಇನ್ನು ಕೆಲವರು, ''ಬ್ಯಾಗಲ್ಲಿರುವ ಒಂದು ಲಕ್ಷ, ಹೆಂಡ್ತಿಯ ವ್ಯಾನಿಟಿ ಬ್ಯಾಗಲ್ಲಿರುವ ಆಭರಣಗಳು ಎಲ್ಲ ಜೋಪಾನ. ನಿದ್ದೆ ಮಾಡಿ ಕಳ್ಕೋಬೇಡ. ಇಳಿಯೋವಾಗ ಜಾಗ್ರತೆ'' ಎಂದು ಗಟ್ಟಿಯಾಗಿ ಎಚ್ಚರಿಕೆಯ ಮಾತುಗಳನ್ನು ಹೇಳಿ, ಅವರಲ್ಲಿರುವ ಹಣ ಆಭರಣಗಳ ವಿಷಯವನ್ನು ಜಗಜ್ಜಾಹೀರುಗೊಳಿಸುವ ಮಹಾನ್ ಭೂಪರಿದ್ದಾರೆ. ''ಏ......ಮಾಬ್ಲಾ ಈ ಸಾರಿ ನಿನ್ನ ಹೆಂಡ್ತಿ ಗಂಡೇ ಹೆರ್ಕ...... ಮತ್ತೇನಾದ್ರೂ ಹೆಣ್ಣಂತ ಫೋನ್ ಮಾಡಿದ್ದಾ ನೀವಿಬ್ರೂ ಮನೀಗ ಕಾಲಿಡೂಕ್ಕಾಗ'' ಎಂದು ಅತ್ತೆಯೊಬ್ಬಳು ನಮ್ಮೂರಲ್ಲಿ ಸೊಸೆಯನ್ನು ಹೆರಿಗೆಗೆಂದು ತವರು ಮನೆಗೆ ಕಳುಹಿಸಿಕೊಡುವಾಗ ಎಲ್ಲರಿಗೂ ಕೇಳುವಂತೆ ಮಗನ ಬಳಿ ತಾಕೀತು ಮಾಡುತ್ತಿದ್ದಳು. ಬಸ್ ಹೊರಡುವಾಗ ಒಳಗೆ ಕುಳಿತಿದ್ದವರೊಬ್ಬರು ಹೊರಗೆ ತಲೆ ಹಾಕಿ, ತಮ್ಮನ್ನು ಕಳುಹಿಸಿಕೊಡಲು ಬಂದವರ ಬಳಿ, ''ಆಯಿ, ಅಪ್ಪಯ್ಯ, ಕವ್ವ, ಅಜ್ಜ, ಮಾವ, ದೊಡ್ಡಾಯಿ, ದೊಡ್ಡಪ್ಪ, ಆಚೆ ಮನೆ ಮಾಬ್ಲೇಸ್ರಣ್ಣ, ಈಚೆ ಮನೆ ಗಪ್ಪತಿಯಣ್ಣ, ಮೂಲೆ ಮನೆ ನಾಗತ್ತೆ, ಹಿಂಬದಿ ಮನೆ ಎಂ.ಎಸ್. ಭಟ್ಟ, ಜೋಶಿ ಎಲ್ರನ್ನೂ ಕೇಳಿದ್ದೀ ಹೇಳು. ಹಾಂಗೆ ಎಮ್ಮನೆ ರಾಜುಂಗೆ ಎನ್ ಹೇಳಿಕೇಲಿ ನಾಲ್ಕು ಬಿಸ್ಕಿಟ್ ಕೊಡು'' ಎಂದು ದೊಡ್ಡ ಪಟ್ಟಿಯನ್ನೇ ಕೊಟ್ಟಿದ್ದರು (ವಿಶೇಷ ಸೂಚನೆ : ಇಲ್ಲಿ ರಾಜು ಅಂದರೆ ಅವರ ಮನೆಯ ನಾಯಿ ಎಂದು ಪಾಠಕ ಮಹಾಶಯರು ಭಾವಿಸಬೇಕು). ಈ ಮಾತುಗಳು ಕೇಳಿ ಬಂದದ್ದು ನನ್ನ ಪತ್ನಿಯ ತವರೂರಾದ ಉತ್ತರ ಕನ್ನಡದ ಒಂದು ಬಸ್ಸು ನಿಲ್ದಾಣದಲ್ಲಿ.

ನಮ್ಮ ಊರಿನ ಮತ್ತು ಸುತ್ತ ಮುತ್ತಣ ಹಳ್ಳಿಗಳ ಬಸ್ಸು ನಿಲ್ದಾಣದ ಕತೆಯೇ ಬೇರೆ. ಬೆಳಿಗ್ಗೆ-ಸಂಜೆ ಒಂದೊಂದು ಬಸ್ಸು ಟಿ. ಸಿ. ಗೆ ನೆನಪಾದಾಗ, ಡ್ರೈವರು ಕಂಡಕ್ಟರುಗಳಿಗೆ ಪುರುಸೊತ್ತು ಇದ್ದಾಗ ಮಾತ್ರ ಬರುವ ಊರು ನಮ್ಮದು. ಉಳಿದ ಸಂದರ್ಭಗಳಲ್ಲಿ ಬಸ್ಸು ನಿಲ್ದಾಣವು ರಾಮಣ್ಣನ 'ಶಿವಳ್ಳಿ ಬ್ರಾಹ್ಮಣರ ಫಲಾಹಾರ ಮಂದಿರ'ವಾಗಿ ಮಾರ್ಪಡುತ್ತದೆ. ಹಳ್ಳಿಯ ಯುವಕರ ಹರಟೆಯ, ಮುದುಕರ ವಾಯುಸೇವನೆಯ ಕೇಂದ್ರವೂ ಹೌದು. ನಮ್ಮ ಪಕ್ಕದ ಊರಿಗೆ ಇನ್ನೂ ಬಸ್‌ರೂಟು ಸ್ಯಾಂಕ್ಷನ್ ಆಗಿಲ್ಲ ಆದರೂ ಯಾರೋ ಪುಣ್ಯಾತ್ಮರು 'ಕೂಸಿಗಿಂತ ಮೊದಲು ಕುಲಾವಿ' ಎನ್ನುವಂತೆ ಒಂದು ಪುಟ್ಟ ಬಸ್ ನಿಲ್ದಾಣವನ್ನು ಕಟ್ಟಿಸಿಕೊಟ್ಟಿದ್ದಾರೆ. ಆದರೆ ಅದು ಈಗ ನ್ಯಾಯ ಪಂಚಾತಿಕೆಯ ಕಟ್ಟೆಯಾಗಿ ಪರಿವರ್ತನೆಯಾಗಿದೆ. ಯಾರ ಮಗಳು ಯಾರ ಜೊತೆ ಓಡಿಹೋದಳು, ಯಾರು ಎಳನೀರು ಅಡಿಕೆ ಕದ್ದರು, ಯಾರು ಇನ್ನೊಬ್ಬರ ಪತ್ನಿಯನ್ನು ಕೆಟ್ಟ ದೃಷ್ಟಿಯಿಂದ ನೋಡಿದರು, ಎಂದೆಲ್ಲ ತೀರ್ಮಾನವಾಗಿ ಶಿಕ್ಷೆ ವಿಧಿಸಲ್ಪಡುವುದು ಅಲ್ಲಿಯ ಬಸ್ ನಿಲ್ದಾಣ ಅಲಿಯಾಸ್ ನ್ಯಾಯದ ಕಟ್ಟೆಯಲ್ಲಿ. ಪ್ರತಿ ಸೋಮವಾರ ಹಿಯರಿಂಗ್ ನಡೆದರೆ ಶನಿವಾರ ಜಜ್‌ಮೆಂಟ್ ಹೊರಬೀಳುತ್ತದೆ. ನಡುವಿನ ನಾಲ್ಕು ದಿನಗಳ ಕಾಲ ಊರವರು ಘಟನೆಯ ಕುರಿತು ಆ ನ್ಯಾಯದ ಕಟ್ಟೆಯಲ್ಲಿ ಕುಳಿತು ಹರಟುತ್ತಿರುತ್ತಾರೆ.

''ನೋಟೀಸು ವಗೈರೆ ಹಚ್ಚಕೂಡದು'', ''ಹೇಸಿಗೆ, ಮೂತ್ರಶಂಕೆಯೇ ಮೊದಲಾದವುಗಳನ್ನು ನಿಗದಿತ ಸ್ಥಳ ಹೊರತುಪಡಿಸಿ ಇತರ ಕಡೆ ಮಾಡಕೂಡದು'', ''ಬಸ್ಸು ನಿಲ್ದಾಣವನ್ನು ನಿಮ್ಮ ಮನೆಯಂತೆಯೇ ಭಾವಿಸಿ'', ''ಸಾರ್ವಜನಿಕ ನೆಮ್ಮದಿಗೆ ಭಂಗ ತರಕೂಡದು'' ಎಂಬಿತ್ಯಾದಿ ಕೂಡದುಗಳ ಬರಹಗಳನ್ನು ನಿಲ್ದಾಣಗಳ ಆಡಳಿತ ವರ್ಗದವರು ಕಣ್ಣಿಗೆ ರಾಚುವಂತೆ ಬರೆಸಿರುತ್ತಾರೆ. ಆದರೆ ಮನುಷ್ಯನ ಮನಸ್ಸು ವಿಚಿತ್ರ. ಕೂಡದು ಎನ್ನುವ ಪ್ರಭುಸಮ್ಮಿತವನ್ನು ಕಂಡ ತಕ್ಷಣ, ''ಯಾಕೆ?'' ಎಂದು ಕೇಳುತ್ತದೆ (ಪ್ರಾಯಶಃ ಇದು ನಮ್ಮಲ್ಲಿ ಮಾತ್ರ). ಹಾಗಾಗಿ ಛಲ ಬಿಡದ ತ್ರಿವಿಕ್ರಮರಂತೆ ಎಲ್ಲರೂ ಎಲ್ಲವನ್ನೂ ಧಿಕ್ಕರಿಸಿ ನಡೆಯಲು ಯತ್ನಿಸುತ್ತಾರೆ. ನೋಟೀಸು ಹಚ್ಚಬೇಡಿ ಎಂದು ಬರೆದಿದ್ದರ ಮೇಲೆಯೇ ಹೊಸ ಸಿನಿಮಾದ ಪೋಸ್ಟರು ರಾರಾಜಿಸುತ್ತಿರುತ್ತದೆ. ಬೀಡಾಡಿ ದನ ಆ ಸಿನಿಮಾದ ಪೋಸ್ಟರನ್ನು ತಿಂದು ಅದರ ರಸಗ್ರಹಣವನ್ನು ಮಾಡುತ್ತಿರುತ್ತದೆ. ಪ್ರಯಾಣಿಕರ ಅನುಕೂಲಕ್ಕಾಗಿ ಫೈಬರ್ ಸೀಟುಗಳನ್ನು ಬೋಲ್ಟಿನ ಮೂಲಕ ಬಿಗಿದು ಇಟ್ಟರೆ ರಾತ್ರೋ ರಾತ್ರಿ ಅಪಹರಿಸುವವರಿದ್ದಾರೆ (ಎಷ್ಟಾದರೂ ಸಾರ್ವಜನಿಕ ಸೊತ್ತನ್ನು ನಮ್ಮ ಸೊತ್ತೆಂದು ಭಾವಿಸಬೇಕಲ್ಲವೆ?!). ವೀಳ್ಯವನ್ನು ಮೆದ್ದು ಕೈಯಲ್ಲಿದ್ದ ಸುಣ್ಣವನ್ನು ಗೋಡೆಗೆ ಬಳಿದು, ರಸವನ್ನು ಗೋಡೆಗೆ ಗುರಿಯಿಟ್ಟು ಉಗುಳಿ ಬಿಳಿ ಕೆಂಪು ಬಣ್ಣಗಳ ನವ್ಯ ಕಲಾಕೃತಿಯನ್ನು ಮೂಡಿಸುವ ಕಲಾವಿದರಿದ್ದಾರೆ.

ಬಸ್ಸು ನಿಲ್ದಾಣದ ಈ ಎಲ್ಲ ಚಿತ್ರಗಳನ್ನು ಗಮನಿಸಿದ ಬಳಿಕ ಶಾಮು ಮಾವನ ಚಾಳಿಯನ್ನು ನಾನು ಪ್ರಾರಂಭಿಸಿದ್ದೇನೆ. ''ಬಸ್ಸು ಸಮಯಕ್ಕೆ ಸರಿಯಾಗಿ ಬರದಿರಲಿ. ಇನ್ನೂ ಒಂದಷ್ಟು ಹೊತ್ತು ಲೇಟಾಗಿ ಬರಲಿ ದೇವರೇ'' ಎಂದು ಪ್ರಾರ್ಥಿಸುತ್ತಿರುತ್ತೇನೆ. ಇದು ಒಂದು ರೀತಿಯ ಹುಚ್ಚು ಎಂದು ಬೇಕಾದರೂ ನೀವು ಕರೆಯಬಹುದು.

**ಪಿ. ಬಿ. ಪ್ರಸನ್ನ**
ಎಂ. ೫೭೮, ಹುಡ್ಕೊ ಫ್ಲಾಟುಗಳು, ಶಾರದಾದೇವಿ ನಗರ
ಪ್ರಥಮ ಹಂತ, ಮೈಸೂರು - ೫೭೦ ೦೨೩.

# ಎನ್. ಸಿ. ಇ. ಆರ್. ಟಿ.ಯ ವಿನಾಶಕಾರಿ ಶಿಫಾರಸುಗಳನ್ನು ಸೋಲಿಸಿ

ಇಡೀ ದೇಶದ ಶಾಲಾ-ಶಿಕ್ಷಣವನ್ನು ನಿಯಂತ್ರಿಸುವ ಸಮಗ್ರವಾದ ಶಿಫಾರಸುಗಳನ್ನು ಇತ್ತೀಚೆಗೆ ಎನ್. ಸಿ. ಇ. ಆರ್. ಟಿ. (ನ್ಯಾಷನಲ್ ಕೌನ್ಸಿಲ್ ಫಾರ್ ಎಜುಕೇಷನ್, ರಿಸರ್ಚ್ ಅಂಡ್ ಟ್ರೈನಿಂಗ್) ಹೊರತಂದಿದೆ. ''ಶಾಲಾ ಶಿಕ್ಷಣದ ರಾಷ್ಟ್ರೀಯ ಪಠ್ಯಕ್ರಮದ ರೂಪುರೇಷೆ : ಒಂದು ಚರ್ಚಾ ದಸ್ತಾವೇಜು'' ಎಂಬುದರಲ್ಲಿ +2 ಹಂತದವರೆಗೆ ಇಡೀ ಶಾಲಾ ಶಿಕ್ಷಣಕ್ಕೆ ಸಂಬಂಧಿಸಿದಂತೆ ಹಲವಾರು ಶಿಫಾರಸುಗಳನ್ನು ಸೂಚಿಸಲಾಗಿದೆ. ಬಿಜೆಪಿ ಸರ್ಕಾರವು, ತನ್ನ ಹಿಂದುತ್ವವಾದಿ ವಿನ್ಯಾಸದ ಯೋಜನೆಗೆ ಪೂರಕವಾಗಿ, ಅಧಿಕಾರಕ್ಕೆ ಬಂದ ಕೂಡಲೆ ರಾಷ್ಟ್ರದ ಹಲವಾರು ಉನ್ನತ ಮಟ್ಟದ ಶೈಕ್ಷಣಿಕ ಮಂಡಳಿಗಳನ್ನು ಪ್ರಜಾಪ್ರಭುತ್ವ ಪದ್ಧತಿಗೆ ವಿರೋಧವಾಗಿ ಪುನರ್ ರಚಿಸಲು ಕ್ರಮಗಳನ್ನು ಕೈಗೊಂಡಿತು. ಈ ಹುನ್ನಾರದ ಒಂದು ಭಾಗವಾಗಿ ಪಠ್ಯಪುಸ್ತಕಗಳನ್ನು ರಚಿಸುವ, ಪಠ್ಯಕ್ರಮಗಳಿಗೆ ಕುರಿತಂತೆ ಶಿಫಾರಸುಗಳನ್ನು ನೀಡುವ ಅಂಗಸಂಸ್ಥೆಯಾದ ಎನ್. ಸಿ. ಇ. ಆರ್. ಟಿ. ಯನ್ನು ಪುನರ್ ರಚಿಸಿ ಆರ್.ಎಸ್.ಎಸ್.ನ ನಿಷ್ಠಾವಂತ ಅನುಯಾಯಿಯಾದ ಶ್ರೀ ಜೆ. ಎಸ್. ರಜಪೂತರನ್ನು ಅದರ ನಿರ್ದೇಶಕರನ್ನಾಗಿ ನೇಮಿಸಿತು.

**ಐಚ್ಛಿಕ ವಿಷಯವಾಗಿ ಗಣಿತ**

ಮೊದಲಿಗೆ, ದಸ್ತಾವೇಜು, ಗಣಿತವು ಹಲವಾರು ವಿದ್ಯಾರ್ಥಿಗಳಿಗೆ ಕ್ಲಿಷ್ಟವಾದ ವಿಷಯವೆಂದೂ, ಗಣಿತದಲ್ಲಿ ಫೇಲಾದರೆ ಅವರಲ್ಲಿ ನಿರಾಶಾಭಾವನೆ ಉಂಟಾಗುತ್ತದೆ ಎಂದೂ ಹೇಳುತ್ತಾ, ೮ನೇ ತರಗತಿಯಿಂದ ಗಣಿತವನ್ನು ಐಚ್ಛಿಕ ವಿಷಯವನ್ನಾಗಿ ಮಾಡಬೇಕೆಂದು ಹೇಳಿದೆ. ''ಸಾಮಾನ್ಯವಾಗಿ ೧೦ನೇ ತರಗತಿಯಲ್ಲಿ ಬಹುತೇಕ ವಿದ್ಯಾರ್ಥಿಗಳು ಗಣಿತದಲ್ಲಿ ಫೇಲಾಗುತ್ತಾರೆಂದು ಅನುಭವದಿಂದ ತಿಳಿದುಬಂದಿದೆ. ಇದು ವಿದ್ಯಾರ್ಥಿಗಳನ್ನು ಮಾತ್ರವಲ್ಲದೆ ಅವರ ಪೋಷಕರನ್ನೂ ಹತಾಶರನ್ನಾಗಿ ಮಾಡುತ್ತದೆ. ಕೆಲವು ಶಿಕ್ಷಣ ತಜ್ಞರು ೮ನೇ ತರಗತಿಯವರೆಗೆ ಗಣಿತವನ್ನು ಕಡ್ಡಾಯ ಮಾಡಬೇಕೆಂದು ಭಾವಿಸಿದ್ದಾರೆ. ಆದರೆ ಇನ್ನೂ ಕೆಲವರು ಗಣಿತವನ್ನು ತಮ್ಮ ಭವಿಷ್ಯದ ವೃತ್ತಿಯಾಗಿ ಮುಂದುವರೆಸುವವರಿಗೆ ಒಂದು ರೀತಿಯ ಪಠ್ಯಕ್ರಮ ಮತ್ತು ೧೦ನೇ ತರಗತಿಗೆ ತಮ್ಮ ಶಿಕ್ಷಣವನ್ನು ಕೊನೆಗೊಳಿಸುವವರಿಗೆ ಇನ್ನೊಂದು ರೀತಿಯ ಪಠ್ಯಕ್ರಮವಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ'' ಎಂದು ದಸ್ತಾವೇಜಿನಲ್ಲಿ ಹೇಳಲಾಗಿದೆ. ಇದೊಂದು ಅದ್ಭುತ ವಿಚಾರವೇ ಸರಿ! ಹಾಗಾದಲ್ಲಿ ಎನ್. ಸಿ. ಇ. ಆರ್. ಟಿ. ಕಷ್ಟಕರವಾದ ಹಾಗೂ ನಿರಾಶೆಯುಂಟುಮಾಡುವ ಯಾವುದೇ ವಿಷಯವನ್ನೂ ತೆಗೆಯಲು ಶಿಫಾರಸ್ಸು ಮಾಡುತ್ತದೆಯೋ? ಆಗ ಕಲಿಸಲು ಪ್ರಾಯಶಃ ಯಾವುದೇ ವಿಷಯವೂ ಉಳಿಯಲಾರದು! ಅಲ್ಲದೆ, ೧೦ನೇ ತರಗತಿಗೆ ಶಿಕ್ಷಣ ಮುಗಿಸುವವರು ಯಾರೆಂಬುದನ್ನು ಮೊದಲೇ ಹೇಗೆ ಮತ್ತು ಯಾರು ತೀರ್ಮಾನಿಸಬೇಕು?

ತಮ್ಮ ದೋಷಯುಕ್ತ ಶಿಫಾರಸುಗಳಿಂದ ರಾಷ್ಟ್ರದ ಇಡೀ ಶಾಲಾ ಶಿಕ್ಷಣದ ಮೇಲೆ ಗಾಢ ಪರಿಣಾಮ ಉಂಟಾಗುವಂತಹ ಸಂದರ್ಭದಲ್ಲಿ ಅಧಿಕಾರಸ್ಥರು ಸ್ವಲ್ಪ ಪ್ರಜ್ಞೆ ಹಾಗೂ ವಿವೇಕಗಳನ್ನು ಪಡೆಯುವುದು ಒಳಿತು. ಒಂದು ವಿಷಯ ಕಷ್ಟಕರವಾದರೆ ಅದಕ್ಕೆ ಕಾರಣ ವಿಷಯವಲ್ಲ. ಇದು ಹಲವಾರು ಅಂಶಗಳ ಮೇಲೆ ಅವಲಂಬಿತವಾಗಿರುತ್ತದೆ. ಮಹಾನ್ ಭೌತವಿಜ್ಞಾನಿ ಮತ್ತು ಗಣಿತಶಾಸ್ತ್ರಜ್ಞ ಐನ್‌ಸ್ಟೈನ್‌ರವರಿಗೇ ಅವರ ಶಾಲಾ ದಿನಗಳಲ್ಲಿ ಗಣಿತವಿಷಯದ ತಪ್ಪು ಬೋಧನಾ ಕ್ರಮದಿಂದಾಗಿ ಗಣಿತ ಬಹಳ ಬೇಸರದ ವಿಷಯ ವಾಗಿತ್ತಂತೆ ! ಪಠ್ಯಕ್ರಮದಲ್ಲಿರುವ ವಿಷಯದ ನಿರೂಪಣೆಯು ಚೆನ್ನಾಗಿದ್ದರೆ, ಅಗತ್ಯ ಶೈಕ್ಷಣಿಕ ಪರಿಕರ ಗಳೊಂದಿಗೆ ಸರಿಯಾದ ಬೋಧನೆಯಿದ್ದರೆ ಮೇಲ್ನೋಟಕ್ಕೆ ಕಷ್ಟವೆನಿಸುವ ವಿಷಯವೂ ಸುಲಭ ಹಾಗೂ ಆಸಕ್ತಿ ದಾಯಕವಾಗಿ ಇರುತ್ತದೆ.

ಸರಿಯಾದ ಸೌಲಭ್ಯಗಳಿಲ್ಲದ ಶಾಲೆಗಳ ವಿದ್ಯಾರ್ಥಿ ಗಳು ಗಣಿತದಲ್ಲಿ ಫೇಲಾಗುವುದು ಎಷ್ಟು ನಿಜವೋ, ತಕ್ಕಮಟ್ಟಿಗೆ ಉತ್ತಮ ಸೌಲಭ್ಯವಿರುವ ಶಾಲೆಗಳಲ್ಲಿ ವಿದ್ಯಾರ್ಥಿಗಳು ಗಣಿತವೂ ಸೇರಿದಂತೆ ಎಲ್ಲಾ ವಿಷಯಗಳಲ್ಲೂ ಚೆನ್ನಾಗಿ ಸಾಧನೆ ಮಾಡುವುದು ಅಷ್ಟೇ ನಿಜ! ಸಮಸ್ಯೆ ಇರುವುದು ಅವೈಜ್ಞಾನಿಕ ಪಠ್ಯಕ್ರಮ ರಚನೆಯಲ್ಲಿ, ಮೂಲಭೂತ ಸೌಕರ್ಯಗಳಲ್ಲಿ ಮತ್ತು ಅಸಮರ್ಪಕ ಬೋಧನಾ ವಿಧಾನಗಳಲ್ಲಿ. ಆದ್ದರಿಂದ ಸರ್ಕಾರವು ಇಲ್ಲಿನ ಸಮಸ್ಯೆಯನ್ನು ಬಗೆಹರಿಸಲು ಸಮರೋಪಾದಿಯಲ್ಲಿ ಕ್ರಮ ಕೈಗೊಳ್ಳಬೇಕು. ಗಣಿತದ ಕಲಿಕೆಯು ವಿವೇಚನಾ ಮನೋಭಾವ ಮತ್ತು ತಾರ್ಕಿಕ ವಿಶ್ಲೇಷಣಾ ಮನೋವೃತ್ತಿ ಯನ್ನು ಬೆಳೆಸುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ. ಹಾಗಾಗಿ, ಗಣಿತವನ್ನು ನಿರಾಕರಿಸಿದರೆ ನಮ್ಮ ವಿದ್ಯಾರ್ಥಿ ಗಳಿಗೆ ತರ್ಕ, ವಿವೇಚನೆ ಹಾಗೂ ಜ್ಞಾನವನ್ನೇ ನಿರಾಕರಿ ಸಿದಂತೆ. ಪ್ರಾರಂಭಿಕ ಮಟ್ಟದಲ್ಲಿ ಹೀಗೆ ವಿಷಯಗಳನ್ನು ಕೈಬಿಡುವುದು ಬೇಜವಾಬ್ದಾರಿತನವಾಗುತ್ತದೆ.

**ವಿಜ್ಞಾನ ಮತ್ತು ತಂತ್ರಜ್ಞಾನ ವಿಷಯದ ಬೋಧನೆ**

ಇಂದು ಆಧುನಿಕ ತಂತ್ರಜ್ಞಾನ ಮಾಹಿತಿಗಳೊಂದಿಗೆ ವಿದ್ಯಾರ್ಥಿಗಳು ಸುಸಜ್ಜಿತರಾಗಿರಬೇಕೆಂದು, ಅದಕ್ಕಾಗಿ ಮೂಲಭೂತ ವಿಜ್ಞಾನದ ಬದಲು ವಿಶೇಷವಾಗಿ ತಂತ್ರಜ್ಞಾನವನ್ನು ಬೋಧಿಸಬೇಕೆಂದು ದಸ್ತಾವೇಜು ಪ್ರಸ್ತಾಪಿಸುತ್ತದೆ. ಹೀಗೆ ಹೊಸದಾಗಿ ರಚಿತವಾಗುವ ವಿಷಯವು ಅವಶ್ಯವಾಗಿ ಮೂಲಭೂತ ವಿಜ್ಞಾನ ವಿಷಯ ಗಳನ್ನು ಕಡೆಗಣಿಸುತ್ತದೆ ಎಂಬ ಸಂಶಯವುಂಟಾಗುತ್ತಿದೆ.

**ಎಂ. ಎಸ್. ಶ್ರೀರಾಮ್**

ವಿಜ್ಞಾನವು ಅಡಿಪಾಯವಾದರೆ, ತಂತ್ರಜ್ಞಾನವು ಈ ಮೂಲಭೂತ ವಿಜ್ಞಾನದ ಅಳವಡಿಕೆ. ಆದ್ದರಿಂದ ತಂತ್ರಜ್ಞಾನದ ಅಂಶಗಳನ್ನು ಬೋಧಿಸಲು ಅನುವು ಮಾಡಿಕೊಡಬಹುದಾದರೂ ಮೂಲಭೂತ ವಿಜ್ಞಾನದ ಸರಿಯಾದ ಕಲಿಕೆಯನ್ನು ಕಡೆಗಣಿಸುವ ಯಾವುದೇ ಪ್ರಯತ್ನಗಳು ನಿಸ್ಸಂದೇಹವಾಗಿ ವಿಶ್ಲೇಷಣಾ ಮನೋಭಾವ ಮತ್ತು ವೈಜ್ಞಾನಿಕ ಮನೋಭಾವಕ್ಕೆ ಅಡಚಣೆ ಉಂಟು ಮಾಡುತ್ತವೆ. ಆದ್ದರಿಂದ ಇದನ್ನು ಪ್ರತಿರೋಧಿಸಬೇಕು.

**ಭಾಷಾ ಕಲಿಕೆಯಲ್ಲಿ ಬದಲಾದ ಧೋರಣೆ**

ಭಾಷಾ ಕಲಿಕೆಯು ತೀವ್ರ ದಾಳಿಗೆ ತುತ್ತಾಗಿದೆ. ಪ್ರಸ್ತುತ ವಿಧಾನದಲ್ಲಿ ಭಾಷೆಯನ್ನು ಇನ್ನು ಮುಂದೆ ಬೋಧಿಸಲಾಗುವುದಿಲ್ಲ. ಭಾಷಾ ಕಲಿಕೆಯಲ್ಲಿ ''ವ್ಯಾವಹಾರಿಕ ಧೋರಣೆ''ಯೆಂಬ ಹೊಸ ಧೋರಣೆ ಯನ್ನು ಜಾರಿಗೊಳಿಸಲಾಗಿದೆ. +2 ಹಂತದಲ್ಲಿ ಇಂಗ್ಲಿಷ್ ಕೋರ್ಸ್‌ಗೆ ಸಂಬಂಧಿಸಿದಂತೆ ದಸ್ತಾವೇಜು ಹೀಗೆ ಪ್ರಸ್ತಾಪಿಸುತ್ತದೆ: ''ಕೆಲವು ವಿದ್ಯಾರ್ಥಿಗಳು ೧೦ನೇ ತರಗತಿಯ ನಂತರ ಶಿಕ್ಷಣವನ್ನು ಮುಂದುವರೆಸುವುದಿಲ್ಲ. ಅವರು ಕೆಲಸಕ್ಕೆ ಸೇರಬಹುದು. ಆದ್ದರಿಂದ ಅವರ ಅಗತ್ಯಕ್ಕಾಗಿ 'ವಿಜ್ಞಾನ ಮತ್ತು ತಂತ್ರಜ್ಞಾನ'ಕ್ಕಾಗಿ ಇಂಗ್ಲಿಷ್, 'ವ್ಯಾವಹಾರಿಕ ಇಂಗ್ಲಿಷ್' ಇತ್ಯಾದಿಗಳನ್ನು ಕಲಿಸಬೇಕು.'' ಇದು ಉತ್ಕೃಷ್ಟ ಚಿಂತನೆ ಮತ್ತು ಉತ್ತಮ ಅಭಿರುಚಿಯನ್ನು ನಾಶಮಾಡುವ ಮೂಲಕ ಒಬ್ಬ ವ್ಯಕ್ತಿಯ ಆರೋಗ್ಯಕರ ಮಾನಸಿಕ ಬೆಳವಣಿಗೆಯನ್ನು ದುರ್ಬಲಗೊಳಿಸುವ ಪ್ರಯತ್ನವೆಂದು ಅರ್ಥಮಾಡಿಕೊಳ್ಳುವುದು ಕಷ್ಟವೇನಲ್ಲ. ಭಾಷೆಯು ಕೇವಲ ಸಂಪರ್ಕದ ಮಾಧ್ಯಮವಷ್ಟೇ ಅಲ್ಲದೆ, ಚಿಂತನೆಯ ವಾಹಕವಾಗಿದೆ. ಭಾಷೆಯಲ್ಲಿ ಪ್ರಾವೀಣ್ಯತೆ ಗಳಿಸದೆ ಜ್ಞಾನವನ್ನು ಗಳಿಸುವುದು ಸಾಧ್ಯವಿಲ್ಲ. ಆದರೆ ಭಾಷಾ ಕಲಿಕೆಯಲ್ಲಿ 'ವ್ಯಾವಹಾರಿಕ ಧೋರಣೆ'ಯು ಜ್ಞಾನಾರ್ಜನೆಯನ್ನು ನಿರಾಕರಿಸುತ್ತದೆ ಮತ್ತು ಚಿಂತನಾ ಪ್ರಕ್ರಿಯೆಯನ್ನು ದುರ್ಬಲಗೊಳಿಸುತ್ತದೆ. ಇದರೊಂದಿಗೆ ಸೆಕೆಂಡರಿ ಮತ್ತು +2 ಹಂತದಲ್ಲಿ ಸಾಹಿತ್ಯದ ಕಲಿಕೆಯು ಭಾಷಾ ಕಲಿಕೆಯನ್ನು ಉತ್ತಮಪಡಿಸುತ್ತದೆ ಮತ್ತು ವಿದ್ಯಾರ್ಥಿಗಳಲ್ಲಿ ಉನ್ನತ ನೈತಿಕತೆ, ಮೌಲ್ಯಗಳು ಮತ್ತು ಸಾಮಾಜಿಕ ಪ್ರಜ್ಞೆಯನ್ನು ತುಂಬುತ್ತದೆ. ವಿಜ್ಞಾನ ಮತ್ತು ವೃತ್ತಿಪರ ಕೋರ್ಸುಗಳ ವಿದ್ಯಾರ್ಥಿಗಳಿಗೂ ಸಹ ಅವರ ಬೆಳವಣಿಗೆಗೆ ಸಾಹಿತ್ಯ ಅತ್ಯಾವಶ್ಯಕವಾಗಿದೆ. ಅದಕ್ಕಾಗಿಯೇ ಭಾಷಾ ಕಲಿಕೆಯನ್ನು ಎಲ್ಲರಿಗೂ ಕಡ್ಡಾಯ ಮಾಡಬೇಕು.

**ಶಿಕ್ಷಣದ ''ಭಾರತೀಕರಣ'' ನೀತಿ**

ಬಿಜೆಪಿ ಅಧಿಕಾರ ವಹಿಸಿದ ಸಮಯದಿಂದ ಇಡೀ ಶಿಕ್ಷಣ ವ್ಯವಸ್ಥೆಯ 'ಭಾರತೀಕರಣ', 'ರಾಷ್ಟ್ರವಾದೀಕರಣ' ಮತ್ತು ಆಧ್ಯಾತ್ಮೀಕರಣದ ಘೋಷಣೆಯನ್ನು ಎತ್ತುತ್ತಿದೆ. ಮಾನವ ಸಂಪನ್ಮೂಲ ಮಂತ್ರಿಗಳಾದ ಶ್ರೀ ಮುರಳಿ ಮನೋಹರ ಜೋಶಿಯವರು ರಾಷ್ಟ್ರೀಯ ಶಿಕ್ಷಣ

ನೀತಿ-ನಿಯಮಗಳನ್ನು ಆಮೂಲಾಗ್ರ ಪರಿಷ್ಕರಣಕ್ಕೆ ಕರೆಯಿತ್ತರು. ಈಗ ಸರ್ಕಾರವು ಎನ್. ಸಿ. ಇ. ಆರ್. ಟಿ. ದಸ್ತಾವೇಜಿನ ಮೂಲಕ ಕೆಲವು ನಿರ್ದಿಷ್ಟ ಪ್ರಸ್ತಾವನೆಗಳನ್ನು ಹೊರತಂದಿದೆ. ಅದರಲ್ಲಿ ಬಿಜೆಪಿ ಸರ್ಕಾರದ ಮೂಲಭೂತ ಧೋರಣೆಯನ್ನು ಎತ್ತಿಹಿಡಿಯಲಾಗಿದೆ. ಸಮ್ಮಿಶ್ರ ಸರ್ಕಾರದ ಇತರೆ ಪಾಲುದಾರರು ಈ ಬಗ್ಗೆ ಬಾಯಿ ತೆಗೆಯದಿರುವುದು ಆಶ್ಚರ್ಯಕರ.

ಇಂದಿನ ಶಿಕ್ಷಣವು ಬ್ರಿಟಿಷ್ ಶಿಕ್ಷಣದ ಮುಂದುವರಿಕೆಯಾಗಿದ್ದು ವಸಾಹತು ಗುಣಲಕ್ಷಣವನ್ನು ಹೊಂದಿದೆ. ಅದರಿಂದಾಗಿ ಅದನ್ನು ಬದಲಾಯಿಸುವ ಅಗತ್ಯವಿದೆ ಎಂದು ಸರ್ಕಾರ ಹೇಳುತ್ತಿದೆ. ಬ್ರಿಟಿಷರು ಒದಗಿಸಲೆತ್ನಿಸಿದ ಶಿಕ್ಷಣವು ಬ್ರಿಟಿಷರನ್ನು ಪ್ರಶ್ನಾತೀತವಾಗಿ ಸೇವೆ ಮಾಡುವ, ಕೇವಲ ಗುಲಾಮ ಕಾರಕೂನರನ್ನು ತಯಾರುಮಾಡುವ, ಗುರಿ ಹೊಂದಿತ್ತೆಂಬುದರಲ್ಲಿ ಸಂದೇಹವಿಲ್ಲ. ಇಷ್ಟಾಗಿಯೂ ಅಂದಿನ ಶಿಕ್ಷಣದಲ್ಲಿ ಕೆಲವೊಂದು ವೈಜ್ಞಾನಿಕ, ಪ್ರಜಾತಾಂತ್ರಿಕ, ಧರ್ಮನಿರಪೇಕ್ಷ ಅಂಶಗಳು ಕಂಡು ಬರುತ್ತವೆ. ಅದು ಬ್ರಿಟಿಷರ ಜನಪರ ಧೋರಣೆಯ ಫಲವಲ್ಲ, ಬದಲಿಗೆ ಅದು ಆಧುನಿಕ ಶಿಕ್ಷಣದ ಚಳುವಳಿಯ ಮಹಾನ್ ಹರಿಕಾರರ ಹೋರಾಟದ ಫಲವಾಗಿತ್ತು. ಹೀಗಾಗಿ ವಸಾಹತುಶಾಹಿಯ ಕಾಲದಲ್ಲಿ ರಚಿತವಾದ ಶಿಕ್ಷಣವನ್ನು ಜನತೆಯ ಹಿತಾಸಕ್ತಿಯಿಂದ ಪುನರ್ ರಚಿಸುವುದು ಎಂದರೆ ಅದರಲ್ಲಿರುವ ಅವೈಜ್ಞಾನಿಕ, ಅಪ್ರಜಾಸತ್ತಾತ್ಮಕ ಹಾಗೂ ಧರ್ಮನಿರಪೇಕ್ಷತೆಯ ವಿರುದ್ಧವಾದ ಅಂಶಗಳನ್ನು ಕಿತ್ತೊಗೆಯಬೇಕು, ಎಂದು. ಆದರೆ ಸರ್ಕಾರದ ಆಶಯ ಅದಕ್ಕೆ ವಿರುದ್ಧ ವಾಗಿದೆ. ಅಲ್ಲದೆ ಇಂದಿನ ಶಿಕ್ಷಣ ಪದ್ಧತಿಯ ಮುಖ್ಯ ಸಮಸ್ಯೆಯಾದರೂ ಏನು? ಸರ್ಕಾರ, ಏಕಸ್ವಾಮ್ಯಾಧಿಪತಿಗಳು ಮತ್ತು ಕಾರ್ಪೊರೇಟ್ ಸಂಸ್ಥೆಗಳು ಎಂದೂ ನಿಜವಾದ ಶಿಕ್ಷಣವನ್ನು ಒದಗಿಸಲು ಆಕಾಂಕ್ಷಿಸಲಿಲ್ಲ. ಅವರು ಸದಾ ಹಲವಾರು ರೀತಿಯಲ್ಲಿ ಶಿಕ್ಷಣದ ಅವಕಾಶವನ್ನು ಕಡಿತಗೊಳಿಸುವ ಪ್ರಯತ್ನವನ್ನೇ ನಡೆಸಿದ್ದಾರೆ. ವಿಶ್ವ ಬಂಡವಾಳವಾದದ ತೀವ್ರ ಬಿಕ್ಕಟ್ಟಿನ ಇಂದಿನ ಯುಗದಲ್ಲಿ ಆಳುವ ವರ್ಗವು ಭೌಗೋಳೀಕರಣದ ಹೆಸರಿನಲ್ಲಿ ಜನಕಲ್ಯಾಣ ರಾಜ್ಯದ ವಿಚಾರವನ್ನೇ ನಾಶಗೊಳಿಸುತ್ತಿದೆ ಹಾಗೂ ಶಿಕ್ಷಣ, ಆರೋಗ್ಯ ಮತ್ತು ಇತರ ಸಾಮಾಜಿಕ ಕ್ಷೇತ್ರಗಳಲ್ಲಿನ ತನ್ನ ಕರ್ತವ್ಯದಿಂದ ಹಾಗೂ ಸಾಮಾಜಿಕ ಬಾಧ್ಯತೆಯಿಂದ ನುಣುಚಿಕೊಳ್ಳುತ್ತಿದೆ. ಆದ್ದರಿಂದ ಇಡೀ ದೇಶದಲ್ಲಿ ಶಿಕ್ಷಣದ ಖಾಸಗೀಕರಣ ಮತ್ತು ವ್ಯಾಪಾರೀಕರಣದ ಅಲೆಗಳು ಶಿಕ್ಷಣದ ತಳಪಾಯವನ್ನೇ ಧ್ವಂಸ ಮಾಡುತ್ತಿವೆ. ಶಿಕ್ಷಣವನ್ನು ಇಂದು ದುಬಾರಿ ಸರಕಾಗಿಸಿ, ಕೇವಲ ಶ್ರೀಮಂತರು ಖರೀದಿಸಬಲ್ಲ ವಸ್ತುವನ್ನಾಗಿ ಮಾರ್ಪಡಿಸಿ ಅಸಂಖ್ಯಾತ ಬಡಜನತೆಯನ್ನು ಅನಿಶ್ಚಿತತೆಯ ದಡಕ್ಕೆ ನೂಕಿವೆ. ಆದರೆ ಇಂತಹ ಪ್ರಸಕ್ತ ಬಿಕ್ಕಟ್ಟಿನಿಂದ ಹೊರಬರಲು ಸ್ವಯಂಘೋಷಿತ 'ಸ್ವದೇಶಿ'ಗಳು ಯಾವ ಪರಿಹಾರ ನೀಡಿದ್ದಾರೆ ?

ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ಶಿಕ್ಷಣವನ್ನು ವಿರೋಧಿಸುತ್ತಾ ಅದಕ್ಕೆ ವಸಾಹತು ಲಕ್ಷಣವಿದೆಯೆಂದು ಖಂಡಿಸುತ್ತಾ ಅದೇ ಸಮಯದಲ್ಲಿ ನಿರ್ಲಜ್ಜವಾಗಿ ಶಿಕ್ಷಣದ ಭೌಗೋಳೀಕರಣದ ಅತ್ಯಂತ ಜನವಿರೋಧಿ ನೀತಿಯನ್ನು ಈ ಸರ್ಕಾರ ಪಾಲಿಸುತ್ತಿದೆ. ಎನ್. ಸಿ. ಇ. ಆರ್. ಟಿ. ದಸ್ತಾವೇಜು ಸರ್ಕಾರದ ಭೌಗೋಳೀಕರಣದ ನೀತಿಯನ್ನು ಹೀಗೆಂದು ಸಮರ್ಥಿಸಿದೆ: ''ಮಾರುಕಟ್ಟೆ ಯಿಂದ ನಿಯಂತ್ರಣವನ್ನು ಮಾಡುವ ಒಂದು ಪ್ರಮುಖ ಸಿದ್ಧಾಂತವೇ ಭೌಗೋಳೀಕರಣ.'' ಶಿಕ್ಷಣದಲ್ಲಿ ಗುರುಕುಲ ಪದ್ಧತಿಯನ್ನು ಜಾರಿಗೆ ತಂದು ಭಾರತೀಯ ವೈಶಿಷ್ಟ್ಯ ತುಂಬುವ ಮೂಲಕ ಶಿಕ್ಷಣದ ಭಾರತೀಕರಣವನ್ನು ಮಾಡಬೇಕೆಂದು ಹೇಳುತ್ತಿರುವ ಈ ಸರ್ಕಾರವು ತನ್ನ ಶಿಕ್ಷಣದ ವ್ಯಾಪಾರೀಕರಣದ ನೀತಿಗಳಿಂದಾಗಿ ಬಹುತೇಕ ಭಾರತೀಯ ಸಮುದಾಯವನ್ನು ಶಿಕ್ಷಣದ ಪರಿಧಿಯಿಂದಲೇ ಸಂಪೂರ್ಣ ಹೊರದಬ್ಬುತ್ತಿರುವುದು ವಿಪರ್ಯಾಸವೇ ಸರಿ.

### ಅನುತ್ತೀರ್ಣರಹಿತ ಪದ್ಧತಿ

ಪ್ರಸಕ್ತ ಉತ್ತೀರ್ಣ-ಅನುತ್ತೀರ್ಣ ಪದ್ಧತಿಯ ಬದಲಿಗೆ ಎನ್. ಸಿ. ಇ. ಆರ್. ಟಿ. ಸ್ವಯಂ ಉತ್ತೀರ್ಣದ ವ್ಯವಸ್ಥೆಯನ್ನು ಶಿಫಾರಸ್ಸು ಮಾಡಿದೆ. ಇದನ್ನು ಕ್ರಮೇಣವಾಗಿ ಸೆಕೆಂಡರಿ ಶಿಕ್ಷಣದ ಹಂತದವರೆಗೂ ಜಾರಿಗೊಳಿಸುವ ಪ್ರಸ್ತಾಪವಿದೆ. ಈ ವ್ಯವಸ್ಥೆಯಲ್ಲಿ ಗಂಭೀರವಾದ ನ್ಯೂನತೆಗಳಿವೆ. ಮೊದಲಿಗೆ, ವಿದ್ಯಾರ್ಥಿಯು ತಾನು ಮುಂದಿನ ತರಗತಿಗೆ ಪ್ರವೇಶಿಸುವುದು ಖಚಿತವೆಂದು ತಿಳಿದ ಕೂಡಲೆ ಓದಿನಲ್ಲಿ ಶ್ರದ್ಧೆ, ಆಸಕ್ತಿ ವಹಿಸುವುದು ಕಡಿಮೆಯಾಗುತ್ತದೆ. ಎರಡನೆಯದಾಗಿ, ಶಿಕ್ಷಣದ ನಿಜವಾದ ಪ್ರಾಮುಖ್ಯತೆಯನ್ನು ಅರಿತು ಸ್ವಯಂಪ್ರೇರಿತರಾಗಿ ಓದುವಂತಹ ಮನಸ್ಸು ಪಕ್ವವಾಗಿರದ ಕಾರಣ ಈ ಶಿಫಾರಸ್ಸು ಆ ಎಳೆಯ ವಯಸ್ಸಿನಲ್ಲಿ ಜ್ಞಾನಾರ್ಜನೆಗಾಗಿ ಬೇಕಾಗಿರುವ ಆಸಕ್ತಿಗೆ ಹಾನಿಯುಂಟುಮಾಡುತ್ತದೆ. ಇದಕ್ಕೆ ಬದಲಾಗಿ, ಒಬ್ಬ ವಿದ್ಯಾರ್ಥಿಗೆ ತನ್ನ ಮುಂದಿರುವ ಸವಾಲುಗಳು ಹಾಗೂ ಗುರಿಗಳು ಉತ್ತಮ ಕಾರ್ಯಸಾಧನೆಗೆ ಪ್ರೋತ್ಸಾಹ ನೀಡುತ್ತವೆ. ಆದ್ದರಿಂದಲೇ ಇಡೀ ವಿಶ್ವದಲ್ಲಿ ಸಾಮಾನ್ಯವಾಗಿ ಈ ವ್ಯವಸ್ಥೆ ಅಸ್ತಿತ್ವದಲ್ಲಿದೆ. ಈ ಪದ್ಧತಿಯನ್ನು ರದ್ದುಗೊಳಿಸಿದರೆ ಇದು ವಿದ್ಯಾರ್ಥಿಗಳಿಗೆ ಹಾಗೂ ಶಿಕ್ಷಣಕ್ಕೆ ಯಾವ ಒಳಿತನ್ನೂ ಮಾಡಲಾರದು. ಕಾಲದ ಪರೀಕ್ಷೆಗೆ ಒಳಪಟ್ಟು ಬಂದಿರುವ ಪಾಸ್-ಫೇಲ್ ವ್ಯವಸ್ಥೆಯಲ್ಲಿ ವಿದ್ಯಾರ್ಥಿ ಫೇಲಾದರೆ ಹತಾಶನಾಗುತ್ತಾನೆಂಬ ಕಾರಣವನ್ನು ಮುಂದಿಟ್ಟುಕೊಂಡು ಇಂದಿನ ಇಡಿಯ ವ್ಯವಸ್ಥೆಯನ್ನೇ ತಿರಸ್ಕರಿಸುವುದು ಉಚಿತವಲ್ಲ. ನಪಾಸಾಗುವುದರಿಂದ ವಿದ್ಯಾರ್ಥಿಯ ಮನಸ್ಸಿನ ಮೇಲೆ ಉಂಟಾಗುವ ಪರಿಣಾಮದ ಬಗ್ಗೆ ಬೇರೆಯದೇ ಆದ ಪರಿಹಾರಗಳನ್ನು ಹುಡುಕಬೇಕು. ಅವನು ಫೇಲಾಗದಂತೆ ಶಿಕ್ಷಣ ನೀಡಬೇಕೇ ವಿನಾ ಫೇಲ್ ಆಗಬಾರದೆಂಬ ನಿಯಮ ಮಾಡಬಹುದೆ ?

> *ಈಚೆಗೆ ಪುನರ್‌ರಚಿತವಾದ ಎನ್. ಸಿ. ಇ. ಆರ್. ಟಿ. ಇತ್ತೀಚೆಗೆ ಹಲವಾರು ಹೊಸ ಶಿಫಾರಸ್ಸುಗಳನ್ನು ಮಾಡಿದೆ; ಪಠ್ಯವಿಷಯಕ್ಕೆ ಒತ್ತು ಕೊಡುವುದರಲ್ಲಿ ಬದಲಾವಣೆ, ಗಣಿತವನ್ನು ಐಚ್ಛಿಕ ವಿಷಯವನ್ನಾಗಿ ಮಾಡುವುದು, ಮುಕ್ತ ಕಲಿಕೆ ಪದ್ಧತಿ, ವೃತ್ತಿಪರ ಶಿಕ್ಷಣ, ಧರ್ಮನಿರಪೇಕ್ಷ ಪರಿಕಲ್ಪನೆಯ ಪುನರ್-ವ್ಯಾಖ್ಯಾನ, ಇತ್ಯಾದಿ ಮಾರ್ಗಸೂಚಿಗಳನ್ನು ಮುಂದಿಟ್ಟಿದೆ. ಕೇಂದ್ರ ಸರ್ಕಾರದ ಒಪ್ಪಿಗೆಯಿಂದ ಬಹುಶಃ ಜಾರಿಯಾಗುವ ಈ ಶಿಫಾರಸ್ಸುಗಳು ನಮ್ಮ ಇಡೀ ಶಿಕ್ಷಣದ ಮೇಲೆ ಹಾಗೂ ದೇಶದ ಭವಿಷ್ಯದ ಮೇಲೆ ಗಾಢ ಪರಿಣಾಮ ಬೀರಲಿವೆ. ಆದ್ದರಿಂದ ಈ ಶಿಫಾರಸ್ಸುಗಳ ಬಗ್ಗೆ ಒಂದು ಸಮಗ್ರವಾದ ವಿಶ್ಲೇಷಣೆಯು ಈ ಘಳಿಗೆಯ ಅವಶ್ಯಕತೆಯಾಗಿದೆ.*

### ಮುಕ್ತ ಕಲಿಕೆಯ ವ್ಯವಸ್ಥೆ

ಔಪಚಾರಿಕ ಶಾಲೆಗಳಿಗೆ ಪರ್ಯಾಯವಾಗಿ ಎನ್. ಸಿ. ಇ. ಆರ್. ಟಿ. ಮುಕ್ತ ಕಲಿಕೆಯ ವ್ಯವಸ್ಥೆಯನ್ನು ಜಾರಿಗೊಳಿಸಲು ಪ್ರಸ್ತಾಪಿಸಿದೆ. ಈ ರೀತಿಯ ಶಿಕ್ಷಣಕ್ಕೆ ಅದು ಒತ್ತು ನೀಡಿರುವುದು ಈ ಹೇಳಿಕೆಯಿಂದ ಸ್ಪಷ್ಟವಾಗುತ್ತದೆ: ''ನಮ್ಮ ಪೂರ್ವಾಗ್ರಹ ಹಾಗೂ ಪೂರ್ವಕಲ್ಪಿತ ವಿಚಾರಗಳಿಂದಾಗಿ ಮುಕ್ತ ಕಲಿಕೆಯ ಪರ್ಯಾಯ ವ್ಯವಸ್ಥೆಗಳನ್ನು ನಾವು ನಿರ್ಲಕ್ಷಿಸಬಾರದು''. ಆದರೆ ಈ ವ್ಯವಸ್ಥೆಯು ಕಾಲದ ಪರೀಕ್ಷೆಗೆ ನಿಲುಕಿಲ್ಲ ಅಥವಾ ಶೈಕ್ಷಣಿಕ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಸರಿಯಾದ ಪದ್ಧತಿಯಾಗಿ ಹೊರಹೊಮ್ಮಿದುದೂ ಅಲ್ಲ. ಬದಲಿಗೆ, ನಿರಂತರವಾದ ಬೋಧನೆ ಹಾಗೂ ಮಾರ್ಗದರ್ಶನ ಮತ್ತು ವಿದ್ಯಾರ್ಥಿಗಳು ಹಾಗೂ ಶಿಕ್ಷಕರ ನಡುವಿನ ಪರಸ್ಪರ ಅಭಿಪ್ರಾಯ ವಿನಿಮಯ ಮತ್ತು ವಿದ್ಯಾರ್ಥಿಗಳ ನಡುವೆ ಪರಸ್ಪರ ಸಹಭಾಗಿತ್ವಗಳು ಅವಿಭಾಜ್ಯ ಅಂಗಗಳಾಗಿರುವ ಕ್ರಮಬದ್ಧವಾದ ಔಪಚಾರಿಕ ಶಾಲಾ ಶಿಕ್ಷಣ ಪದ್ಧತಿಯು ಜ್ಞಾನ ಸಂಪಾದನೆಯ ಅತ್ಯುತ್ತಮ ಸಾಧನವಾಗಿ ಹೊರಹೊಮ್ಮಿದೆ. ಆದುದರಿಂದ ಕ್ರಮಬದ್ಧವಾದ ಔಪಚಾರಿಕ ಶಿಕ್ಷಣವನ್ನು ನಿರಾಕರಿಸುವುದೆಂದರೆ ಶಿಕ್ಷಣವನ್ನೇ ನಿರಾಕರಿಸಿದಂತೆ. ಮುಕ್ತ ಕಲಿಕೆಯು ಉನ್ನತ ಹಂತದಲ್ಲಿರಬೇಕೇ ಹೊರತು ಪ್ರಾರಂಭಿಕ ಹಂತದಲ್ಲಿ ಅಲ್ಲ.

### ಹಾಗಾದರೆ ಮುಕ್ತ ಕಲಿಕೆಯ ವ್ಯವಸ್ಥೆಗೆ ಒತ್ತುಕೊಡುತ್ತಿರುವುದೇಕೆ?

ಇಂದು ನಮ್ಮ ಕೋಟ್ಯಂತರ ಬಡ ಸೋದರ-ಸೋದರಿಯರು ಶಿಕ್ಷಣದಿಂದ ವಂಚಿತರಾಗಿದ್ದಾರೆ. ದೇಶದೆಲ್ಲೆಡೆ ೮ ಕೋಟಿಗಿಂತಲೂ ಕಡಿಮೆಯಿರದ ಇವರಿಗೆ ಶಿಕ್ಷಣದ ಭಾಗ್ಯವೇ ಇಲ್ಲ. ಹಾಗಾಗಿ ಈ ನತದೃಷ್ಟ ಮಕ್ಕಳಿಗೆ ಕ್ರಮಬದ್ಧವಾದ ಔಪಚಾರಿಕ ಶಿಕ್ಷಣ ನೀಡುವ ಏಕೈಕ ಮಾರ್ಗವೆಂದರೆ, ಬಾಲಕಾರ್ಮಿಕ ಪದ್ಧತಿಯನ್ನು ನಿರ್ಮೂಲನಗೊಳಿಸಿ ಅವರಿಗೆ ಶಿಕ್ಷಣಾವಕಾಶ ನೀಡುವುದು.

ಆದರೆ ನಮ್ಮ ದೇಶದಲ್ಲಿ ಆತಂಕಕಾರಿ ಮಟ್ಟದಲ್ಲಿ ಬೆಳೆಯುತ್ತಿರುವ ಅನಕ್ಷರತೆಯ ಬಗ್ಗೆ ಬೊಬ್ಬೆಯಿಡುವ ಸರ್ಕಾರಗಳು, ಈ ಅಮಾನುಷ ಆಚರಣೆಯನ್ನು ನಿರ್ಮೂಲನ ಮಾಡುವುದರ ಬಗ್ಗೆ ಹಿಂದಿನಿಂದಲೂ ತಮ್ಮ ಪಾತಕೀ ನಿರ್ಲಕ್ಷ್ಯವನ್ನು ತೋರಿಸುತ್ತಾ ಬಂದಿವೆ. ಈಗ ಎನ್. ಸಿ. ಇ. ಆರ್. ಟಿ. ದಸ್ತಾವೇಜಿನಲ್ಲಿ ಮುಕ್ತ ಕಲಿಕೆಯ ವ್ಯವಸ್ಥೆಗೆ ಒತ್ತು ನೀಡುವುದರ ಮೂಲಕ ಸರ್ಕಾರವು ಈ ಪಿಡುಗನ್ನು ಬಗೆಹರಿಸುವಲ್ಲಿ ತನಗೆ ರಾಜಕೀಯ ಸಂಕಲ್ಪವಿಲ್ಲ ಎನ್ನುವುದನ್ನು ಬಯಲುಗೊಳಿಸಿಕೊಂಡಿದೆ.

ಅಲ್ಲದೆ, ಅಪಾರ ಬಡಜನತೆಗೆ ಔಪಚಾರಿಕ ಶಿಕ್ಷಣವನ್ನು ನಿರಾಕರಿಸಿ ಸರ್ಕಾರ ತನ್ನ ಅತ್ಯಂತ ಶಿಕ್ಷಣ ವಿರೋಧಿ ಧೋರಣೆಯನ್ನು ಪ್ರದರ್ಶಿಸಿದೆ.

**ಶಿಕ್ಷಣವನ್ನು ವೃತ್ತಿಪರಗೊಳಿಸುವಿಕೆ**

ದಸ್ತಾವೇಜು +2 ಮತ್ತು ಕೆಳಹಂತಗಳಲ್ಲಿ ವೃತ್ತಿಪರ ಕೋರ್ಸ್‌ಗಳನ್ನು ತೆರೆಯಲು ಪ್ರಸ್ತಾಪಿಸಿದೆ. ದಸ್ತಾವೇಜು ಹೇಳುತ್ತದೆ: ''ಶಿಕ್ಷಣವನ್ನು ಸಾರ್ವತ್ರಿಕವಾಗಿ ವೃತ್ತಿಪರಗೊಳಿಸುವುದು ಒಂದು ಅವಶ್ಯಕತೆಯಾಗಿದೆ...'' +2 ಮಟ್ಟದಲ್ಲಿ ವೃತ್ತಿಪರ ಶಿಕ್ಷಣ ಕಾರ್ಯಕ್ರಮವು ವಿದ್ಯಾರ್ಥಿಯನ್ನು ಉದ್ಯೋಗಕ್ಕೆ ಅನುವು ಮಾಡಲು ಹೆಚ್ಚಿನ ಸಾಮರ್ಥ್ಯ ನೀಡುವ ಹಾಗೂ ಪ್ರಮುಖವಾಗಿ ಸ್ವಯಂ-ಉದ್ಯೋಗಕ್ಕಾಗಿ ವಿದ್ಯಾರ್ಥಿಗಳನ್ನು ತಯಾರು ಮಾಡಲು ಬೇಕಾದಂತಹ ಜ್ಞಾನವನ್ನು ಬೆಳೆಸುವ ಗುರಿ ಹೊಂದಿದೆ. ಶಿಕ್ಷಣ ಮತ್ತು ಉದ್ಯೋಗದ ಬಗ್ಗೆ ಎಂತಹ ಕಾಳಜಿ ! ಶಿಕ್ಷಣವು ಒಟ್ಟಾರೆ ಸಮಗ್ರ ಬೆಳವಣಿಗೆಗೆ ಒಂದು ಸಾಧನವೆಂಬ ಪರಿಕಲ್ಪನೆಯ ಬದಲಿಗೆ ಅದು ಕೇವಲ ಉತ್ಪಾದನಾ ಚಟುವಟಿಕೆಗಳಲ್ಲಿ ನಿರತವಾಗಲು ವಿದ್ಯಾರ್ಥಿಗಳಿಗೆ ಅವಶ್ಯವಾದ ಕೆಲವು ಕುಶಲತೆಗಳನ್ನು ನೀಡುವುದು ಅದರ ಗುರಿಯೆಂದು ''ಆಧುನಿಕ ಪರಿಕಲ್ಪನೆ''ಯನ್ನು ತರುತ್ತಿದೆ.

ಯಾವುದೇ ಹಂತದಲ್ಲೂ ವೃತ್ತಿಪರ ಕೋರ್ಸುಗಳು ಇರಲೇಬಾರದು ಎಂದಲ್ಲ. ಈಗಾಗಲೇ ದೇಶದಾದ್ಯಂತ ಹಲವಾರು ವೃತ್ತಿಪರ ಕೋರ್ಸುಗಳು ಅಸ್ತಿತ್ವದಲ್ಲಿವೆ. ಕೆಲವು ವಿದ್ಯಾರ್ಥಿಗಳು ಕನಿಷ್ಠ ಮಟ್ಟದ ಕಡ್ಡಾಯ ಕಲಿಕೆ ಮುಗಿಸಿದ ನಂತರ ಹಲವಾರು ಕಾರಣಗಳಿಂದ ಈ ಕೋರ್ಸುಗಳನ್ನು ಆರಿಸಿಕೊಳ್ಳಬಹುದು. ಅವರಿಗೆ ಆ ಅವಕಾಶಗಳನ್ನು ಒದಗಿಸಬೇಕು. ಕೆಲವು ಹಂತದಲ್ಲಿ ವೃತ್ತಿಪರ ಕೋರ್ಸುಗಳನ್ನು ತೆರೆಯುವುದು ಒಂದು ವಿಷಯವಾದರೆ, ಸಮಗ್ರ ಜ್ಞಾನದ ಗಳಿಕೆಯನ್ನು ನಾಶಮಾಡುವಂತೆ ಮತ್ತು ಚಿಂತನಾರಹಿತ ಯಾಂತ್ರೀಕೃತ ಯಂತ್ರಮಾನವರನ್ನು ಸೃಷ್ಟಿಸುವಂತೆ ಇಡೀ ಶಿಕ್ಷಣವನ್ನು ವೃತ್ತಿಪರಗೊಳಿಸುವುದು ಸಂಪೂರ್ಣವಾಗಿ ಬೇರೆಯದೇ ಆದ ವಿಷಯವಾಗುತ್ತದೆ.

**ಧರ್ಮನಿರಪೇಕ್ಷತೆಯ ಪರಿಕಲ್ಪನೆಯ ತಿರುಚುವಿಕೆ**

ಈ ಹಿಂದೆ ಬಿಜೆಪಿ ಸರ್ಕಾರವು ನಮ್ಮ ಶಿಕ್ಷಣ ವ್ಯವಸ್ಥೆಯನ್ನು ಭಾರತೀಕರಣ, ಆಧ್ಯಾತ್ಮೀಕರಣ ಮತ್ತು ರಾಷ್ಟ್ರವಾದೀಕರಣಗೊಳಿಸಲು ಪ್ರಸ್ತಾಪಿಸಿತ್ತು. ಆದರೆ, ದೇಶದಾದ್ಯಂತ ವ್ಯಾಪಕ ವಿರೋಧ ವ್ಯಕ್ತವಾದ ಹಿನ್ನೆಲೆಯಲ್ಲಿ ತರಾತುರಿಯಾಗಿ ಸರ್ಕಾರ ಹಿಂದೆ ಸರಿಯಬೇಕಾಯಿತು. ಈ ಘಟನೆಗಳಿಂದ ಪಾಠ ಕಲಿತ ಸರ್ಕಾರವು, ಈಗ ಇದೇ ನೀತಿಗಳನ್ನು ಕುಟಿಲತೆಯಿಂದ ಎನ್. ಸಿ. ಇ. ಆರ್. ಟಿ. ಯ ಶಿಫಾರಸುಗಳ ಮೂಲಕ ತರುತ್ತಿದೆ. ಧರ್ಮನಿರಪೇಕ್ಷತೆ ಪದಕ್ಕೆ ಹೊಸ ವ್ಯಾಖ್ಯಾನ ನೀಡಿದೆ. ದಸ್ತಾವೇಜು ಹೇಳುತ್ತದೆ: ''ಪ್ರಸಕ್ತ ಶೈಕ್ಷಣಿಕ ರಂಗದಲ್ಲಿ ಧರ್ಮನಿರಪೇಕ್ಷತೆಯನ್ನು ಧರ್ಮದ ನಿರಾಕರಣೆಯೆಂದು ತಪ್ಪಾಗಿ ಅರ್ಥೈಸಲಾಗಿದೆ. ಇದೀಗ ಈ ಪದದ ಅರ್ಥವು ಎಲ್ಲಾ ಧರ್ಮಗಳನ್ನು ಸಮಾನವಾಗಿ ಅರ್ಥಮಾಡಿಕೊಳ್ಳುವುದು ಮತ್ತು ಗೌರವಿಸುವುದು ಅಂದರೆ 'ಸರ್ವಧರ್ಮ ಸಮಭಾವ' ಎಂದು ಅರ್ಥಮಾಡಿಕೊಳ್ಳಬೇಕೆಂಬ ಅಭಿಪ್ರಾಯವು ಹೊರಹೊಮ್ಮಿದೆ''. ಎರಡನೆಯದಾಗಿ, ಧರ್ಮದ ಅಧ್ಯಯನ ಮತ್ತು ಆಚರಣೆಯಿಲ್ಲದೆ, ವ್ಯಕ್ತಿತ್ವ ಮತ್ತು ನೈತಿಕ ಮೌಲ್ಯಗಳ ಬೆಳವಣಿಗೆ ಸಾಧ್ಯವಿಲ್ಲವೆಂದು ತೀರ್ಮಾನಕ್ಕೆ ಬರಲಾಗಿದೆ. ಧಾರ್ಮಿಕ ಶಿಕ್ಷಣವನ್ನು ಸಂಪೂರ್ಣವಾಗಿ ಮನೆ ಮತ್ತು ಸಮುದಾಯಗಳಿಗೆ ಸೀಮಿತಗೊಳಿಸಿದರೆ ನೈತಿಕ ಬೋಧನೆಗಳು ಮತ್ತು ಆಧ್ಯಾತ್ಮಿಕ ಮೌಲ್ಯಗಳ ಅಲಕ್ಷ್ಯಕ್ಕೆ ಎಡೆ ಮಾಡಿ ಕೊಡುತ್ತದೆಯೆಂದು ದಸ್ತಾವೇಜು ಹೇಳುತ್ತದೆ: ''ಒಮ್ಮೆ ಈ ಕಾರ್ಯಕ್ರಮವನ್ನು ಸಮತೋಲನವಾಗಿ ಮತ್ತು ಯುಕ್ತಾಯುಕ್ತವಾಗಿ ಅನುಷ್ಠಾನಗೊಳಿಸಿದರೆ, ಐಕ್ಯತೆ ಮತ್ತು ಸಾಮರಸ್ಯ ತರುವ ಮೂಲತತ್ವಗಳು, ಭಾರತದ ಎಲ್ಲಾ ಧರ್ಮಗಳನ್ನು ಅರ್ಥಮಾಡಿಕೊಳ್ಳುವುದು ಮತ್ತು ಗೌರವಿಸುವುದನ್ನು ಪರಿಣಾಮಕಾರಿಯಾಗಿ ಬೆಳೆಸುತ್ತವೆ ಮತ್ತು ಸಹನಾಯುಕ್ತ ಹಾಗೂ ಐಕ್ಯಮತ್ಯ ಸಮಾಜವನ್ನು ಸೃಷ್ಟಿಸುತ್ತದೆ''. ಇದು ಮಹಾನ್ ನಿರೀಕ್ಷೆಯೇ ಸರಿ!

ಧರ್ಮನಿರಪೇಕ್ಷತೆಯ ಪರಿಕಲ್ಪನೆಯು ವಿಜ್ಞಾನದ ವಿವಿಧ ವಿಭಾಗಗಳಲ್ಲಿರುವ ಪರಿಕಲ್ಪನೆಗಳಂತೆ ಅನನ್ಯವಾದ ಹಾಗೂ ಒಂದು ನಿರ್ದಿಷ್ಟ ಅರ್ಥವುಳ್ಳ ಪರಿಕಲ್ಪನೆಯಾಗಿದೆ. ಇದನ್ನು ವ್ಯಕ್ತಿಯ ಇಷ್ಟಾನುಸಾರ ವ್ಯಾಖ್ಯಾನಮಾಡುವುದು ಸೂಕ್ತವಲ್ಲ. ಇದರ ಅರ್ಥವನ್ನು ಅರಿತುಕೊಳ್ಳಲು ಇತಿಹಾಸದಲ್ಲಿ ಇದರ ಉಗಮದ ಬಗ್ಗೆ ಅಧ್ಯಯನ ಮಾಡುವುದರ ಅಗತ್ಯವಿದೆ. ನವೋದಯದ ಕಾಲದಲ್ಲಿ ಈ ಪದದ ಉಗಮವಾಯಿತು. ನವೋದಯದ ತತ್ವಜ್ಞಾನಿ ಜೆ. ಎಸ್. ಮಿಲ್ ಧರ್ಮನಿರಪೇಕ್ಷತೆಯು ''......ಈ ಜೀವನಕ್ಕೆ ಸಂಬಂಧವಿರುವ ಯಾವುದೇ ವಿಷಯ; ಆದುದರಿಂದ ಧರ್ಮನಿರಪೇಕ್ಷತಾ ವಿಷಯಗಳೆಂದರೆ ಧರ್ಮವನ್ನು ಹೊರತುಪಡಿಸಿದ ಎಲ್ಲಾ ವಿಷಯಗಳು'' ಎಂದು ವ್ಯಾಖ್ಯಾನಿಸಿದ್ದುದುಂಟು (ಲಂಕಾಷೈರ್ ಪಬ್ಲಿಕ್ ಸ್ಕೂಲ್ ಅಸೋಸಿಯೇಷನ್‌ನಲ್ಲಿ ಮಾಡಿದ ಭಾಷಣ, ೧೮೪೯). ಇದು ವಿಶ್ವದಾದ್ಯಂತ ಸಾರ್ವತ್ರಿಕವಾಗಿ ಒಪ್ಪಿಗೆಯಾಗಿರುವ ಧರ್ಮನಿರಪೇಕ್ಷತೆಯ ಪರಿಕಲ್ಪನೆ. ಈ ಪರಿಕಲ್ಪನೆಯು ಊಳಿಗಮಾನ್ಯ ಪದ್ಧತಿ ಮತ್ತು ಅದರ ಪರವಾಗಿ ನಿಂತು ಅದನ್ನು ರಕ್ಷಿಸಿದ ಧಾರ್ಮಿಕ ಅಂಧಶ್ರದ್ಧೆಗಳ ವಿರುದ್ಧದ ಹೋರಾಟದಲ್ಲಿ ಹೊರಹೊಮ್ಮಿತು. ಈ ಹೋರಾಟದ ಉದ್ದೇಶವು ಮೂಢನಂಬಿಕೆ, ಧಾರ್ಮಿಕ ಅಂಧಶ್ರದ್ಧೆಗಳ ಮತ್ತು ಚರ್ಚಿನ ಬಿಗಿಮುಷ್ಟಿಯಿಂದ ಸಮಾಜವನ್ನು ಮುಕ್ತಗೊಳಿಸುವುದಾಗಿತ್ತು ಮತ್ತು ವೈಜ್ಞಾನಿಕ, ಪ್ರಜಾತಾಂತ್ರಿಕ ಹಾಗೂ ಧರ್ಮನಿರಪೇಕ್ಷ ಜೀವನದ ಆದರ್ಶಗಳನ್ನು ಹೊಂದಿರುವ ಹೊಸ ಸಮಾಜವನ್ನು ಸ್ಥಾಪಿಸುವುದಾಗಿತ್ತು. ಇದಕ್ಕಾಗಿ ಶಿಕ್ಷಣವನ್ನು ಧಾರ್ಮಿಕ ಅಂಧಶ್ರದ್ಧೆಯ ಸಂಕೋಲೆಗಳಿಂದ ಮುಕ್ತಗೊಳಿಸುವುದು ಅವಶ್ಯಕತೆಯಾಗಿತ್ತು. ಆದುದರಿಂದ ಈ ಪರಿಕಲ್ಪನೆಯನ್ನು ತಿರುಚುವ ಯಾವುದೇ ಪ್ರಯತ್ನವು ವಿವಿಧ ಜನಾಂಗಗಳಿಗೆ ಸೇರಿದ ಜನರ ನಡುವಿನ ಸೌಹಾರ್ದತೆ ಮತ್ತು ಐಕ್ಯಮತ್ಯಕ್ಕೆ ಗಂಭೀರ ಅಪಾಯವೊಡ್ಡುವ ಸೂಚನೆಯಾಗಿದೆ.




'ಭಾರ' ಎತ್ತುವ ನಿನ್ನ ಸಾಮರ್ಥ್ಯದ ಬಗ್ಗೆ ನನಗಿನ್ನು ಸಂಶಯ ಉಳಿದಿಲ್ಲಾ.....! ಬೇಗ ನನ್ನ ಕೆಳಗಿಳಿಸು

**ಧರ್ಮನಿರಪೇಕ್ಷ ಮಾನವತಾವಾದದ ಉದಯ**

ಸಮಾಜದ ಯಾವುದೇ ಹಂತದಲ್ಲಿ, ಹಳೆಯ ವಿಚಾರಗಳು ಹೊಸ ಆದರ್ಶಗಳು ಉದಯವಾಗಲು ದಾರಿ ಮಾಡಿಕೊಡಬೇಕಾಗುತ್ತದೆ. ಹಾಗೆಯೇ, ಊಳಿಗಮಾನ್ಯ ಪದ್ಧತಿಯ ಆಳ್ವಿಕೆಯನ್ನು ಸಂರಕ್ಷಿಸಿದ ಊಳಿಗಮಾನ್ಯ ಪದ್ಧತಿ ಮತ್ತು ಧಾರ್ಮಿಕ ಅಂಧಶ್ರದ್ಧೆಗಳು ಸಮಾಜದ ಪ್ರಗತಿಗೆ ಅಡ್ಡಿಯಾದಾಗ ಊಳಿಗಮಾನ್ಯ ವ್ಯವಸ್ಥೆಯನ್ನು ವಿರೋಧಿಸಿ ಹೊಸ ನೈತಿಕತೆ ಮತ್ತು ನೀತಿಗಳು ಹುಟ್ಟಿದವು. ಧರ್ಮನಿರಪೇಕ್ಷತೆಯೆಂಬ ಈ ಹೊಸ ವಿಚಾರವು ಮನುಕುಲದ ಇತಿಹಾಸದಲ್ಲಿ ಹೊಸ ಅಧ್ಯಾಯವನ್ನೇ ಆರಂಭಿಸಿತು. ಅದು ರೂಸೋ, ವಾಲ್ಟೇರ್, ಮಾಜಿನಿ, ಗ್ಯಾರಿಬಾಲ್ಡಿ, ಅಬ್ರಹಾಂ ಲಿಂಕನ್, ಜೆ. ಎಸ್. ಮಿಲ್ ರಂತಹ ಮೇರು ವ್ಯಕ್ತಿತ್ವಗಳನ್ನು ಸೃಷ್ಟಿಸಿತು. ನಮ್ಮ ದೇಶದಲ್ಲೂ ಸಹ ಮತಧರ್ಮದ ವಿರುದ್ಧ ಧ್ವನಿಯೆತ್ತಿದ ಈಶ್ವರಚಂದ್ರ ವಿದ್ಯಾಸಾಗರರಂತಹ ಮಹಾನ್ ವ್ಯಕ್ತಿತ್ವ ಹೊರಹೊಮ್ಮಲು ಎಡೆಮಾಡಿಕೊಟ್ಟಿತು. ಆದುದರಿಂದ ಅಂದಿನ ಪರಿಸ್ಥಿತಿಯಲ್ಲಿ ಮಹಾನ್ ವ್ಯಕ್ತಿತ್ವಗಳ ಸೃಷ್ಟಿಯಾದುದು ಧರ್ಮನಿರಪೇಕ್ಷ ಮಾನವತಾವಾದದ ಪರಿಕಲ್ಪನೆಯಿಂದಲೇ ಹೊರತು ಧರ್ಮದಿಂದಲ್ಲ. ಉನ್ನತ ನೈತಿಕತೆ ಹಾಗೂ ಮೌಲ್ಯಗಳು ಮತ್ತು ವಿಚಾರವಾದಿ ಮನೋಭಾವಗಳನ್ನು ಸೃಷ್ಟಿಸುವ ಸಲುವಾಗಿ ವಿದ್ಯಾರ್ಥಿ ಸಮುದಾಯದ ಮುಂದೆ ಅಂತಹ ವ್ಯಕ್ತಿಗಳನ್ನು ಆದರ್ಶವಾಗಿ ಎತ್ತಿಹಿಡಿಯಬೇಕಾಗಿತ್ತು. ಬದಲಿಗೆ ಎನ್. ಸಿ. ಇ. ಆರ್. ಟಿ.ಯು ಕೇವಲ ಅಂಧಶ್ರದ್ಧಾ ಮನೋಭಾವವನ್ನು ಸೃಷ್ಟಿಸಿ ವಿದ್ಯಾರ್ಥಿಗಳ ಬೆಳವಣಿಗೆಗೆ ಅಡಚಣೆಯಾಗುವ ಹಳೆಯ ಮತ್ತು ಪ್ರತಿಗಾಮಿ ವಿಚಾರಗಳನ್ನು ಪ್ರತಿಬಿಂಬಿಸುವಂತಹ ವ್ಯಕ್ತಿಗಳನ್ನು ಎತ್ತಿಹಿಡಿಯುವ ಉದ್ದೇಶ ಹೊಂದಿದೆ.

ಧರ್ಮ ಮತ್ತು ಧಾರ್ಮಿಕ ವ್ಯಕ್ತಿಗಳ ಬಗ್ಗೆ ಒಂದು ಸರಿಯಾದ ಐತಿಹಾಸಿಕ ದೃಷ್ಟಿಕೋನ ಮತ್ತು ಸರಿಯಾದ ಅಳತೆಗೋಲಿನಿಂದ ವಿಶ್ಲೇಷಿಸುವುದು ಒಂದು ವಿಷಯವಾದರೆ, ಅವುಗಳನ್ನು ಎಳೆಯ ಮತ್ತು ಅಪಕ್ವ ಮನಸ್ಸುಗಳಿಗೆ ಮಿಥಕಗಳು ಮತ್ತು ಅತಿಮಾನುಷ ಶಕ್ತಿಗಳ ವಿಷಯಗಳೊಂದಿಗೆ ಬೋಧಿಸುವುದು ಸಂಪೂರ್ಣವಾಗಿ ಬೇರೆಯ ವಿಷಯ. ವೈಜ್ಞಾನಿಕ ಮತ್ತು ವಿಚಾರವಾದಿ

ಚಿಂತನೆಗಳನ್ನು ತುಂಬುವಂತಹ ಸರಿಯಾದ ಶಿಕ್ಷಣದೊಂದಿಗೆ ವಿದ್ಯಾರ್ಥಿಗಳನ್ನು ಬೆಳೆಸಬೇಕು. ಒಮ್ಮೆ ವಿದ್ಯಾರ್ಥಿಯು ಅಂತಹ ಪಕ್ವತೆಗೆ ಮುಟ್ಟಿದ ನಂತರ ಸರಿಯಾದ ಐತಿಹಾಸಿಕ ದೃಷ್ಟಿಕೋನದಲ್ಲಿ ಸಂತರ ಮತ್ತು ಪ್ರವಾದಿಗಳ ಬಗ್ಗೆ ಬೋಧಿಸಿದರೂ, ಅದು ವಿದ್ಯಾರ್ಥಿಯನ್ನು ಅಂಥ ನಂಬಿಕೆ ಆಧಾರಿತ ಅವೈಜ್ಞಾನಿಕ ಮನೋಭಾವದ ಹಾದಿಗೆ ತಳ್ಳುವುದಿಲ್ಲ. ಬದಲಿಗೆ ಅದು ಇತಿಹಾಸವನ್ನು ಒಂದು ಸಮಗ್ರವಾದ ಮತ್ತು ಸುಸಂಬದ್ಧವಾದ ರೀತಿಯಲ್ಲಿ ಅಭ್ಯಸಿಸಲು ಸಹಾಯ ಮಾಡುತ್ತದೆ ಮತ್ತು ಈ ಪ್ರಕ್ರಿಯೆಯಲ್ಲಿ ಅಂತಹ ವ್ಯಕ್ತಿತ್ವಗಳ ಬಗ್ಗೆ ಸರಿಯಾದ ಗೌರವ ಮತ್ತು ಮೆಚ್ಚುಗೆಯನ್ನು ಬೆಳೆಸುತ್ತದೆ. ಆದರೆ ಎನ್. ಸಿ. ಇ. ಆರ್. ಟಿ.ಯ ದಸ್ತಾವೇಜು ಈ ಎರಡು ಧೋರಣೆಗಳ ನಡುವಿನ ಭಿನ್ನತೆಯನ್ನು ತೋರುವುದರಲ್ಲಿ ವಿಫಲವಾಗಿದೆ.

**ಈ ಕ್ರಮದ ಹಿಂದಿನ ಉದ್ದೇಶ**

ಧರ್ಮನಿರಪೇಕ್ಷತೆಯ ಬಗ್ಗೆ ಅಂತಹ ತಪ್ಪು ವ್ಯಾಖ್ಯಾನಗಳ ಬೆನ್ನಲ್ಲಿಯೇ ಶಿಕ್ಷಣದಲ್ಲಿ ಆರ್. ಎಸ್. ಎಸ್. ಛಾಪು ಮೂಡಿಸುವ 'ಹಿಂದುತ್ವ'ವನ್ನು ಎತ್ತಿಹಿಡಿಯುವ ಉದ್ದೇಶವಿದೆಯೆಂದು ನಂಬಲು ಸಾಕಷ್ಟು ಆಧಾರಗಳಿವೆ. 'ಸರ್ವಧರ್ಮ ಸಮಭಾವ'ವೆಂಬುದರ ನಿಜವಾದ ಅರ್ಥವನ್ನು ಬಿಜೆಪಿ ಆಡಳಿತದ ರಾಜ್ಯಗಳ ಮತ್ತು ವಿದ್ಯಾಭಾರತಿ ಶಾಲೆಗಳ ಪಠ್ಯಪುಸ್ತಕಗಳನ್ನು ಪರೀಕ್ಷಿಸಿ ನೋಡಿದರೆ ತಿಳಿಯುತ್ತದೆ. ೬೦ರ ದಶಕದ ಆರಂಭದಲ್ಲಿಯೇ ಆಗಿನ ಎನ್. ಸಿ. ಇ. ಆರ್. ಟಿ. ಯು ಅಂಥ ಪಠ್ಯಪುಸ್ತಕಗಳ ಅಧ್ಯಯನ ನಡೆಸಿ, ಅವುಗಳಲ್ಲಿ ಹೇಗೆ ಕೋಮುವಾದಿ ಪೂರ್ವಗ್ರಹಗಳಿದ್ದವು ಮತ್ತು ಅತ್ಯಂತ ತಪ್ಪು ವ್ಯಾಖ್ಯಾನಗಳಿದ್ದವು ಎಂದು ತೋರಿಸಿಕೊಟ್ಟಿತು. ಉತ್ತರ ಪ್ರದೇಶದ ಪ್ರೌಢಶಾಲೆಯ ಇತಿಹಾಸ (ಭಾಗ-೧)ದಲ್ಲಿ ಐತಿಹಾಸಿಕವಾಗಿ ಅಂಗೀಕೃತವಾದಂತಹ ಅಭಿಪ್ರಾಯಗಳಿಗೆ ತದ್ವಿರುದ್ಧವಾದ ಸಂಗತಿಗಳನ್ನು ಹೇಳಲಾಗಿದೆ: ''....ಕುದುರೆಗಳ ಮೂಳೆಗಳು, ಅವರ ಆಟಿಕೆಗಳು, ಯಜ್ಞ ಬಲಿಪೀಠಗಳ ಬಗ್ಗೆ ನಡೆದ ಸಂಶೋಧನೆಗಳಿಂದ ಹರಪ್ಪ ಜನರು ಮತ್ತು ವೇದಕಾಲದ ನಾಗರಿಕತೆಗಳು ಒಂದೇ ಆಗಿದೆಯೆಂಬ ತೀರ್ಮಾನಕ್ಕೆ ಇತಿಹಾಸತಜ್ಞರು ಬರುತ್ತಿದ್ದಾರೆ.'' ಒಂ ತರಗತಿಯ ಸಾಮಾನ್ಯ ಜ್ಞಾನದ ಪಠ್ಯಪುಸ್ತಕಗಳ ಪ್ರಶ್ನೆಗಳು ಈ ರೀತಿಯಿದ್ದವು : ''ಬಾಬರನು ಯಾವಾಗ ರಾಮಮಂದಿರವನ್ನು ಕೆಡವಿದನು ಮತ್ತು ಬಾಬ್ರಿ ಮಸೀದಿಯನ್ನು ಕಟ್ಟಿಸಿದನು ?'' ಮಹಾರಾಷ್ಟ್ರದ ೩ನೇ ಬಿ. ಎ. ಪದವಿಯ ತರಗತಿಯ ಪಠ್ಯಪುಸ್ತಕದಲ್ಲಿ ಇಸ್ಲಾಂ ವಿರುದ್ಧ ಇನ್ನೂ ತೀವ್ರವಾದ ದೋಷಾರೋಪಣೆ ಕಾಣಿಸುತ್ತದೆ. ಆ ಪುಸ್ತಕದಲ್ಲಿ ''ಇಸ್ಲಾಂನ ಆಗಮನವು ಅರಬರಿಗೆ ವರವಾಗಿರಬಹುದು: ಏಕೆಂದರೆ ಈ ಪತಾಕೆಯಡಿ ಅವರೆಲ್ಲಾ ಒಗ್ಗಟ್ಟಾದರು ಮತ್ತು ಏಷ್ಯಾ, ಆಫ್ರಿಕಾ ಹಾಗೂ ಯುರೋಪ್‌ಗಳನ್ನು ಗೆದ್ದುಕೊಳ್ಳಲು, ಆಕ್ರಮಣಗಳನ್ನು ನಡೆಸಲು ಉತ್ತೇಜಿತರಾದರು. ಆದರೆ ಇದು ಅರಬ್ ಪ್ರಪಂಚದ ಹೊರಗಿನ ಜನರಿಗೆ ಶಾಪವಾಯಿತು. ಏಕೆಂದರೆ ಇಸ್ಲಾಂ ತಂಡಗಳು ಹೋದೆಡೆಯೆಲ್ಲಾ ಕೇವಲ ದೇಶಗಳನ್ನು ಆಕ್ರಮಿಸುವುದಷ್ಟೇ ಅಲ್ಲದೆ, ಮಿಲಿಯಾಂತರ ಜನರನ್ನು ಕೊಂದು, ಅವರ ಮನೆಗಳನ್ನು ಮತ್ತು ಆರಾಧನಾ ಸ್ಥಳಗಳನ್ನು ಲೂಟಿ ಮಾಡಿದರು.... ಇಷ್ಟೆಲ್ಲಾ ಘೋರ ಕೃತ್ಯಗಳೇಕೆ ? ಏಕೆಂದರೆ ಇಸ್ಲಾಂ ದೌರ್ಜನ್ಯಗಳನ್ನು ಬೋಧಿಸುತ್ತದೆ.'' ಈ ರೀತಿಯ ಅಲ್ಪಸಂಖ್ಯಾತರ, ಅದರಲ್ಲೂ ಪ್ರಮುಖವಾಗಿ ಮುಸ್ಲಿಮರ ವಿರುದ್ಧದ ಕೋಮುವಾದಿ ಪೂರ್ವಗ್ರಹದ ದೋಷಾರೋಪಣೆಯು ಗುಜರಾತ್ ಮತ್ತು ರಾಜಸ್ಥಾನದ ಪಠ್ಯಪುಸ್ತಕಗಳಲ್ಲೂ ಸಹ ಕಾಣುತ್ತದೆ. ಈ ಹಿನ್ನೆಲೆಯಲ್ಲಿ, ದಸ್ತಾವೇಜಿನಲ್ಲಿ ಹೇಳಿಕೊಂಡಿರುವಂತೆ ಬಿಜೆಪಿ ಸರ್ಕಾರವು ನಿಜವಾಗಿಯೂ ಎಲ್ಲಾ ಧರ್ಮಗಳನ್ನು ಗೌರವಿಸುವ ಪರಿಕಲ್ಪನೆಯನ್ನಾದರೂ ಎತ್ತಿ ಹಿಡಿಯುತ್ತದೆ ಎಂದು ನಂಬುತ್ತದೆಂದು ನಾವು ನಂಬಬಹುದೇ? ಎಲ್ಲಾ ಧರ್ಮಗಳ ಬಗ್ಗೆ ಗೌರವ ವ್ಯಕ್ತಪಡಿಸುವುದನ್ನು ಧರ್ಮನಿರಪೇಕ್ಷತೆಯೆಂದು ಕರೆಯಲಾಗದು. ಹೆಚ್ಚೆಂದರೆ ಅದನ್ನು ಕೋಮುವಾದವಲ್ಲವೆಂದು ಹೇಳಬಹುದು. ಆದರೆ ಇತ್ತೀಚಿನ ಕೋಮುವಾದಿ ದಾಳಿ, ಕೊಲೆ, ಅತ್ಯಾಚಾರ ಮತ್ತು ಭಾಷಾ ಅಲ್ಪಸಂಖ್ಯಾತರ ಮರು-ಮತಾಂತರದಂತಹ ಅಪರಾಧೀ ಕೃತ್ಯಗಳು ''ಸರ್ವಧರ್ಮ ಸಮಭಾವ'' ಘೋಷಣೆಯ ಮಿಥ್ಯಾ ಮುಖವಾಡವನ್ನೂ ಸಹ ಕಿತ್ತೊಗೆದು ಸರ್ಕಾರದ 'ಹಿಂದುತ್ವ'ದ ನಿಜವಾದ ಬಣ್ಣವನ್ನು ಬಯಲು ಮಾಡುವುದಿಲ್ಲವೇ ?

**ಮುಂದಿರುವ ಕರ್ತವ್ಯಗಳು**

ದಸ್ತಾವೇಜು ಒಂದೆಡೆ, ಶಿಕ್ಷಣವನ್ನು ಭೌಗೋಳಿಕರಣ ಮತ್ತು ಉದಾರೀಕರಣಗಳ ಯೋಜನೆಗೆ ತಕ್ಕಂತೆ ಸ್ಥಾಪಿಸಲು ಪ್ರಯತ್ನಿಸುತ್ತಿದೆ. ಮತ್ತೊಂದೆಡೆ, ಎಲ್ಲಾ ರೀತಿಯ ಮೂಢನಂಬಿಕೆ ಮತ್ತು ಅಂಧಶ್ರದ್ಧೆಯ ವಿಚಾರಗಳನ್ನು ಪೋಷಿಸುತ್ತದೆ. ನಿಜವಾಗಿಯೂ ಇದೊಂದು ಅಪಾಯಕಾರಿ ಪ್ರಸ್ತಾಪವೇ ಸರಿ! ಚಿಂತನಾ ಪ್ರಕ್ರಿಯೆಯಲ್ಲಿ ಅಂಧಾನುಕರಣೆ ಸೃಷ್ಟಿಸುತ್ತಾ, ಇದು ಧಾರ್ಮಿಕ ಅಂಧಾಭಿಮಾನದ ಸೆಳೆತಕ್ಕೆ ಒಳಗಾಗುವ ಯಾಂತ್ರಿಕ ಮನೋಭಾವವನ್ನು ಬೆಳೆಸುತ್ತದೆ. ನಮ್ಮ ಮಹಾನ್ ಸಮಾಜಸುಧಾರಕರಾದ ಈಶ್ವರಚಂದ್ರ ವಿದ್ಯಾಸಾಗರ್, ರಾಜಾ ರಾಮ್‌ಮೋಹನ್ ರಾಯ್, ಭಗತ್ ಸಿಂಗ್, ಸುಭಾಷ್ ಚಂದ್ರ ಬೋಸ್, ಮುಂತಾದವರ ವೈಜ್ಞಾನಿಕ, ಧರ್ಮನಿರಪೇಕ್ಷ, ಪ್ರಜಾತಾಂತ್ರಿಕ ಶಿಕ್ಷಣ ಪದ್ಧತಿಯನ್ನು ತುಳಿದು ಸರ್ಕಾರವು ತನ್ನ ಯೋಜನೆಯನ್ನು ಸಾಧಿಸಲೆತ್ನಿಸುತ್ತಿದೆ. ಇಂದು ಆ ಮಹಾಪುರುಷರ ಕನಸುಗಳು ನುಚ್ಚುನೂರಾಗಿವೆ ! ಎನ್. ಸಿ. ಇ. ಆರ್. ಟಿ. ದಸ್ತಾವೇಜು ಇಂದು ಒಟ್ಟಾರೆ ವಿಜ್ಞಾನದ ತಾಂತ್ರಿಕ ಅಂಶಗಳ ಮತ್ತು ಧಾರ್ಮಿಕ ಅಂಧಶ್ರದ್ಧೆಯ ವಿಚಿತ್ರ ಫ್ಯಾಸಿವಾದಿ ಸಮ್ಮಿಶ್ರಣವನ್ನು ಶಿಕ್ಷಣದಲ್ಲಿ ತರಲು ಪ್ರಸ್ತಾಪಿಸಿದೆ. ಮನುಕುಲದ ಮತ್ತು ನಾಗರಿಕತೆಯ ಈ ಘನಘೋರ ವೈರಿಯು ಒಮ್ಮೆ ಸಮಾಜದಲ್ಲಿ ಭದ್ರವಾಗಿ ಸ್ಥಾಪಿತವಾದರೆ, ಆಗ ''ಮಾನವ'' ನೆಂದು ಕರೆಯಲ್ಪಡಬಹುದಾದಂತಹವರು ಹೆಚ್ಚು ಜನರಿರುವುದಿಲ್ಲ, ಏಕೆಂದರೆ ಫ್ಯಾಸೀ ವಾದವು ಮಾನವನನ್ನು ಕೇವಲ 'ಅಮಾನವೀಯನನ್ನಾಗಿ' ಮಾಡುವುದಷ್ಟೇ ಅಲ್ಲದೆ, ಆತನ ಬೆಳವಣಿಗೆಯನ್ನೇ ಅಡ್ಡಿಪಡಿಸುತ್ತದೆ. ನಾವು ಈ ಭೀಕರ ಪರಿಸ್ಥಿತಿಯಿಂದ ಖಂಡಿತವಾಗಿಯೂ ಬಹುದೂರ ಉಳಿದಿಲ್ಲ. ಬದಲಿಗೆ ಪ್ರಸ್ತಾಪಿತ ದಸ್ತಾವೇಜು ಈ ಅಪಾಯಕಾರಿ ಉದ್ದೇಶದೆಡೆಗೆ ಒಂದು ದಾಪುಗಾಲನ್ನೇ ಹಾಕಿದೆ. ಆದುದರಿಂದ ಈ ವಿನಾಶಕಾರಿ ಮತ್ತು ಜನವಿರೋಧಿ ಶೈಕ್ಷಣಿಕ ನೀತಿಯನ್ನು ತಡೆಗಟ್ಟಲೇಬೇಕಾದ ಕಾಲ ಬಂದಿದೆ. ಸಮಾಜ, ಮನುಕುಲ ಮತ್ತು ನಾಗರಿಕತೆಯ ವಿರೋಧಿಯಾದ ಈ ನೀತಿಯನ್ನು ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಒಕ್ಕೊರಲಿನಿಂದ ತಿರಸ್ಕರಿಸಬೇಕು ಮತ್ತು ಇದನ್ನು ಅನುಷ್ಠಾನಗೊಳಿಸದಿರುವಂತೆ ರಾಜ್ಯ ಮತ್ತು ದೇಶದೆಲ್ಲೆಡೆ ಪ್ರಬಲ ಆಂದೋಲನವನ್ನು ಬೆಳೆಸಬೇಕು.

ಎಂ. ಎನ್. ಶ್ರೀರಾಮ್
೩೧, ಮೂರನೆಯ ಅಡ್ಡರಸ್ತೆ, ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩.

# ಸ್ವಾತಂತ್ರ್ಯ ಸಂಗ್ರಾಮದ ಹಿನ್ನೆಲೆಯ ಸತ್ವಪೂರ್ಣ ಕಾದಂಬರಿ

ಸೀಯಾರ್ಕೆ

ಹಿರಿಯ ಸಾಹಿತಿ ಶ್ರೀ ವ್ಯಾಸರಾಯ ಬಲ್ಲಾಳರ ಇತ್ತೀಚಿನ ಕಾದಂಬರಿ ಹೆಜ್ಜೆ....... ಭಾರತ ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿ ರಚಿತಗೊಂಡಿರುವ ಕೃತಿ. ಅವರ ಇತರ ಕಾದಂಬರಿಗಳಂತೆಯೇ ವಿಶಿಷ್ಟ, ವಿಚಾರಪೂರ್ಣ. ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ಜರುಗಿದ ಸ್ವಾತಂತ್ರ್ಯ ಸಮರ ಬ್ರಿಟಿಷ್ ವಸಾಹತುಶಾಹಿಗಳ ವಿರುದ್ಧ ನಡೆದ ಹೋರಾಟವಷ್ಟೇ ಆಗಿರದೆ, ನಾಡಿನ ಸಾಮಾಜಿಕ ಜೀವನದಲ್ಲೂ ಬದಲಾವಣೆಗಳನ್ನು ಪ್ರೇರೇಪಿಸಿತು. ಈ ಬದಲಾವಣೆಗಳು ನಿರೀಕ್ಷಿತ ಪ್ರಮಾಣದಲ್ಲಾಗದಿದ್ದರೂ ಗಮನಾರ್ಹ. ಇದನ್ನು ಸೂಕ್ಷ್ಮವಾದ ರೀತಿಯಲ್ಲಿ ಗುರ್ತಿಸಿರುವುದೇ ಬಲ್ಲಾಳರ ಈ ಕಾದಂಬರಿಯ ಹಿರಿಮೆ.




ಪುಟಗಳು : ೪೮೮ ಬೆಲೆ : ರೂ. ೧೪೦
ಗೀತಾ ಬುಕ್ ಹೌಸ್, ಮೈಸೂರು - ೧

ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ಕ್ಷೇತ್ರದಿಂದ ಸುಮಾರು ದೂರ ಇರುವ ಕುಗ್ರಾಮವೊಂದರ ಸನಾತನ, ಸುಸಂಸ್ಕೃತ, ಸಂಪ್ರದಾಯಸ್ಥ ಕುಟುಂಬವೊಂದರಲ್ಲಿ ಸಂಭವಿಸುವ ಘಟನೆಗಳನ್ನು ಕೇಂದ್ರವಾಗಿರಿಸಿಕೊಂಡು ಕಾದಂಬರಿಕಾರರು ಕಾಲಗತಿಯಲ್ಲಿ ಆದ ಸಾಮಾಜಿಕ ಬದಲಾವಣೆಗಳನ್ನು ವಿಶ್ಲೇಷಣೆ ಮಾಡಿದ್ದಾರೆ. ಸ್ವಾತಂತ್ರ್ಯ ಹೋರಾಟಗಾರ ಚಿಕ್ಕಪ್ಪನ ಜೊತೆಯಲ್ಲಿ, ಮಂಗಳೂರಿಗೆ ಬಂದಿದ್ದ ಗಾಂಧೀಜಿಯನ್ನು ದೂರದಿಂದ ನೋಡಿದ ಪುಟ್ಟ ಬಾಲಕಿ ಸಾವಿತ್ರಿಯ ಮೇಲೆ ಆದ ಪರಿಣಾಮ ಗಾಢವಾದ್ದು. ಮುಂದೆ ಈ ಬಾಲಕಿ ದೊಡ್ಡವಳಾಗಿ ಗಾಂಧಿ ಹುಡುಗಿಯೇ ಆಗುತ್ತಾಳೆ ಎಲ್ಲರಿಗೂ. ಈ ಗಾಂಧಿ ಹುಡುಗಿಯೇ ಕಾದಂಬರಿಯ ನಾಯಕಿ, ಸುತ್ತಲ ಬದಲಾವಣೆಗಳಿಗೆ ಆಕೆಯೇ ಕೇಂದ್ರ. ಕಟ್ಟಾ ಸಂಪ್ರದಾಯಸ್ಥರು, ಸಂಸ್ಕೃತ ವಿದ್ವಾಂಸರು, ವೇದಶಾಸ್ತ್ರ ಪಾರಂಗತರೂ ಧರ್ಮನಿಷ್ಠರೂ ಆದ ಶ್ರೀಕಂಠ ಶಾಸ್ತ್ರಿಗಳ ಕುಟುಂಬದ ಸುತ್ತ ಸಂಚರಿಸುವ ಈ ಕಾದಂಬರಿ ಇಡೀ ದೇಶದ ಸಾಮಾಜಿಕ ಜೀವನದಲ್ಲಾಗುತ್ತಿದ್ದ ಬದಲಾವಣೆಗಳಿಗೆ ಕನ್ನಡಿ. ಒಂದು ರೀತಿಯಲ್ಲಿ ಶಾಸ್ತ್ರಿಗಳು ತಮ್ಮ ಕಣ್ಣೆದುರೇ ಸಂಭವಿಸುತ್ತಿರುವ ಬದಲಾವಣೆಗಳಿಗೆ ಮೂಕಪ್ರೇಕ್ಷಕ ಎನ್ನಬಹುದು. ಬದಲಾವಣೆಗಳನ್ನು ವಿರೋಧಿಸಬಯಸದೆ, ಅವಕ್ಕೆ ಪ್ರತಿಕ್ರಿಯಿಸದೆ, ಅನಿವಾರ್ಯವೆಂದು ಅಂಗೀಕರಿಸುವ ಮನೋವೃತ್ತಿಯವರು ಶಾಸ್ತ್ರಿಗಳು. ಗಾಂಧಿಯಿಂದಾಗಿ ಸಮಾಜದಲ್ಲಾಗುತ್ತಿರುವ ಮಾರ್ಪಾಡುಗಳನ್ನು ಸಹಿಸದಿರುವ ಶಾಸ್ತ್ರಿಗಳ ತಲೆಗೆ ಗಾಂಧಿ ಟೋಪಿ ಏರುತ್ತದೆ ಕಾದಂಬರಿಯ ಕೊನೆಯಲ್ಲಿ. ಇಂಗ್ಲಿಷ್ ಶಿಕ್ಷಣ, ಸ್ವಾತಂತ್ರ್ಯ ಚಳವಳಿ ಇವುಗಳ ಪ್ರಭಾವದಿಂದ ಕುಗ್ರಾಮವೊಂದರ ಜೀವನದಲ್ಲಿ ನಿಧಾನವಾಗಿ ಸಂಭವಿಸುವ ಪರಿವರ್ತನೆಗಳನ್ನು ಕಾದಂಬರಿಕಾರರು ಎಳೆ ಎಳೆಯಾಗಿ ಬಿಡಿಸುವುದರಲ್ಲಿ ಸಫಲರಾಗಿದ್ದಾರೆ. ಕಾದಂಬರಿಯ ನಾಯಕಿ ಸಾವಿತ್ರಿ ಅತ್ಯಂತ ಸಂಯಮದ ವ್ಯಕ್ತಿ. ಶಾಸ್ತ್ರಿಗಳ ಮೂರನೆಯ ಮಗ ವಿದ್ಯಾಧರನ ಕೈ ಹಿಡಿದು ಶಾಸ್ತ್ರಿಗಳ ಮನೆ ಸೇರುವುದರೊಂದಿಗೆ ಕಾದಂಬರಿಯ ಕಥೆ ಪ್ರಾರಂಭವಾಗುತ್ತದೆ. ಪ್ರತ್ಯಕ್ಷವಾಗಿ ಸಾವಿತ್ರಿ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳದಿದ್ದರೂ ಆಕೆಯ ನಡೆನುಡಿಗಳೇ ಸುತ್ತಲಿನ ಬದಲಾವಣೆಗಳಿಗೆ ಪ್ರೇರಕ. ಕೊರಗರ ಕೆಂಚನಿಗೆ ಗಾಂಧಿ ಟೋಪಿ ನೀಡಿಕೆ, ಕೆಂಚ ಶಾಲೆಗೆ ಸೇರಿದ್ದು, ವಿದ್ಯಾಧರ ಅವನಿಗೆ ಪ್ರತ್ಯೇಕವಾಗಿ ಪಾಠ ಹೇಳಿದ್ದು, ಸಾವಿತ್ರಿಯ ವಾಸದ ಕೋಣೆಯ ಪೆಟ್ಟಿಗೆಯ ಮೇಲೆ ಇರಿಸಿದ್ದ ಗಾಂಧಿ ಭಾವಚಿತ್ರ, ಶಾಸ್ತ್ರಿಗಳ ತಮ್ಮನ ಮಗಳಾದ ಶಾಂಭವಿಯ ವೈಧವ್ಯ, ಪುನರ್ವಿವಾಹ, ವಿದ್ಯಾಧರನಲ್ಲಾದ ಮಾರ್ಪಾಡು ಇವೆಲ್ಲ ಬರುತ್ತಿದ್ದ ಬದಲಾವಣೆಗಳಿಗೆ ಸೂಚಕ. ಪ್ರತಿಯೊಂದು ಘಟನೆಯನ್ನೂ ಕಾದಂಬರಿಕಾರರು ಅತ್ಯಂತ ಸಹಜವಾಗಿ ನಿರೂಪಿಸಿದ್ದಾರೆ. ಶಾಸ್ತ್ರಿಗಳ ವೈದಿಕ ವೃತ್ತಿಯನ್ನು, ಸಂಸ್ಕೃತ ಜ್ಞಾನವನ್ನು ಅವರ ನಾಲ್ವರು ಮಕ್ಕಳಲ್ಲಿ ಯಾರೂ ರೂಢಿಸಿಕೊಂಡು ಮುಂದುವರಿಸಲಿಲ್ಲ. ಹಿರಿಯವ ಗಂಗಾಧರ ಹೋಟೆಲು ಸ್ಥಾಪಿಸಿದರೆ, ಎರಡನೆಯ ಶಶಿಧರ ವಂಶಪಾರಂಪರ್ಯವಾಗಿ ಬಂದಿದ್ದ ದೇವಸ್ಥಾನದ ಉಸ್ತುವಾರಿ ನೋಡಿಕೊಂಡರೂ ಹಿಡಿದದ್ದು ಅಡ್ಡದಾರಿ, ಇನ್ನು ಇಂಗ್ಲಿಷ್ ಶಿಕ್ಷಣ ಪಡೆದ ಮೂರನೆಯವ ವಿದ್ಯಾಧರ ಶಾಲಾ ಶಿಕ್ಷಕನಾಗಿ ವೃತ್ತಿ ಕೈಗೊಂಡು ವಿಚಾರವಾದಿಯಾಗಿ ಬೆಳೆದರೂ ಗೊಂದಲಮಯದ ವ್ಯಕ್ತಿ, ನಾಲ್ಕನೆಯವ ಇಂಗ್ಲಿಷ್ ಶಿಕ್ಷಣದಲ್ಲಿ ತೊಡಗಿರುವ ಬಾಲಕ. ಈ ಕುಟುಂಬದಲ್ಲಿ ಸಂಭವಿಸುವ ಘಟನೆಗಳೇ ಬದಲಾವಣೆಗಳಿಗೆ ಮೂಲವೆನಿಸುತ್ತದೆ.

ಶಾಸ್ತ್ರಿಗಳ ತಮ್ಮನ ಮಗಳು ಶಾಂಭವಿ. ಬಾಲವಿಧವೆ. ಕೇಶ ಮುಂಡನವಿಲ್ಲದೆ ಉಳಿದದ್ದೆ ಶಾಸ್ತ್ರಿಗಳ ಕುಟುಂಬದಲ್ಲಿ ದೊಡ್ಡ ಅಲ್ಲೋಲಕಲ್ಲೋಲ. ಅನಂತರ ಆಕೆಯ ಹಿಂದಿ ವಿದ್ಯಾಭ್ಯಾಸ, ಅಧ್ಯಾಪಕ ವೃತ್ತಿ, ಪುನರ್ವಿವಾಹ ಎಲ್ಲ ಕ್ರಾಂತಿಕಾರಕ ಘಟನೆಗಳು. ಸಂಪ್ರದಾಯಸ್ಥರ ಆಕ್ರೋಶವನ್ನು ಕಾದಂಬರಿಕಾರರು ಶಾಸ್ತ್ರಿಗಳ ಹಿರಿಯ ಮಗ ಗಂಗಾಧರನ ಆರ್ಭಟದ ಈ ಮಾತುಗಳಲ್ಲಿ ತೋರಿಸುತ್ತಾರೆ: ''ಹೊ, ಹೊ, ಹೊ, ನಮ್ಮ ಗಾಂಧಿ ಹುಡುಗಿ ಪ್ರತಾಪ ಇಲ್ಲಿಯತನಕ ಬಂತೇ........ನಿಮ್ಮ ಮುದ್ದಿನ ಸೊಸೆಯಿಂದ ಏನೆಲ್ಲ ಕಿತಾಪತಿ ಆಗ್ತಾ ಇದೇಂತ ನೋಡಿ. ಶಾಂಭವಿ ತಲೆಬೋಳಿಸಬಾರದೂಂತ ಹೇಳಿದ್ದೂ ಅವಳೆ, ಹಿಂದಿ ಕಲಿಯಲೀಂತ ಹೇಳಿದ್ದೂ ಅವಳೇ, ಈ ಗಾಂಧಿ, ಕಾಂಗ್ರೆಸ್, ಹಿಂದಿ ಎಲ್ಲ ಒಂದೇ- ನಮ್ಮ ದೇಶವನ್ನು ಹಾಳು ಮಾಡಲಿಕ್ಕೆ ಬಂದ ಅನಿಷ್ಟಗಳು. ಮದುವೆಯಾಯಿತೆ ? ನಾರಾಯಣ ಚಿಕ್ಕಪ್ಪ ಘಟಶ್ರಾದ್ಧ ಮಾಡುತ್ತಾರೆಯೆ ? ಮತ್ತೇನು ಮಾಡಿಯಾರು.......''

ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮದಲ್ಲಿ ಹಿಂದಿನಿಂದ ನಡೆದು ಕೊಂಡು ಬಂದಿದ್ದ ರೀತಿರಿವಾಜುಗಳು, ಸಂಪ್ರದಾಯಗಳು, ಪೂರ್ವಾಗ್ರಹಗಳು, ಕಟ್ಟುನಿಟ್ಟಾಗಿ ಅನುಸರಿಸುತ್ತಿದ್ದ ಜಾತಿ ಪದ್ಧತಿ, ಇವೆಲ್ಲವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿರುವ ಬಲ್ಲಾಳರು ಒಂದು ಜೀವಿತ ಕಾಲದಲ್ಲಿ ಸಂಭವಿಸಿದ ಬದಲಾವಣೆಗಳನ್ನು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ.

ಕಾದಂಬರಿಯ ಉತ್ತರಾರ್ಧ ಭಾಗ ಮುಂಬಯಿಯ ಜನಜಂಗುಳಿಗೆ ವರ್ಗಾವಣೆಯಾಗುತ್ತದೆ. ಬಲ್ಲಾಳರಿಗೆ ಪರಿಚಿತವಾದ ಪ್ರಿಯವಾದ ಕ್ಷೇತ್ರ ಇದು. ಇಲ್ಲಿಯ ಕೇಂದ್ರವ್ಯಕ್ತಿ ವಿದ್ಯಾಧರ. ಊರಿನಲ್ಲಿದ್ದಾಗಲೆ ಕಾರ್ಮಿಕ ಚಳವಳಿಯ ಪರಿಚಯ ಪಡೆದಿದ್ದ ವಿದ್ಯಾಧರ ಎಲ್ಲ ಪ್ರಗತಿ ವಿಚಾರಗಳಿಗೆ ಮಾರುಹೋಗಿ ಮಾರ್ಕ್ಸವಾದವನ್ನು ಅಧ್ಯಯನ ಮಾಡಿ, ಕಮ್ಯುನಿಸ್ಟರ ಸಂಪರ್ಕ ಬೆಳಸಿದರೂ ಗೊಂದಲಮಯ ವ್ಯಕ್ತಿ. ತಾನು ಯಾವ ಹಾದಿ ತುಳಿಯಬೇಕೆಂಬುದನ್ನು ನಿರ್ಧರಿಸಲಾಗದಂಥ ಈ ವ್ಯಕ್ತಿ ಕ್ವಿಟ್ ಇಂಡಿಯಾ ಚಳವಳಿಯ ಸಂದರ್ಭದಲ್ಲಿ ಸಾವಿಗೀಡಾದ್ದು ಅನಿರೀಕ್ಷಿತ, ನಿಗೂಢ ಹಾಗೂ ಕೃತಕ ಎನಿಸುತ್ತದೆ. ವಿದ್ಯಾಧರನನ್ನು ಅಪ್ರಬುದ್ಧ 'ಪ್ರತಿನಾಯಕ' ನನ್ನಾಗಿ ಬಲ್ಲಾಳರು ಚಿತ್ರಿಸಿದ್ದಾರೆಯೇ ಎಂಬ ಅನುಮಾನ ಬರುತ್ತದೆ. ಮುಂಬಯಿಯ ವಾಮಪಂಥೀಯ ವಕೀಲರೊಬ್ಬರ ಕಚೇರಿಯಲ್ಲಿ ದುಡಿಯತೊಡಗಿದಾಗ ವಿದ್ಯಾಧರನಿಗೆ ದೊರೆತ ರಫಿ ಒಳ್ಳೆಯ ಮಿತ್ರ. ಆತ ಸಿಡುಕನಾದರೂ ಸಮಾಜ ಸೇವೆಯ ಆದರ್ಶ ಹೊಂದಿರುವವ. ಸ್ವಾತಂತ್ರ್ಯ ಹೋರಾಟಗಾರರ ಕುಟುಂಬಕ್ಕೆ ಸೇರಿದವ. ಭಾರತದ ವಿಭಜನೆ ಹೇಗೆ ಕುಟುಂಬ ಜೀವನವನ್ನು ಬಾಧಿಸಿತು ಎಂಬುದಕ್ಕೆ ರಫಿಯ ಕುಟುಂಬ ಒಂದು ನಿದರ್ಶನ. ರಫಿಯ ತಂಗಿ ಪಾಕಿಸ್ತಾನಕ್ಕೆ ಹೋಗಲು ನಿರ್ಧಾರ ಮಾಡಿದ್ದು ಅದನ್ನು ಸೂಚಿಸುತ್ತದೆ. ಕಾದಂಬರಿ ಗಾಂಧೀಜಿಯವರ ಉಪ್ಪಿನ ಸತ್ಯಾಗ್ರಹದಿಂದ ಪ್ರಾರಂಭವಾಗಿ ಎರಡನೆಯ ಮಹಾಯುದ್ಧ, ಕ್ವಿಟ್ ಇಂಡಿಯಾ ಚಳುವಳಿಗಳನ್ನು ಹಾಯ್ದು ಸ್ವಾತಂತ್ರ್ಯ ಗಳಿಕೆಯವರೆಗಿನ ಪ್ರಮುಖ ರಾಜಕೀಯ ವಿದ್ಯಮಾನಗಳನ್ನು ಆವರಿಸಿಕೊಂಡಿದೆ.

ಬಲ್ಲಾಳರ ಇತರ ಎಲ್ಲ ಕಾದಂಬರಿಗಳಂತೆಯೇ ಇದರಲ್ಲಿಯೂ ಸ್ತ್ರೀ ಪಾತ್ರಕ್ಕೆ ಆದ್ಯತೆ. ದಿಟ್ಟತನದಿಂದ ಎಲ್ಲ ಸನ್ನಿವೇಶಗಳನ್ನು ನಿಭಾಯಿಸುವ ಹೆಣ್ಣು ಸಾವಿತ್ರಿ ಅತ್ಯಂತ ಪ್ರೌಢೆಯಾಗಿ ಮೂಡಿಬಂದಿದ್ದಾಳೆ. ಬಲ್ಲಾಳರು ಮುಂಬಯಿಯಿಂದ ಬೆಂಗಳೂರಿಗೆ ಬಂದು ನೆಲೆಸಿದ ಮೇಲೆ ಬರೆದ ಕಾದಂಬರಿ ಇದು. ಮೂರು ಭಾಗಗಳಲ್ಲಿ ಬೃಹತ್ ಕಾದಂಬರಿ ರಚಿಸಿ, ಸ್ವಾತಂತ್ರ್ಯ ಹೋರಾಟದ ಕಾಲದಿಂದ ಇಂದಿನವರೆಗಿನ ಬೆಳವಣಿಗೆಗಳನ್ನು ಅವಲೋಕಿಸುವುದು ಅವರ ಅಪೇಕ್ಷೆ. ಇದನ್ನು ಅವರೇ ಹಿಂದೆ ಹೇಳಿಕೊಂಡಿದ್ದರು. ಹಾಗಾಗಿ ಹೆಜ್ಜೆ ಅದರ ಮೊದಲ ಭಾಗ ಎನ್ನಬಹುದು. ಅವರೂ ಈ ಕಾದಂಬರಿ ಸ್ವಾತಂತ್ರ್ಯಪೂರ್ವ. ಸ್ವಾತಂತ್ರ್ಯಾನಂತರದ ಕಾಲ ಬಿಂಬಿಸುವ ಉಳಿದೆರಡು ಕಾದಂಬರಿಗಳು ಶೀಘ್ರವೇ ಅವರ ಲೇಖನಿಯಿಂದ ಹರಿದು ಬರಲಿ ಎಂದು ಹಾರೈಸೋಣ.

# ಕಂಪ್ಯೂಟರ್ ಮತ್ತು ಡಿಎನ್‌ಎ ಒಂದು ತುಲನಾತ್ಮಕ ವಿಶ್ಲೇಷಣೆ

ಡಾ|| ಎಂ. ಎಸ್. ಕೇಶವರಾವ್

ಇಪ್ಪತ್ತನೆಯ ಶತಮಾನದ ಎರಡನೆಯ ಅರ್ಧದಲ್ಲಿ ಸಂಪನ್ನಗೊಂಡ ವೈಜ್ಞಾನಿಕ ಮತ್ತು ಇಂಜಿನಿಯರಿಂಗ್ ಶೋಧನೆಗಳ ಒಟ್ಟು ಸಂಖ್ಯೆ ಮೊದಲ ಅರ್ಧದಲ್ಲಿ ಮುಗಿದ ಶೋಧನೆಗಳ ಸಂಖ್ಯೆಯ ನೂರುಪಟ್ಟಿಗೂ ಹೆಚ್ಚಾಗಿತ್ತು. ಇಂಥವುಗಳ ಪೈಕಿ ಎದ್ದುನಿಲ್ಲುವ ಕೆಲವೇ ಶಿಖರಗಳಲ್ಲಿ ಅತಿ ಹೆಚ್ಚಿನ ಮಟ್ಟದ ಶೋಧನೆಗಳು ಎರಡು: ಒಂದು ಕಂಪ್ಯೂಟರ್, ಮತ್ತೊಂದು ಡಿಎನ್‌ಎ. ಇವೆರಡೂ ಒಂದೇ ಕಾಲದಲ್ಲಿ ಬೆಳೆದ, ಇನ್ನೂ ಬೆಳೆಯುತ್ತಿರುವ, ಸಾರ್ವಜನಿಕರ ಮೇಲೂ ಅತ್ಯಂತ ಪರಿಣಾಮಕಾರಿಯಾದ ಶೋಧನೆಗಳು. ಹತ್ತೊಂಬತ್ತನೆಯ ಶತಮಾನದಲ್ಲಾದ ಔದ್ಯೋಗಿಕ ಕ್ರಾಂತಿ ಹೇಗೆ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಆಂದೋಲನಗಳನ್ನು ತಂದಿತೊ, ಹಾಗೆಯೇ ಅಂತಹುದೆ ಎರಡನೆಯ ಮತ್ತು ಮೂರನೆಯ ಕ್ರಾಂತಿಗಳನ್ನು ಕಂಪ್ಯೂಟರ್, ಇನ್‌ಫರ್ಮೇಶನ್ ಟೆಕ್ನಾಲಜಿ (ಮಾಹಿತಿ ತಂತ್ರಜ್ಞಾನ)ಯ ಮೂಲಕವಾಗಿಯೂ ಡಿಎನ್‌ಎಯ ಜೆನೆಟಿಕ್ ಇಂಜಿನಿಯರಿಂಗ್ (ಜೈವಿಕ ತಾಂತ್ರಿಕತೆ)ನ ಮೂಲಕವಾಗಿಯೂ ತರುತ್ತಲಿವೆ. ಮಾಹಿತಿ ತಂತ್ರಜ್ಞಾನದ ಪ್ರಭಾವ ಈಗಾಗಲೇ ಜನಸಾಮಾನ್ಯರ ಮೇಲೆಯೂ ಆಗಿದ್ದರೂ, ಜೆನೆಟಿಕ್ ಇಂಜಿನಿಯರಿಂಗ್ ಇದಕ್ಕೂ ಹೆಚ್ಚಾದ ಪ್ರಭಾವ ಬೀರುವ ನಿರೀಕ್ಷೆಯಿದೆ. ಇವುಗಳು ಮಿತಿಯಿಲ್ಲದೆ ಬೆಳೆದು ಮಾನವ ಕುಲದ ವಿನಾಶಕ್ಕೂ ಕಾರಣಗಳಾಗ ಬಹುದೇನೊ ಎನ್ನುವ ಆತಂಕಗಳೂ ಹರಡುತ್ತಿವೆ. ಇಂತಹ ಬೃಹಚ್ಛಕ್ತಿಗಳ ಅಧ್ಯಯನಕ್ಕೆ, ಇವೆರೆಡರ ತುಲನಾತ್ಮಕ ವಿಶ್ಲೇಷಣೆಯೂ ಒಂದು ಸಾಧನೆ ಯಾಗಬಲ್ಲದು.

ಮೊದಲಿಗೆ, ಕಂಪ್ಯೂಟರ್ ಮತ್ತು ಡಿಎನ್‌ಎಗಳಲ್ಲಿ ಸಾಮ್ಯಗಳಿಗಿಂತ ವ್ಯತ್ಯಾಸಗಳೇ ಎದ್ದುಕಾಣುತ್ತವೆ. ಕಂಪ್ಯೂಟರ್ ಸಂಪೂರ್ಣವಾಗಿ ಮಾನವನ ಸೃಷ್ಟಿ. ಆದರೆ, ಮಾನವನೆ ಡಿಎನ್‌ಎಯ ಸೃಷ್ಟಿ. ಕಂಪ್ಯೂಟರ್ ಈ ಶತಮಾನದ ನವೋದಿತ ತಾರೆಯಾದರೆ, ಡಿಎನ್‌ಎ ಸುಮಾರು ೩೦೦ ಕೋಟಿ ವರ್ಷಗಳಿಗೂ ಹಳೆಯದು; ಅದರ ಇರವಿನ ಅರಿವಷ್ಟೆ ಈ ಶತಮಾನದ್ದು. ಕಂಪ್ಯೂಟರ್ ಜೀವಿಯನ್ನು ಅಣಕಿಸುವ ನಿರ್ಜೀವ ಯಂತ್ರವಾದರೆ, ಡಿಎನ್‌ಎ ಸಮಸ್ತ ಜೀವಿಗಳ ಮೂಲಸ್ವರೂಪ. ಇಂತಹ ಹೊಂದಿಕೆಯಿಲ್ಲದ ಎರಡು ವಸ್ತುಗಳ ತುಲನೆಗೆ ಅರ್ಥ ಬರುವುದು, ಇವುಗಳ ಹರಿತವಾದ ಒಳತರ್ಕ ಮತ್ತು ಗಹನವಾದ ಸಂರಚನೆಗಳ ಅಧ್ಯಯನ ಮಾಡಿದಾಗ ಮಾತ್ರ.

**ಕಂಪ್ಯೂಟರ್‌ನ ಗುಣಾತಿಶಯಗಳು**

ಕಂಪ್ಯೂಟರ್ ಮನುಷ್ಯನ ಸೇವಕನಾದರೂ, ಒಂದು ಸ್ವತಂತ್ರ ಸ್ವಯಂ ನಿರ್ದಿಷ್ಟ, ಆತ್ಮನಿರ್ವಹಿತ ಸಂಘಟಕ; ಎಲ್ಲ ಪೂರಕಾಂಗಗಳ ಒಕ್ಕೂಟ. ಸ್ವಂತಕ್ಕಾಗಿ ಕೇವಲ ವಿದ್ಯುಚ್ಛಕ್ತಿಯನ್ನು ಬಳಸಿಕೊಂಡು, ಕಲಿಸಿದ್ದನ್ನೆಲ್ಲ ಕಲಿತು ಕೊಂಡು ಕಲಿತಾದ ಮೇಲೆ ಕೇಳಿದ ಪ್ರಶ್ನೆಗಳಿಗೆಲ್ಲ, ಒಡ್ಡಿದ ಸಮಸ್ಯೆಗಳಿಗೆಲ್ಲ ತನ್ನ ಜ್ಞಾನದ ಮಿತಿಯಲ್ಲಿ ಉತ್ತರ ಕೊಡಬಲ್ಲ, ಹೇಳಿದ ಕೆಲಸಗಳನ್ನು (ಹೇಳಿಕೊಟ್ಟಿರುವ ಹಾಗೆ) ಮಾಡಿಕೊಡಬಲ್ಲ, ಒಂದು ಯಂತ್ರ ಕಂಪ್ಯೂಟರ್. ಡಿಎನ್‌ಎಯಲ್ಲಿಯೂ ಇಂತಹ ಆತ್ಮ ನಿರ್ವಾಹಕ ಗುಣಗಳಿವೆಯೆ? ಅದೂ ಒಂದು ಸ್ವತಂತ್ರ ಸಂಘಟಕವೇ?

ಕಂಪ್ಯೂಟರ್‌ನ ಶಕ್ತಿ ಸಾಮರ್ಥ್ಯಗಳನ್ನು ಈ ಕೆಲವು ಘಟ್ಟಗಳಲ್ಲಿ ಗುರುತಿಸಬಹುದು :

೧. ೧೯೫೦ರ ದಶಕದ 'ಮಹಾಗಣಕ ಯಂತ್ರ ಯುಗ'- ಸಂಖ್ಯಾಕ್ರಿಯೆಗಳನ್ನು ನಿಮಿಷಕ್ಕೆ ಸಾವಿರ ಗಟ್ಟಲೆಯಾಗಿ ಮುಗಿಸಿ, ಗಣಿತ, ಸ್ಟಾಟಿಸ್ಟಿಕ್ಸ್‌ಗಳಲ್ಲಿ ಅಪೂರ್ವ ಸಾಧನೆಗಳನ್ನು ಮಾಡಿತು.

೨. ೧೯೬೦ರ ದಶಕದ 'ಪ್ರೋಗ್ರಾಂ ಮತ್ತು ಸಿಸ್ಟಂಗಳ ಯುಗ'- ಒಬ್ಬ ಸಾಮಾನ್ಯ ಬಳಕೆದಾರನೂ ತನ್ನ ಅಲ್ಪ ಶ್ರಮದಿಂದಲೆ, ತನ್ನ ಬೌದ್ಧಿಕ (ಸಂಖ್ಯಾ, ತರ್ಕ, ಅಕ್ಷರ ಯೋಗಗಳನ್ನೊಳಗೊಂಡ) ಕಾರ್ಯಭಾರವನ್ನು ಕಂಪ್ಯೂಟರ್‌ಗೆ ವಹಿಸಿಕೊಡಲು ಅನುಕೂಲವಾಗುವಂತೆ, ಕಂಪ್ಯೂಟರ್-ಮನುಷ್ಯ ಸಂವಾದ ಭಾಷೆಗಳು ಬೆಳೆದು ಕಡೆಗೆ ಸರ್ವಹಿತಕ್ಕಾಗಿ ಏಕೀಕೃತವಾದವು. ವಿಜ್ಞಾನ, ಇಂಜಿನಿಯರಿಂಗ್, ವಾಣಿಜ್ಯ ವ್ಯವಹಾರ, ಲೇಖನ ಸಂಕಲನ ಮುಂತಾದವುಗಳಿಗೂ ಬಳಕೆ ಹರಡಿತು.

೩. ೧೯೭೦-೭೫ರ 'ಸಾಫ್ಟ್‌ವೇರ್ ಯುಗ (ಸಮಸ್ಯೆಗಳ ಪೂರ್ಣ ಪರಿಹಾರಗಳ ಚಲಾವಣೆಯ ಯುಗ)' - ವಿಜ್ಞಾನ, ಇಂಜಿನಿಯರಿಂಗ್, ವಾಣಿಜ್ಯಗಳ ದೊಡ್ಡ ಸಮಸ್ಯೆಗಳಿಗೆ ಪರಿಹಾರವಾಗಿ, ರೇಖೆ ಚಿತ್ರ ವರ್ಣಗಳನ್ನು ಒಳಗೊಂಡ, ಕಂಪ್ಯೂಟರ್ ರಚಿತ ಪೂರ್ಣೋತ್ತರಗಳನ್ನು ನೀಡಬಲ್ಲ ಸರ್ವೋಪಯೋಗಿ ಪ್ರೋಗ್ರಾಂಗಳ ಉತ್ಪಾದನೆ ಮತ್ತು ಮಾರಾಟ ಪ್ರಾರಂಭವಾದವು. ಮಾಹಿತಿ ಸಂಗ್ರಹಣೆ, ವಿಶ್ಲೇಷಣೆಗಳ ಮೂಲಕ ಹೊಸ ಉಪಯೋಗಿ ತಿಳುವಳಿಕೆಯನ್ನು ತಯಾರಿಸುವ 'ಯಾಂತ್ರಿಕ ಬುದ್ಧಿ ವಿಧಾನ' ಮತ್ತು 'ಸಂಗ್ರಹಿತ ಪಾಂಡಿತ್ಯ ಮಂತ್ರಣ' ಮುಂತಾದ ಹೊಸ ಪರಿಹಾರ ಮಾರ್ಗಗಳು ಹುಟ್ಟಿಕೊಂಡವು.

೪. ೧೯೭೫ರ ದಶಕದ 'ಆ್ಯನಿಮೇಷನ್, ರೊಬೊಟಿಕ್ಸ್ ಮತ್ತು ರಿಯಲ್ ಟೈಮ್ ಕಂಪ್ಯೂಟರ್‌ಗಳ ಯುಗ'- ಕಂಪ್ಯೂಟರ್ ರಚಯಿತ ಚಲನಚಿತ್ರಗಳು; ಕಂಪ್ಯೂಟರ್ ಗರ್ಭಿತ ವಾಹಕ ಯಂತ್ರಗಳು; ಮಾನವ ಸದೃಶ, ಕಾರ್ಯಶೀಲ ಕೀಲುಗೊಂಬೆ ರೋಬಾಟ್‌ಗಳು; ಕಂಪ್ಯೂಟರ್‌ಚಾಲಿತ ಮತ್ತು ನಿಯಮಿತ ಯಂತ್ರರಚನೆ; ರಾಸಾಯನಿಕ ಮತ್ತು ವಿದ್ಯುತ್ ಮುಂತಾದ ಉದ್ದಿಮೆಗಳ ಕಂಪ್ಯೂಟರಾತ್ಮಕ ಕಾರ್ಯಾಚರಣೆ; ಇತ್ಯಾದಿ.

೫. ೧೯೮೫-೯೦ರ 'ಪೀಸಿ ಯುಗ (ವ್ಯಕ್ತಿಗತ ಕಂಪ್ಯೂಟರ್ ಯುಗ)' - ಕಂಪ್ಯೂಟರ್‌ನ ಸಂರಚನೆ, ಕಾರ್ಯ ನಿರ್ದೇಶನ, ಭಾಷೆ, ನೀತಿ ಇವುಗಳ ಸಮೀಕರಣಗಳ ಫಲವಾಗಿ, ಕಂಪ್ಯೂಟರ್ ಉದ್ಯಮ ವಿಶ್ವವ್ಯಾಪಿಯಾಗಿ, ಬೆಲೆಗಳು ಕುಸಿದವು. 'ವ್ಯಕ್ತಿಗೊಂದು ಕಂಪ್ಯೂಟರ್' ನೀತಿ ಸಾಧ್ಯವಾಯಿತು. ಕಂಪ್ಯೂಟರ್‌ನ ಮುಖ್ಯ ಶಕ್ತಿ ಸಾಮರ್ಥ್ಯಗಳು ಕ್ರಿಯಾವೇಗ, ಸ್ಮೃತಿ ಭಂಡಾರ ಮತ್ತು ಸ್ಮರಣ ಫಲಕಗಳ ಅಳವು, ವಿತರಣಗತಿ ಮತ್ತು ಕ್ರೋಡೀಕರಣ ಶಕ್ತಿ ಇವುಗಳ ಬಹುವೃದ್ಧಿ; ಎಲೆಕ್ಟ್ರಾನಿಕ್ ಸಂಚಾಲಗಳ ಅತಿ ಸೂಕ್ಷ್ಮೀಕರಣ ಇವು ದಶಕಕ್ಕೆ ಸರಾಸರಿ ನೂರುಪಟ್ಟು ವೃದ್ಧಿಯಾಗಿ ಬೆಲೆಯುಬ್ಬರವನ್ನು ಅಡಗಿಸಿದವು. ಸಾರ್ವಜನಿಕರ ನಿತ್ಯಜೀವನ ಶೈಲಿಯೂ ಉತ್ತಮಗೊಳ್ಳತೊಡಗಿತು.

೬. ೧೯೯೦-೨೦೦೦ದ ದಶಕದ 'ದೂರ ಸಂಚಾರ ಯುಗ' ಮತ್ತು 'ವಿಶ್ವದ ಏಕೀಕರಣ ಯುಗ' - ದೂರವಾಣಿ, ದೂರದರ್ಶನಗಳ ಕಾರ್ಯಗಳಲ್ಲಿ ಮಹಾಪ್ರಗತಿಗೆ ಸಾಧನವಾಗಿ ಕಂಪ್ಯೂಟರ್ ತನ್ನ ಪ್ರತಿಷ್ಠೆಯನ್ನು ಬೆಳೆಸಿತು. ಇಂಟರ್‌ನೆಟ್ ನಂತಹ ಮಾಹಿತಿಯ ಮಹಾಜಾಲಗಳ ವಿನಿಮಯ ಕೇಂದ್ರಗಳು ಸಂಪರ್ಕ ಬಿಂದುಗಳಾಗಿ ವಿಶ್ವದಲ್ಲೆಲ್ಲ ಹರಡಿತು. ಚಿಕ್ಕದಾದ, ಹಗುರವಾದ ಆದರೂ ಶಕ್ತಿಯುತವಾದ ವಹನಯೋಗ್ಯ ಕಂಪ್ಯೂಟರ್‌ಗಳ ಉತ್ಪಾದನೆಯೂ ಹೆಚ್ಚಿತು.

ಡಿಎನ್‌ಎಯೊಡನೆ ತೂಗಿ ನೋಡುವುದಕ್ಕಾಗಿ ಕಂಪ್ಯೂಟರ್‌ನ ಈಗಿನ ಚಮತ್ಕಾರಗಳ ಪಟ್ಟಿ ಮಾಡಿಕೊಳ್ಳೋಣ :

ಕಾರ್ಯಗಳ ವೈವಿಧ್ಯತೆ ಮತ್ತು ವಿಸ್ತಾರ; ಕಾರ್ಯದಲ್ಲಿ ನಿಖರತೆ; ಕಾರ್ಯಗತಿಯ ಅತಿಶೀಘ್ರತೆ; ಸಂರಚನಾ ವಿನ್ಯಾಸದಲ್ಲಿ ಅಸಾಧಾರಣ ಸರಳತೆ; ಸಂರಚನೆಯಲ್ಲಿ ಅತಿ ಸೂಕ್ಷ್ಮತೆ; ಪಾಂಡಿತ್ಯ ಮತ್ತು ಪ್ರಾವೀಣ್ಯ; ಕಾರ್ಯದಕ್ಷತೆ ಮತ್ತು ವಿಶ್ವ ವ್ಯಾಪಕತ್ವ.

**ಡಿಎನ್‌ಎಯ ಪರಿಚಯ ಮತ್ತು ತುಲನೆ**

ಡಿಎನ್‌ಎ ಕಂಪ್ಯೂಟರ್‌ನ ಹಾಗೆ ಚಿರಪರಿಚಿತವಲ್ಲ. ಸಮಸ್ತ ಜೀವಿಗಳಲ್ಲೂ ಪ್ರತಿಯೊಂದರ ದೇಹವು, ಅಳತೆಗನುಗುಣವಾಗಿ ಒಂದು, ಕೆಲವು ಅಥವಾ ಸಹಸ್ರಾರು ಸಮತರಹೆಯ ಜೀವಕೋಶಗಳಿಂದ ಸಂಘಟಿತ ವಾಗಿರುತ್ತದೆ. ಇಂತಹ ಪ್ರತಿಯೊಂದು ಜೀವಕೋಶದ ಕೇಂದ್ರ ಭಾಗ ನ್ಯೂಕ್ಲಿಯಸ್. ಈ ನ್ಯೂಕ್ಲಿಯಸ್‌ನಲ್ಲಿ ಹುದುಗಿರುವ ಅತಿ ವಿಶಿಷ್ಟ ಅಣುವಿನ ಮೂಲದ್ರವ್ಯವಾದ ರಾಸಾಯನಿಕದ ಹೆಸರು ಡಿ-ಆಕ್ಸಿ-ರಿಬೊ-ನ್ಯೂಕ್ಲಿಯಿಕ್ ಆ್ಯಸಿಡ್ ಅಥವಾ ಕ್ಲುಪ್ತವಾಗಿ ಡಿಎನ್‌ಎ. ಇದು ಒಂದು ಅತಿ ದೀರ್ಘ ಬಳ್ಳಿಯಂತಿರುವ ಅಣು. ಈ ದೀರ್ಘಾಣು ವಿನಲ್ಲಿರುವ ಅಸಂಖ್ಯ ಪರಮಾಣುಗಳು ಕೆಲವೇ ಕೆಲವು: ಕಾರ್ಬನ್ (ಬಹು ಮುಖ್ಯವಾಗಿ), ಆಕ್ಸಿಜನ್,

ಹೈಡ್ರೋಜನ್, ಫಾಸ್ಫರಸ್ ಮತ್ತು ನೈಟ್ರೋಜನ್. ಈ ಬಳ್ಳಿಯುದ್ದಕ್ಕೂ ಎರಡು ಎಳೆಗಳು ಒಂದನ್ನೊಂದು ಸುತ್ತಿಕೊಂಡಿವೆ, ಹೊಸೆದ ಹಗ್ಗದಲ್ಲಿರುವಂತೆ (ಚಿತ್ರ ೧ನ್ನು ನೋಡಿ). ಪ್ರತಿ ಎಳೆಯೂ ಫಾಸ್ಫರಸ್ ಮುಂತಾದ ಪರಮಾಣುಗಳಿಂದ ಜೋಡಿಸಲ್ಪಟ್ಟಿದೆ. ಈ ಎರಡು ಎಳೆಗಳು ಸಮಸಮ ಅಂತರದಲ್ಲಿ ನೂಲಿನ ಏಣಿಯಲ್ಲಿರುವ ಮೆಟ್ಟುಗೋಲುಗಳಿಂದಾದಂತೆ ಸೇರಿಸಲ್ಪಟ್ಟಿವೆ. ಈ ಪ್ರತಿಯೊಂದು ಮೆಟ್ಟಲೂ, ಎರಡು ಮಣಿಗಳಂತಹ ಪರಮಾಣು ಗುಂಪುಗಳನ್ನು ಅಂಟಿಸಿರುವುದರಿಂದಾಗಿದೆ. ಡಿಎನ್‌ಎಯ ಮಹತ್ವವಿರುವುದೆಲ್ಲ ಈ ಮಣಿ ಜೋಡಿಗಳಲ್ಲಿ (ಚಿತ್ರ ೨ನ್ನು ನೋಡಿ). ಡಿಎನ್‌ಎ ದೀರ್ಘಾಣುವಿನಲ್ಲಿ ಕೋಟಿ ಕೋಟಿ ಮಣಿಗಳಿದ್ದರೂ, ಅವೆಲ್ಲವೂ ನಾಲ್ಕೆ ನಮೂನೆಯವು; A (ಅಡೆನೈನ್), T (ಥಯಮೀನ್), G (ಗ್ವಾನೀನ್) ಮತ್ತು C (ಸೈಟೊಸಿನ್). ಇವು ನಾಲ್ಕು ಬೇರೆ ಬೇರೆ ರೀತಿಯ, ಕಾರ್ಬನ್ ಅಣುವಿನ ಸುತ್ತ ಮುತ್ತ ಸೇರಿಕೊಂಡ ಅಣುಗುಂಪುಗಳು. ಹಾಗೂ Aಯ ಜೊತೆ T ಮಾತ್ರ ಸೇರುತ್ತದೆ; Gಯ ಜೊತೆಗೆ C ಮಾತ್ರ ಸೇರುತ್ತದೆ. ಈ ಅಣು ಗುಂಪುಗಳನ್ನು ಅಕ್ಷರಗಳೆಂದೆ ಕರೆಯೋಣ. ಇವುಗಳ ಅಕ್ಷರ ಸಂಕೇತಗಳಷ್ಟೆ ಡಿಎನ್‌ಎಯನ್ನು ತಿಳಿಯುವುದಕ್ಕೆ ಸಾಕಾಗುತ್ತದೆ. ಈ ತಿರುಚಿದ ನೂಲೇಣಿಯನ್ನು ಬಿಚ್ಚಿ ಹರಡಿಕೊಂಡು, ಉದ್ದುದ್ದನಾಗಿ ಮಧ್ಯದಲ್ಲಿ ಸೀಳಿದರೆ, ಒಂದೆಳೆಯ ಅಕ್ಷರ ಸಾಲು ಇನ್ನೊಂದೆಳೆಯ ಅಕ್ಷರ ಸಾಲಿನ ನಕಲಲ್ಲದಿದ್ದರೂ ಅನುರೂಪವಾಗಿರುತ್ತದೆ. ಅರ್ಥೈಸುವುದಕ್ಕೆ ಒಂದು ಸಾಲೆ ಸಾಕು. ಈ ಎರಡು ಇತಿಪ್ರತಿ ಎಳೆಗಳು ಹೊಸೆದುಕೊಂಡಿರುವುದು ಬೇರೆಯೆ ಮಹತ್ಕಾರ್ಯಗಳಿಗೆ.

ಈ ನಾಲ್ಕು ಚಿಹ್ನೆಗಳು ನಿಜವಾಗಿಯೂ ಅಕ್ಷರ ಸದೃಶಗಳೆ. ಡಿಎನ್‌ಎ ತನ್ನದೆ ಸಾಂಕೇತಿಕ ಭಾಷೆಯಲ್ಲಿ ತನ್ನ ಸ್ವಂತ ಉಪಯೋಗಕ್ಕೆ ಬರೆದಿಟ್ಟುಕೊಂಡಿರುವ ಕಾರ್ಯ ಸೂಚಿಯ ಅರ್ಥಕೊಡುವ ಪದ, ವಾಕ್ಯ, ಅಧ್ಯಾಯಗಳ ಸಮುಚ್ಚಯವೆ ಈ ಅಕ್ಷರ ಸಾಲು. ಈ ಸಂದರ್ಭದಲ್ಲಿಯೆ, ನಾವು ಕಂಪ್ಯೂಟರ್‌ನಲ್ಲಿನ ಪ್ರೋಗ್ರಾಂ (ಕಾರ್ಯ ನಿರ್ದೇಶಕ ಸೂಚಿ) ಮತ್ತು ಡೇಟ (ಸಂಸ್ಕರಿಸುವುದಕ್ಕಿರುವ ಕಚ್ಚಾ ದತ್ತಾಂಶಗಳು) ಸಹ ಇದೇ ವಿನ್ಯಾಸದವೆಂದು ಗಮನಕ್ಕೆ ತಂದುಕೊಳ್ಳಬಹುದು. ಕಂಪ್ಯೂಟರ್‌ನ ಸಕಲ ಕಾರ್ಯಗಳು ಇಂತಹ ಕ್ರೋಡೀಕೃತ ೦,೧ ಎಂಬ ಎರಡು ಚಿಹ್ನೆಗಳ ಸಾಲಿನ ಮತ್ತು ವಿಂಗಡಗೊಂಡ ಪದಗಳ ಮೂಲಕವೆ ನಡೆಯುವುದೆನ್ನುವುದು ಎಲ್ಲರಿಗೂ ತಿಳಿದ ವಿಷಯ. ಡಿಎನ್‌ಎಯ ಸಂರಚನಾ ವಿನ್ಯಾಸ ಕಂಪ್ಯೂಟರಿನ ವಿನ್ಯಾಸದಷ್ಟೆ ಸರಳವಾದ್ದು.




*ಚಿತ್ರ ೨. ಡಿಎನ್‌ಎ ನೂಲೇಣಿಯಲ್ಲಿನ ನಾಲ್ಕು ಅಕ್ಷರ ಜೋಡಿಗಳು (ಚಿತ್ರಕ್ಕಾಗಿ ಸುರುಳಿ ಬಿಡಿಸಿ ಕಾಣಿಸಿದೆ)*




*ಚಿತ್ರ ೧. ನಿಜರೂಪದಲ್ಲಿ ಡಿಎನ್‌ಎ ತಿರುಚಿದ ನೂಲೇಣಿ*

### ವಿಶ್ವವ್ಯಾಪಕತ್ವ

ಅತ್ಯಂತ ಸೂಕ್ಷ್ಮಜೀವಿ ಅಮೀಬಾ, ಬ್ಯಾಕ್ಟೀರಿಯಗಳಿಂದ ಪ್ರಾರಂಭಿಸಿ, ಬೂಸ್ಟು, ಹುಲ್ಲು, ಗಿಡ ಮರಗಳನ್ನು ಹಾದು, ಹವಳ, ಮುತ್ತು, ಮೀನು ಮುಂತಾದ ಜಲಜೀವಿಗಳನ್ನು ನೀರಿನಲ್ಲಿ ಬಿಟ್ಟು, ಜಲ-ಭೂಚರ ಉಭಯಜೀವಿಗಳನ್ನು ಸರೀಸೃಪಗಳನ್ನು ದಾಟಿ, ಪಕ್ಷಿ ಜಾತಿಯನ್ನು ಹಾರಿ ಮುಂದರಿದು, ಕಡೆಗೆ ಸಸ್ತನಿಗಳ ಮಹಾಸಂಸಾರದ ಆಧುನಿಕ ರೂಪವಾದ ಮನುಷ್ಯನ (ಕೇವಲ ಒಂದು ಕೋಟಿ ವರ್ಷಗಳಷ್ಟೆ ಆಧುನಿಕ) ವರೆಗೂ, ಸಮಸ್ತ ಜೀವಿಗಳ ಎಲ್ಲ ಚೇತನ ಕ್ರಿಯೆಗಳನ್ನು ನಿರ್ದೇಶಿಸುತ್ತಿರುವ ಈ ಜೀವತಂತು ಡಿಎನ್‌ಎ, ತನ್ನ ಭಾಷೆಯನ್ನು ಅಕ್ಷರಶಃ ಅನನ್ಯವಾಗಿ, ೩೦೦ ಕೋಟಿ ವರುಷಗಳ ಕಾಲ ಉಳಿಸಿಕೊಂಡು ಬಂದಿದೆ. ಎಲ್ಲದರಲ್ಲಿಯೂ ಇವೇ ದೀರ್ಘಾಣುಗಳು, ಇವೇ ನಾಲ್ಕೆ ಅಕ್ಷರಗಳು, ಸಾಲಿನಲ್ಲಿ ಅಕ್ಷರ ಜೋಡಿಗಳನ್ನು ಪೋಣಿಸುವ ವಿಧಾನವೂ ಇದೇ. ಗಿಡ, ಪ್ರಾಣಿಗಳ ವಿವಿಧ ಆಕಾರ, ಕ್ರಿಯೆ, ಚೇಷ್ಟೆಗಳ ಅಪರಿಮಿತ ಅಗಾಧ ವ್ಯತ್ಯಾಸಗಳಿಗೆ ಸೂಚನೆಯಿರುವುದು ಮುಖ್ಯವಾಗಿ ಈ ಕೆಲವು ಭಿನ್ನಗುಣಗಳಲ್ಲಷ್ಟೆ: ಡಿಎನ್‌ಎಯ ಉದ್ದ, ಅಕ್ಷರ ಜೋಡಿಗಳ ಸಂಖ್ಯೆ, ಅವುಗಳನ್ನು ಪೋಣಿಸಿರುವ ಕ್ರಮ, ನಾಲ್ಕೆ ಅಕ್ಷರಗಳ ಅಕ್ಷರಮಾಲೆಯ ಭಾಷೆಯೊಂದರ ಬೇರೆ ಬೇರೆ ಪುಸ್ತಕಗಳಲ್ಲಿರುವಷ್ಟೆ. ಹೀಗಿದೆ ಡಿಎನ್‌ಎಯ ಅನೇಕತೆಯಲ್ಲಿನ ಏಕತೆಯ ದ್ವಂದ್ವ (ಚಿತ್ರ೩ನ್ನು ನೋಡಿ). ಹೀಗೆ ಡಿಎನ್‌ಎಯ 'ವಿಶ್ವರೂಪದರ್ಶನ'ವಾದ ಮೇಲೆ, ಸರಳತೆ ಮತ್ತು ವಿಶ್ವವ್ಯಾಪಕತೆಗಳ ಸ್ಪರ್ಧೆಯಲ್ಲಿ, ಡಿಎನ್‌ಎ ಕಂಪ್ಯೂಟರ್‌ನ್ನು ಬಹಳ ಹೆಚ್ಚಿನ ಅಂಕಗಳಿಂದ ಸೋಲಿಸುವುದೆನ್ನುವುದು ನಿಶ್ಚಯವಾಯಿತು.

### ಕಾರ್ಯ ವಿಸ್ತಾರ ಮತ್ತು ವೈವಿಧ್ಯತೆ

ಪ್ರತಿ ಜೀವಿಯ ದೇಹದ ಪ್ರತಿ ಜೀವಕೋಶದಲ್ಲಿರುವ ಈ ಡಿಎನ್‌ಎ ನಿರ್ದೇಶಿಸುವ ಜೀವನ ನಾಟಕದ ಹಂತಗಳೇನು ? ಮುಖ್ಯವಾಗಿ ಈ ಹಲವು : ದತ್ತವಾಗಿ ಪಡೆದ ಒಂದು ಜೀವಕೋಶ (ಅಥವಾ ಇಬ್ಬರಿಂದ ಪಡೆದ ಎರಡು ಸಮಂಜಸ ಅರ್ಧಕೋಶಗಳ ಸಂಮಿಲಿತ ಒಂದು ಜೀವಕೋಶ)ದಿಂದ ಪ್ರಾರಬ್ಧ ಹುಟ್ಟು; ದೇಹದ ಅಂಗಾಂಗಗಳ ಸೃಷ್ಟಿ; (ಪ್ರಾಣಿಗಳಲ್ಲಾದರೆ) ಮೂಳೆ, ಮಾಂಸ, ರಕ್ತ, ಹಲ್ಲು, ಉಗುರು, ಕೂದಲು, ಚರ್ಮದ ಬಣ್ಣ ಮುಂತಾದ ಸಾವಿರಾರು ಅಂಶಗಳ ಸರಿಯಾದ (ನಾಟಕದ ಪಾತ್ರ, ತಂತ್ರ, ಸನ್ನಿವೇಶಗಳಿಗೆ ಹೊಂದಿಕೊಳ್ಳುವ) ಅಳವಡಿಕೆ. ಸಮರೂಪಾಂಗೀಕರಣದ, ಸಮಗತಿಯ ಬೆಳವಣಿಗೆ; ವಯೋಯೋಗ್ಯ ಅಂಗಾಂಗಗಳ ವಿಕಸನೆ; ಕ್ಷಣ ಕ್ಷಣದ ಚಟುವಟಿಕೆಗಳಿಗಾಗಿ ಆವಶ್ಯಕ (ರಾಸಾಯನಿಕ ಕ್ರಿಯೆಗಳಿಂದಾಗುವ) ಶಕ್ತಿಯ ಉತ್ಪಾದನೆ; ದಿನನಿತ್ಯದ ಆಹಾರದ ಚಯನ, ಪಚನ, ಫಲಿತಾಂಶಗಳ ವಿನಿಮಯ; ಇತರ ಆವಶ್ಯಕ ರಸರಾಶಿಗಳ ಆಂತರಿಕ ಉತ್ಪತ್ತಿ ; ಬುದ್ಧಿ ವಿಕಾಸ; ಬದಲುವ ಆವರಣಕ್ಕೆ ಸ್ಪಂದಿಸುವ ಐಚ್ಛಿಕ ಮತ್ತು ಅನೈಚ್ಛಿಕ ಚೇಷ್ಟೆಗಳು; (ಜಾತಿಗೆ ತಕ್ಕಂತೆ) ಲೈಂಗಿಕ ಅಥವಾ ನಿರ್ಲೈಂಗಿಕ ಪ್ರಜೋತ್ಪತ್ತಿ; ರೋಗ, ರುಜಿನಗಳೊಡನೆ ದ್ವಂದ್ವ ಯುದ್ಧ; ಕಡೆಗೆ ನಿಯಮಿತ ಜೀವಾವಧಿಯ ನಂತರದ ಸಾವು. ಹೀಗೆ ಅಸಂಖ್ಯ, ವೈವಿಧ್ಯಮಯ, ಪೂರ್ವನಿಯೋಜಿತ ಚಟುವಟಿಕೆಗಳನ್ನು ಒಂದು ಬದ್ಧ, ಸನ್ನದ್ಧ ರೀತಿಯಲ್ಲಿ ನಡೆಸುವುದಕ್ಕೆ ಬೇಕಾಗುವ ಒಂದು ಸಂಪೂರ್ಣ ಸವಿಸ್ತಾರ ಕ್ರಿಯಾಸೂಚಿ (ಪ್ರೋಗ್ರಾಂ) ಡಿಎನ್‌ಎಯಲ್ಲಿ ಅಡಗಿದೆ, ಕಂಪ್ಯೂಟರ್‌ನಲ್ಲಿರುವಂತೆಯೇ. ಹೀಗೆಯೆ, ಡಿಎನ್‌ಎ ತನ್ನ ಕಾರ್ಯಸಾಧನೆಯ ವೈಪುಲ್ಯ, ವೈವಿಧ್ಯತೆ ಮತ್ತು ವೈಶಾಲ್ಯಗಳಿಂದಲೂ ಉತ್ಕೃಷ್ಟವಾಗಿ ಗೆಲ್ಲುತ್ತದೆ.

### ಪಾಂಡಿತ್ಯ ಮತ್ತು ಪ್ರಾವೀಣ್ಯ

ದೇಹದಲ್ಲಿ ನಡೆಯುವ ಇಷ್ಟು ವಿಧವಿಧ ಸಂಕೀರ್ಣ ಕ್ರಿಯೆಗಳನ್ನು ನಡೆಸುವ ಸಾಧಕಗಳು ದೇಹದೆಲ್ಲೆಲ್ಲಿಯೂ ಹರಡಿರುವ ಸಾವಿರಾರು ಬಗೆಯ ಪ್ರೋಟೀನ್‌ಗಳು. ಇವೇ, ದೇಹ ನಿರ್ಮಾಣಕ್ಕೋಸ್ಕರ ತಮ್ಮ ತಮ್ಮ ಭೌತಿಕ ಶಕ್ತ್ಯನುಗುಣವಾಗಿ ಭಿನ್ನ ಭಿನ್ನ ಉಪಾಂಗಗಳಾಗಿಯೂ, ಚೇತನ ನಿಯಂತ್ರಣಕ್ಕೋಸ್ಕರ ಕಾರ್ಯೋಚಿತವಾಗಿ ಹಾರ್ಮೋನಿನಂತಹ ಭಿನ್ನಭಿನ್ನ ರಾಸಾಯನಿಕ ದ್ರವ್ಯಗಳಾಗಿಯೂ ಉಪಯುಕ್ತವಾಗುತ್ತವೆ. ಮಾನವ ದೇಹದಲ್ಲಿ ಸುಮಾರು ಒಂದು ಲಕ್ಷದಷ್ಟು ಬಗೆಬಗೆಯ ಪ್ರೋಟೀನ್‌ಗಳು ಇರಬಹುದೆಂದು ಅನುಮಾನಿಸಲಾಗಿದೆ. ಈ ಅನೇಕ ಜೈವಿಕ ದ್ರವ್ಯಗಳಲ್ಲಿ ಪ್ರತಿಯೊಂದನ್ನು ತನ್ನದೆ ಕರ್ತವ್ಯವನ್ನು ನಿಭಾಯಿಸುವ ಹಾಗೆ ತಯಾರಿಸುವುದಕ್ಕೆ, ಕೇವಲ ೨೦ ತರಹೆಯ ಅಮಿನೊ ಆ್ಯಸಿಡ್(ಜೈವಿಕ ರಸಾಯನ ಅಥವಾ ಕಾರ್ಬನಿಕ ರಸಾಯನಿಕ ದ್ರವ್ಯ)ಗಳು ಸಾಕು. ಭೂಮಿಯಲ್ಲಿರುವ ಎಲ್ಲಾ ಜೀವಿಗಳ ದೇಹಗಳಲ್ಲಿನ




*ಚಿತ್ರ ೩. ಬೀಜವೃಕ್ಷ : ಇದುವೆ ಮನುಷ್ಯನ ವಂಶವೃಕ್ಷ*

ಪ್ರೋಟಿನ್‌ಗಳ ವಿವಿಧ ನಮೂನೆಗಳ ಸಂಖ್ಯೆ ಒಂದು ಟ್ರಿಲಿಯನ್ (ಎಂದರೆ, ೧ X ೧೦$^{೨}$) ಅಷ್ಟಾದರೂ ಇರಬೇಕು. ಇವುಗಳೂ ೨೦ ಅಮಿನೋ ಆ್ಯಸಿಡ್‌ಗಳಿಂದಲೇ ನಿರ್ಮಿತವಾಗುತ್ತವೆ. ಇವೆಲ್ಲದರ ಕರ್ತಾರನಾದ ಡಿಎನ್‌ಎಯ ಸರಳತೆ ಪ್ರಶಂಸನೀಯವೇ !

### ನಿಖರತೆ ಮತ್ತು ವೈವಿಧ್ಯತೆ

ಆಗಲೆ ಹೇಳಿದಂತೆ, ಇಂತಹ ಬಹು ವಿಸ್ತಾರದ ಕಾರ್ಯಭಾರವನ್ನು ನಡೆಸುವುದಕ್ಕೆ ಬೇಕಾಗುವ ನಕ್ಷೆ, ಕಾರ್ಯಸೂಚಿ ಮುಂತಾದವುಗಳ ಎಲ್ಲಾ ಸಂಪುಟಗಳ ಖಚಿತ ಪ್ರತಿಗಳ ಭಂಡಾರವೇ ದೇಹದ ಪ್ರತಿ ಜೀವಕೋಶದಲ್ಲೂ ಇದೆ. ಹೀಗಿರುವುದರಿಂದಲೆ, ಟಿಶ್ಯೂ ಕಲ್ಚರ್ (ಕಸಿ ಮಾಡುವುದು), ಗ್ರಾಫ್ಟಿಂಗ್ (ಸ್ವಾಂಗ ಪ್ರತ್ಯಾರೋಪಣ), ಆರ್ಗನ್ ಟ್ರಾನ್ಸ್‌ಪ್ಲಾಂಟ್ (ಪರಾಂಗ ಪ್ರತ್ಯಾರೋಪಣ, ಮುಖ್ಯವಾಗಿ ಮೂತ್ರಪಿಂಡ, ಹೃದಯ ಅಥವಾ ಕಣ್ಣಿನ ಕಾರ್ನಿಯ ಮುಂತಾದವುಗಳ ಪುನರ್‌ಸ್ಥಾಪನೆ) ಹಾಗೂ ಕ್ಲೋನಿಂಗ್ (ಪ್ರತಿಮೂರ್ತಿ ಸೃಜನ ಅಥವಾ ಇತಿ ಜೀವೀಕರಣ) ಇಂತಹ ಮಹಾಚಮತ್ಕಾರಗಳು ಸಾಧ್ಯವಾಗಿವೆ. ಡಿನೋಸಾರಸ್‌ನ ಅವಶೇಷದಿಂದ ಇಡೀ ಪೆಡಂಭೂತವನ್ನೆ ನಿರ್ಮಿಸುವುದು ಅಸಾಧ್ಯವಾದರೂ ತಾತ್ವಿಕವಾಗಿ ಸಾಧ್ಯ. ಇಲ್ಲೊಂದು ಗಮನಿಸಬೇಕಾದ ವಿಷಯ : ವೈರಸ್ (ಸಾಂಕ್ರಾಮಿಕ ವ್ಯಾಧಿ ಉಂಟುಮಾಡುವ ಕ್ರಿಮಿ) ಸರಿಯಾದ ಪರಜೀವಿಯಲ್ಲಿ ನೆಲೆ ಸಿಕ್ಕುವವರೆಗೂ ಸತ್ತ ಹಾಗೆಯೆ ಬಹಳ ಕಾಲ ಇದ್ದರೂ, ಸಿಕ್ಕಾಗ ಪ್ರಜೋತ್ಪತ್ತಿ ಪ್ರಾರಂಭಿಸಿಬಿಡುತ್ತದೆ.

ಒಂದು ಕುರಿಯ ಕ್ಲೋನಿಂಗ್‌ನಿಂದ ಫಲಿಸಿದ ಮರಿಕುರಿ, ಆ ಜೀವಕೋಶದಾನಿ ಕುರಿಯ ಸ್ವಂತ ಸೋದರ ಕುರಿಗಳಿಗಿಂತ ಬಹಳ ಹೆಚ್ಚಾಗಿ ದಾನಿಕುರಿಯನ್ನು ದೇಹ, ಗುಣ, ರೂಪ, ಲಿಂಗಗಳೆಲ್ಲದರಲ್ಲಿಯೂ ಹೋಲುತ್ತದೆ. ಹೀಗೆಯೆ ಟಿಶ್ಯೂ ಕಲ್ಚರ್‌ನಿಂದ ಬೆಳೆದ ಗಿಡಗಳ ಗುಣರೂಪಗಳಲ್ಲಿರುವಷ್ಟು ತದ್ವತ್ತತೆ, ಒಂದೇ ಗಿಡದ ಬೀಜಗಳಿಂದ ಹುಟ್ಟಿದ ಗಿಡಗಳಲ್ಲಿರುವುದಿಲ್ಲ. ಈ ನಿದರ್ಶನಗಳಿಂದ ಡಿಎನ್‌ಎಯ ನಿಖರತೆಯನ್ನು ಪ್ರಮಾಣಿಸಿದ್ದಾಯಿತು. ಜೊತೆಗೆ, ಒಡಹುಟ್ಟಿದವರಲ್ಲಿಯೂ ಡಿಎನ್‌ಎಯ ವೈವಿಧ್ಯತೆ ಇರುವುದನ್ನೂ ಗಮನಿಸಬೇಕು.

### ಜೀವ ವಿಕಾಸದ ಅಂತರ್ಧಾರೆ

ಯುಗಯುಗಾಂತರಗಳ ಜೀವ ವಿಕಾಸವನ್ನು ಒಂದು ವಿಹಂಗಮ ದೃಷ್ಟಿಯಿಂದ ನೋಡಿದಾಗ, ಎಲ್ಲರಿಗೂ ಪರಿಚಿತವಾಗಿರುವ ಡಾರ್ವಿನ್ನನ ವಿಕಾಸವಾದ ಗುರುತಿಸುವ ಮಹಾಧಾರೆ ಅನುವಂಶೀಯ ನವವಿಕೃತಿಯೊಡನೆ ಒಂದು ಅಂತರ್ಧಾರೆಯೂ ಕಂಡುಬರುತ್ತದೆ. ಸಂತಾನೋತ್ಪಾದಕ ವಿಧಿಯಲ್ಲಿನ ತಿರುವುಗಳನ್ನು ತೋರುವ ಈ ಅಂತರ್ಧಾರೆ, ಕೋಶ ವಿದಳನ ಮತ್ತು ಕ್ಲೋನಿಂಗ್‌ನಂತಹ ವೈವಿಧ್ಯ ರೋಧಕ ಸರಳ ವಿಧಾನಗಳನ್ನು ಹಿಂದೆ ಬಿಟ್ಟು, ನಿಯಮಿತವಾಗಿಯಾದರೂ ವೈವಿಧ್ಯತೆಯನ್ನು ಹೆಚ್ಚಿಸುವ, ಖಚಿತವಾಗಿಯೂ ಸರಳವಲ್ಲದ, ಲೈಂಗಿಕ ವಿಧಾನಗಳತ್ತ ಹರಿಯತೊಡಗಿದುದು ಒಂದು ಗಮನಾರ್ಹ ವಿಷಯ. ಕಂಪ್ಯೂಟರ್ ಸಹ, ಬೀಜ ರೂಪದ ಚಿಪ್ ಆಗಿ, ಅನೇಕ ಚಿಕ್ಕ, ದೊಡ್ಡ ಯಂತ್ರಗಳಲ್ಲಿ ಸಂಮಿಲಿತವಾಗಿ, ಇಷ್ಟಲ್ಲದೆಯೆ ಹೈಬ್ರಿಡ್ ಕಂಪ್ಯೂಟರ್ ಆಗಿಯೂ, ತನ್ನ ಸಂಸಾರವನ್ನು ವಿಶಾಲಗೊಳಿಸುತ್ತಿರುವುದು ಬರಿಯ ಒಂದು ರಂಜಕ ಉಪಮೆಯಷ್ಟೆ.

ಪ್ರತಿಯೊಂದು ಜೀವಕೋಶದಲ್ಲಿನ ಡಿ ಎನ್ ಎಯು ಒಂದು ಕಂಪ್ಯೂಟರ್. ಪ್ರತಿ ಸಸ್ಯ, ಪ್ರಾಣಿಯು ಸಹಸ್ರಾರು ಪುಟ್ಟ ಕಂಪ್ಯೂಟರ್‌ಗಳನ್ನು ಸುವ್ಯವಸ್ಥೆಯಿಂದ ನಿರ್ದೇಶಿಸುತ್ತಿರುವ ಒಂದು 'ಮಲ್ಟಿ ಪ್ರೊಸೆಸಿಂಗ್ ಪ್ಯಾರೆಲೆಲ್ ಕಂಪ್ಯೂಟರ್' ಒಕ್ಕೂಟ. ಇಷ್ಟು ಪರಿಣತವಾಗಿ ಕಂಪ್ಯೂಟರನ್ನು ಮೀರಿಸಬಲ್ಲಷ್ಟು ಸಾಮರ್ಥ್ಯವನ್ನು ಉಳ್ಳದ್ದು ಈ ಡಿಎನ್‌ಎ. ಪ್ರತಿ ಜೀವಕೋಶದಲ್ಲೂ ಹೀಗೆ ಒಂದೊಂದು ಸರ್ವಸರಿಸಮ ಕಂಪ್ಯೂಟರ್ ಅನ್ನು ನಿರ್ಮಿಸುವುದು ಹೇಗೆ ಸುಲಭ ಸಾಧ್ಯವಾಯಿತು ?

### ಸ್ವಯಂಭೂ ಡಿಎನ್‌ಎ

ತಿರುಚಿದ ಏಣಿಯಾಕಾರದ ಡಿಎನ್‌ಎ ತಾನೆ ಆರಿಸಿಕೊಂಡ ಕೊನೆಯ ಮೆಟ್ಟಿಲೊಂದರ ಒಳಗಿನ ಮೆಟ್ಟಲುಗಳ ಮಧ್ಯದಲ್ಲಿ ಸೀಳಿಕೊಳ್ಳಲು ಆರಂಭಿಸಿದಾಗ, ಎಡಭಾಗದ ಎಳೆ L ಮತ್ತು ಬಲಭಾಗದ ಎಳೆ R ಆಗುತ್ತವೆ (ಚಿತ್ರ ೪ನ್ನು ನೋಡಿ). ಈ L ಎಳೆ ತನ್ನನ್ನೆ ಒಂದು ಅಚ್ಚಾಗಿ ಇಟ್ಟುಕೊಂಡು, ಹೊಸ ಎಳೆ LRಅನ್ನು ಪಡಿಯಚ್ಚಾಗಿ ಮಾಡಿಕೊಳ್ಳುತ್ತಾ ಹೋಗುತ್ತದೆ. ಪಡಿಯಚ್ಚಾದ್ದರಿಂದ ಹೊಸಭಾಗದಲ್ಲಿ ತಪ್ಪುಗಳಿರುವುದು ಸಾಧ್ಯವೇ ಇಲ್ಲ. ಹೀಗೆ ಪಡೆದ, ಹಳೆಯ ಅರ್ಧ ಹೊಸ ಅರ್ಧಗಳ ಸಂಮಿಲಿತ DNA, L-LR, ಸೀಳುವುದಕ್ಕೆ ಮುಂಚೆ ಇದ್ದ ಡಿಎನ್‌ಎಯ ಪ್ರತಿಮೂರ್ತಿ ಆದಹಾಗೆ ಆಯಿತು. ಇದೇ ರೀತಿಯಲ್ಲಿ, ಉಳಿದುಹೋಗಿರುವ ಹಳೆಯ R ಎಳೆಯು, ಹೊಸ RL ಎಳೆಯನ್ನು ಪಡಿಯಚ್ಚು ಮಾಡಿಕೊಂಡು, RL-R ಎಂಬ ಹೊಸ DNA ಆಗುತ್ತದೆ. ಹೀಗೆ ಹಿಂದಿದ್ದ




*ಚಿತ್ರ ೪. ಡಿಎನ್‌ಎಯ ಸ್ವಯಂಸೃಜನೆ*

ತಾಯಿ DNAಯ ಬದಲಾಗಿ, ಸಂಪೂರ್ಣ ತದ್ರೂಪ ಗುಣಗಳ ಎರಡು ಅವಳಿ ಪುತ್ರಿ DNAಗಳು ಸಿಕ್ಕಹಾಗಾಯಿತು. ಇದೇ ರೆಪ್ಲಿಕೇಶನ್ ವಿಧಾನ. ಇಷ್ಟು ಕೌಶಲ್ಯದಿಂದ ಇಷ್ಟು ಸರಳವಾಗಿ ಮತ್ತು ನಿಖರವಾಗಿ ತನ್ನನ್ನು ತಾನೆ ನಿರ್ಮಿಸಿಕೊಳ್ಳುವ ಸ್ವಯಂಭೂ ಆಗಿರುವ ಕ್ಷಮತೆ ಈಗಿನ ಯಾವ ಕಂಪ್ಯೂಟರ್‌ಗೆ ತಾನೆ ಇದೆ ?

**ಸಂರಚನೆಯಲ್ಲಿ ಸೂಕ್ಷ್ಮತೆ ಮತ್ತು ಸಾಂದ್ರತೆ**

ಕಂಪ್ಯೂಟರ್‌ನ ಮತ್ತೊಂದು ಚಮತ್ಕಾರಿ ಗುಣ, ಅತಿ ಕಡಿಮೆ ಗಾತ್ರದಲ್ಲಿ ಮತ್ತು ತೂಕದಲ್ಲಿ ಹೆಚ್ಚು ಹೆಚ್ಚು ಕಾರ್ಯ ಸಾಮರ್ಥ್ಯ ಮತ್ತು ಮಾಹಿತಿಗಳನ್ನು ತುಂಬಿಟ್ಟುಕೊಳ್ಳುವುದು. ಈಚೀಚೆಗಂತೂ ಸೂಕ್ಷ್ಮೀಕರಣ ಸಾಧನೆಗಳು ಎಲ್ಲರನ್ನೂ ಚಕಿತಗೊಳಿಸುತ್ತಿವೆ. ಡಿಎನ್‌ಎಯಂತೆಯೇ ಮಾಲಿಕ್ಯೂಲ್‌ಗಳ ಸ್ವರೂಪದಲ್ಲೆ ಕಂಪ್ಯೂಟರಿನ ಸ್ಮೃತಿ ಕಣಗಳನ್ನು ಅಳವಡಿಸಲು ಸಾಧ್ಯವೆ ಎಂದು ಕಂಪ್ಯೂಟರ್ ವಿಜ್ಞಾನಿಗಳು ಈಚೆಗೆ ಶೋಧನೆ ಪ್ರಾರಂಭಿಸಿದ್ದಾರೆ.

**ಕಾರ್ಯವೇಗ**

ಈಕೊಲ್ಲೈ ಕೇವಲ ಇಪ್ಪತ್ತು ನಿಮಿಷಗಳಿಗೆ ಒಮ್ಮೆ ಒಡೆದು ಎರಡು ಕೋಶಗಳಾಗುತ್ತದೆ. ಹೀಗೆ ಹನ್ನೊಂದು ಘಂಟೆಗಳಲ್ಲಿ, ಒಬ್ಬನ ಕರುಳಿನಲ್ಲಿರುವ ಒಂದು ಜೀವಿ ೨$^{೩೨}$ ಅಂದರೆ ೪ ಬಿಲಿಯನ್ (ಭಾರತದ ಜನಸಂಖ್ಯೆಯ ನಾಲ್ಕರಷ್ಟು) ಆಗುತ್ತದೆ. ಹೆದರಬೇಕಾಗಿಲ್ಲ! ಇವುಗಳ ಒಟ್ಟು ತೂಕ ಒಂದು ಗ್ರಾಂ. ನಷ್ಟಕ್ಕೂ ಕಡಿಮೆ. ಈ ರೀತಿಯಲ್ಲಿ ಒಂದು ವಸ್ತುವಿನ ಪ್ರತಿಮೂರ್ತಿಗಳನ್ನು ಮಾಡುವುದಂತೂ ಕಂಪ್ಯೂಟರ್‌ಗೆ ಸಾಧ್ಯವಿಲ್ಲ; ಸಾಧಾರಣ ದಾಖಲೆಯ ನಕಲು ಪ್ರತಿಗಳನ್ನು ಮಾಡುವುದಕ್ಕೂ ಕಂಪ್ಯೂಟರ್ ಒಂದು ಸೆಕೆಂಡಿಗೆ ಒಂದು ಲಕ್ಷದಷ್ಟು ನಕಲುಗಳನ್ನು ಮಾಡಬೇಕು. ಯಾವುದೇ ಯಂತ್ರಕ್ಕಾದರೂ ಇದು ಸಾಧ್ಯವೇ ?

**ಕಾರ್ಯದಕ್ಷತೆ**

ಕಾರ್ಯದಕ್ಷತೆಯಲ್ಲೂ ಡಿಎನ್‌ಎ ಬಹಳ ಉತ್ಕೃಷ್ಟ ಮಟ್ಟದ್ದು. ಒಂದು ಸೇವಾಕಾರಿ ಘಟಕದ ದಕ್ಷತೆಯನ್ನು ಮಾಡಿಸುವುದು ನಾವು ಅದರಿಂದ 'ಪಡೆಯುವ' ಮತ್ತು ಅದಕ್ಕಾಗಿ 'ತೆರುವ' ಮೌಲ್ಯಾಂಕಗಳ ಭಾಗಲಬ್ಧದಿಂದ ಡಿಎನ್‌ಎ ಉತ್ಪಾದಿಸುವ ಪ್ರೋಟಿನ್‌ಗಳನ್ನು ಕಾರ್ಖಾನೆಗಳಲ್ಲಿ ತಯಾರಿಸಬೇಕಾದರೆ ತಗಲುವ ವೆಚ್ಚ ಮತ್ತು ಶಕ್ತಿಯ ಖರ್ಚು ಎಷ್ಟು ಹೆಚ್ಚೆಂದರೆ, ದೊಡ್ಡ ದೊಡ್ಡ ಕಂಪೆನಿಗಳು ಅನೇಕ ಉತ್ಪಾದನೆಗಳನ್ನು ಬ್ಯಾಕ್ಟಿರಿಯಾಗಳಿಂದಲೇ ಮಾಡಿಸುತ್ತಿವೆ. ಸಮುದ್ರದಲ್ಲಿ ಚೆಲ್ಲಿಹೋದ ಟನ್‌ಗಟ್ಟಲೆ ಖನಿಜ ತೈಲವನ್ನು ಸ್ವಲ್ಪವೆ ತೂಕದ ವಿಶೇಷ ಬ್ಯಾಕ್ಟಿರಿಯಾಗಳು ಹೇಗೆ ಕೆಲವೇ ದಿನಗಳಲ್ಲಿ ಬದಲಾಯಿಸಿ ಅಪಾಯರಹಿತವಾಗಿ ಮಾಡಬಲ್ಲವೆಂಬುದು ಎಲ್ಲರಿಗೂ ತಿಳಿದ ವಿಷಯ.

**ನಿರ್ಣಯ**

ಇಂತಹ ಮಾಪನ, ಪರೀಕ್ಷೆ, ತುಲನೆಗಳಿಂದ ಡಿಎನ್‌ಎಯು ಅನೇಕ ಸಮಾನ ತರಹೆಯ ಮುಖ್ಯ ಗುಣಗಳಲ್ಲಿ ಕಂಪ್ಯೂಟರ್‌ನ ಮೇಲೆ ಉಚ್ಚ ಶ್ರೇಣಿಯ ವಿಜಯ ಸಾಧಿಸ ಬಲ್ಲದೆಂದು ಸಿದ್ಧವಾಗುತ್ತದೆ. ಆದರೆ ಈ ವಿಜಯ ಸ್ನೇಹಪರ ಸ್ಪರ್ಧೆಯ ವಿಜಯ. ಡಿಎನ್‌ಎಯ ವಿಷಯವಾಗಿ ನಡೆಯುತ್ತಿರುವ ಅನೇಕ ಶೋಧನೆಗಳಿಗೆ ಕಂಪ್ಯೂಟರ್‌ನ ನೆರವು ಬಹಳಷ್ಟು ಬೇಕು. ಮನುಷ್ಯನ (ಕ್ಯಾನ್ಸರ್ ಅನ್ನು ಒಳಗೊಂಡ) ರೋಗರುಜಿನಗಳ ನಿವಾರಣೆಗಾಗಿ ಆಗಬೇಕಾದ ಮಹಾಸಾಧನೆಗಳಿಗೆ ನಾಂದಿಯಾಗಿ, ಮನುಷ್ಯನ ಜೀನ್ಸ್‌ಗಳೆಲ್ಲವನ್ನು (ಅಂದರೆ ಪೂರ್ಣ ಡಿಎನ್‌ಎಯನ್ನು, ಅದರ ೩ ಬಿಲಿಯನ್ ಅಕ್ಷರ ಜೋಡಿಗಳನ್ನು) ಕ್ರಮವಾಗಿ, ದೋಷರಹಿತವಾಗಿ ದಾಖಲೆ ಮಾಡುವುದು ಅತ್ಯವಶ್ಯಕ. ಈ ಜೀನೊಮ್ ಬೃಹತ್ ಯೋಜನೆ, ಕಂಪ್ಯೂಟರ್ ಇಲ್ಲದಿದ್ದಲ್ಲಿ, ಪ್ರಾರಂಭದಲ್ಲೆ ಒಂದು ದುಸ್ಸಾಹಸವಾಗಿಬಿಡುತ್ತಿತ್ತು; ಪ್ರಾರಂಭಿಸಿದ್ದರೂ, ಇನ್ನು ೨-೩ ವರ್ಷಗಳಲ್ಲಿ ಸಂಪನ್ನಗೊಳ್ಳುವ ನಿರೀಕ್ಷೆಯಿರುವ ಈ ಯೋಜನೆ ಮುಗಿಯುವುದಕ್ಕೆ ಇನ್ನೊಂದು ಶತಮಾನವೇ ಕಾಯಬೇಕಾಗುತ್ತಿತ್ತೇನೊ !

**ಡಾ|| ಎಂ. ಎನ್. ಕೇಶವರಾವ್**

೩೮೮, ವೆಂಕಟೇಶ ದಾಸ್ ರೋಡ್, ಪದ್ಮನಾಭನಗರ, ಬೆಂಗಳೂರು - ೫೬೦೦೭೦

# ಶತಮಾನದ ಕವಿ ಅಮೃತಾ ಪ್ರೀತಂ

೧೯೦೦ ರಿಂದ ೨೦೦೦ದನೇ ಒಂದು ಶತಮಾನದ ಅವಧಿಗೆ ಒಬ್ಬ "ಶತಮಾನದ ಕವಯಿತ್ರಿ" ಆಯ್ಕೆಯಾಗುತ್ತಾರೆಂದು ಈ ಶತಮಾನದ ಆರಂಭವಾದಾಗ ಯಾರೂ ಕಂಡಿರಲಿಲ್ಲ. ಈ ಶತಮಾನಕ್ಕೆ ಶತಮಾನ ಕವಯಿತ್ರಿಯಾಗಿ ಆಯ್ಕೆಯಾಗಿರುವ ಮೂಲ ಪಂಜಾಬಿ ಲೇಖಕಿಯಾದ ಅಮೃತಾ ಪ್ರೀತಂ ಅವರು ಜನಿಸಿದ್ದು ಅಂದು ಭಾರತದ ಅವಿಭಾಜ್ಯ ಅಂಗವಾಗಿದ್ದ ಪಂಜಾಬಿನ ಲಾಹೋರಿನಲ್ಲಿ. ಅವರು ೧೯೧೯ ಆಗಸ್ಟ್ ೩೧ರಂದು ಹುಟ್ಟಿದವರು.

ಭಾರತದಲ್ಲಿ ಸಾಹಿತ್ಯ ಅಕಾಡೆಮಿಯ ಪುರಸ್ಕಾರವನ್ನು ಪಡೆದ ಪ್ರಥಮ ಭಾರತೀಯ ಮಹಿಳೆಯಾಗಿರುವ ಹೆಗ್ಗಳಿಕೆಯೂ ಅಮೃತಾ ಪ್ರೀತಂರ ಮಡಿಲಿಗೆ ಬೀಳುವುದು. ೧೯೫೬ರಲ್ಲಿ "ಸುನಹರೇ" ಎಂಬ ಅವರ ಕವನ ಸಂಕಲನಕ್ಕೆ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದರು. ಆಗಲೇ ಭಾರತದಲ್ಲಿ ಅನೇಕ ಪ್ರಗತಿಶೀಲ ಲೇಖಕರು ಹುಟ್ಟಿಕೊಂಡಿದ್ದರು. ಸುನಹರೇ ಕವನ ಸಂಕಲನದಲ್ಲಿ ಅಮೃತಾ ಪ್ರೀತಂರವರು ಪ್ರಗತಿಶೀಲ ಚಿಂತನೆಯನ್ನು ಹೊರಗೆಡಹಿದ್ದಾರೆ. ಪ್ರಸಿದ್ಧ ಉರ್ದು ಕವಿ ಸಾಹಿರ ಲೂಧಿಯಾನ್ವಿಯವರ ಕವಿತೆಗಳಲ್ಲಿ ಕಾಣುವ ಪ್ರೇಮಾಕಾಂಕ್ಷೆಯು ಅಮೃತಾ ಪ್ರೀತಂರವರನ್ನು ತಮ್ಮ ಕಾವ್ಯದಲ್ಲಿ ಬಹಳ ತನ್ಮಯರಾಗಿ ಬರೆಯವಂತೆ ಪ್ರೇರೇಪಿಸಿತು, ಸಾಹಿರ ಲೂಧಿಯಾನ್ವಿಯವರ ಕಾವ್ಯ ಬಹಳ ಬಹಳ ಪರಿಣಾಮ ಬೀರಿತ್ತು.

"ಸುನಹರೇ" ಕವನ ಸಂಕಲನದಲ್ಲಿ ಅವರು ಸಮಾಜವಾದಿ, ಸಮಾಜ ರಚನೆ, ಜಾಗತಿಕ ಶಾಂತಿ, ಭೂಮಿಯ ಯಜಮಾನಿಕೆ, ಯುದ್ಧ ವಿರೋಧಿ ವಿಚಾರ, ಸಮಾನತೆಯ ಹಕ್ಕುಗಳು ಇತ್ಯಾದಿಗಳ ಬಗ್ಗೆ ವಿಚಾರ ಮಾಡಿದ್ದಾರೆ. ಆರ್ಥಿಕ-ಸಾಮಾಜಿಕ ಅಸಮಾನತೆಯ ಬಗ್ಗೆ ಅಸಮಾಧಾನದಿಂದ ಕಿಡಿ ಕಾರುತ್ತಾರೆ. ಅವರ ಕವನಗಳಲ್ಲಿಯ ಕಾವ್ಯಾರ್ಥ, ಅದ್ಭುತ ತನ್ಮಯತೆ, ಕವನದಲ್ಲಿಯ ವಸ್ತು, ಅರ್ಥದ ಲಯವಂತಿಕೆ, ಇದರೊಟ್ಟಿಗೆ ಜಾನಪದೀಯ ಕಾವ್ಯಧಾಟಿ ಮತ್ತು ಜನಪದ ನಂಬಿಕೆಗಳನ್ನು ಅದ್ಭುತವಾಗಿ ಕಾವ್ಯಕ್ಕೆ ಬಳಸಿಕೊಳ್ಳುವ ಅವರ ರೀತಿಗಳು ಬಹುಶಃ ಅವರನ್ನು ಶತಮಾನದ ಕವಯಿತ್ರಿಯನ್ನಾಗಿ ಮಾಡಿವೆ.

ಕಾವ್ಯದ ಆತ್ಮದಲ್ಲಿ ಹೊಕ್ಕು ತನ್ಮಯರಾಗಿ, ಗಾಢವಾಗಿ, ಆಳಕ್ಕಿಳಿದು ಮಾತನಾಡಿಸುವ ಅವರ ಕವಿತೆಗಳು ೨೦ನೇ ಶತಮಾನದ ಮಹಿಳೆಯರ ಮಹತ್ವದ ಕಾವ್ಯ ಸಾಧನೆಯ ಪ್ರತೀಕಗಳು. ನಿಖರವಾದ ಆಲೋಚನೆ, ಎಗ್ಗಿಲ್ಲದ ಕಾವ್ಯದ ಒಳಹರಿವು, ವೈಚಾರಿಕತೆ, ಗಾಢ ತನ್ಮಯತೆ, ಪ್ರಗತಿಶೀಲ ವಿಚಾರಧಾರೆ, ಸೂಕ್ಷ್ಮಾತಿಸೂಕ್ಷ್ಮ ವಿಷಯಗಳ ಸಮರ್ಥ ಬಳಕೆಗಾಗಿ ಅಮೃತಾ ಪ್ರೀತಂ ಪ್ರಸಿದ್ಧರಾಗಿದ್ದಾರೆ.

ಅಮೃತಾ ಪ್ರೀತಂ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆದ ಪ್ರಥಮ ಮಹಿಳೆ ಮಾತ್ರವಲ್ಲ, ಪಂಜಾಬಿ ಸಾಹಿತ್ಯಕ್ಕೆ ಜ್ಞಾನಪೀಠ ಗೌರವವನ್ನು ತಂದುಕೊಟ್ಟ ಏಕೈಕ ಮಹಿಳೆ ಕೂಡ ಆಗಿದ್ದಾರೆ. ದೆಹಲಿಯ ಆಕಾಶವಾಣಿ ಕೇಂದ್ರದಲ್ಲಿ ಅನೇಕ ವರ್ಷಗಳ ಸೇವೆ ಸಲ್ಲಿಸಿದ ಅಮೃತಾ ಪ್ರೀತಂರವರು ಮಾಯಾನಗರಿಯ ಥಳುಕು ಬಳುಕಿನ ಚಲನಚಿತ್ರ ಲೋಕಕ್ಕೂ ಪದಾರ್ಪಣ ಮಾಡಿ ಅದು ತಮಗೆ ಒಗ್ಗದಿರುವ ಕಾರಣ ನಟನಾ ಲೋಕದಿಂದ ಮತ್ತೆ ಸಾಹಿತ್ಯ ಲೋಕಕ್ಕೆ ಹಿಂತಿರುಗಿದರು.

ಅಮೃತಾ ಪ್ರೀತಂ ಅಂದಿನ ಹೆಸರಾಂತ ಲೇಖಕ ಕರ್ತಾರ್ ಸಿಂಗ್ "ಹಿತಕಾರಿ"ಯವರ ಮಗಳು ಅಮೃತಾಳ ಪಾಲಿಗೆ ತಾಯಿಯ ಮಡಿಲು ಬಹಳ ದಿನ ದಕ್ಕಲಿಲ್ಲ. ಎಳೆಯ ವಯಸ್ಸಿನಲ್ಲಿ ತಾಯಿಯನ್ನು ಕಳೆದುಕೊಂಡರು, ತಂದೆಯ ಸಂಪೂರ್ಣ ಪೋಷಣೆಯಲ್ಲಿಯೇ ಬೆಳೆದರು. ಲೇಖಕರಾದ ತಂದೆಯ ವ್ಯಕ್ತಿತ್ವವು ಅಮೃತಾರ ಸಾಹಿತ್ಯಾಭಿರುಚಿಯನ್ನು ಬೆಳೆಸಿತು.

ಆಗಿನ ಭಾರತದ, ಆದರೆ ಈಗ ಪಾಕಿಸ್ತಾನಕ್ಕೆ ಸೇರಿರುವ, ಪಂಜಾಬಿನ ಲಾಹೋರ್ ಪ್ರಾಂತದವರಾದ ಅಮೃತಾ ಪ್ರೀತಂ ಯಾವಾಗ ಭಾರತ ಸ್ವತಂತ್ರವಾಗುವ ಜೊತೆಗೆ ವಿಭಜನೆಯಾಯಿತೋ ಆಗ ಪಾಕಿಸ್ತಾನ ತೊರೆದು ಭಾರತಕ್ಕೆ ಬಂದು ನೆಲೆಸಿದರು. ದೇಶ ವಿಭಜನೆಯಾದಾಗ ಅಮೃತಾರಿಗೆ ೨೮ರ ಹರೆಯ. ಇಲ್ಲಿಯವರೆಗೆ ಒಂದೇ ಆಗಿದ್ದ ಭಾರತೀಯರು ಈಗ ಇಬ್ಭಾಗವಾಗಿದ್ದರು. ಅಣ್ಣ-ತಮ್ಮಂದಿರಲ್ಲೇ ಕಲಹ ಉಂಟುಮಾಡಿದ ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ವಿರುದ್ಧ ಅಮೃತಾ ಕಿಡಿ ಕಾರಿದರು. ಆಗಿನ ಕಾಲದಲ್ಲಿ ಪ್ರಜೆಗಳು ಅನುಭವಿಸಿದ ಯಮಯಾತನೆ, ಆರ್ಥಿಕ, ಸಾಮಾಜಿಕ ಹಾಗೂ ಮಾನಸಿಕ ಕಷ್ಟ ನಷ್ಟಗಳು ಅಮೃತಾರ ಮನದ ಮೇಲೆ ಗಾಢ ಪರಿಣಾಮ ಬೀರಿದವು. ಅದನ್ನು ಅವರು ತಮ್ಮ ಅನೇಕ ಕೃತಿಗಳಲ್ಲಿ ಪ್ರತಿಬಿಂಬಿಸಿದ್ದಾರೆ.

ಅಮೃತಾ ಪ್ರೀತಂರ ಆರಂಭಿಕ ಬರವಣಿಗೆಯ ಸಮಯದಲ್ಲಿ ಅವರಿಗೆ ಹೆಣ್ಣಿನ ದೈನಂದಿನ ಸ್ಥಿತಿಗಳು ಬಹಳವಾಗಿ ಪೀಡಿಸಿದವು. ಹೆಣ್ಣಿನ ಅಸಹಾಯಕತೆ, ಅವಳ ಮೇಲಿನ ದೌರ್ಜನ್ಯ, ಸಾಮಾಜಿಕ ಕಟ್ಟುಪಾಡುಗಳು, ಸಾಂಪ್ರದಾಯಿಕ ಮೂಢನಂಬಿಕೆಗಳು, ಅಸಮಾನ ಸ್ಥಾನಮಾನಗಳು, ವಿಧವೆಯರ ಪಡಿಪಾಟಲು, ಹಿಂಸೆಯನ್ನು ಮೌನವಾಗಿ ಸಹಿಸುವ ಹೆಣ್ಣು, ಇವೆಲ್ಲಾ ಅಮೃತಾರ ಸಾಹಿತ್ಯದ ಆರಂಭಿಕ ದಿನಗಳಲ್ಲಿ ವಸ್ತುವಾಗಿರುತ್ತಿದ್ದವು. ಬರಬರುತ್ತ ಅವರ ಕೃತಿಗಳಲ್ಲಿ ಸಾಮಾಜಿಕ ಹಾಗೂ ಮನೋವೈಜ್ಞಾನಿಕ ಸಮಸ್ಯೆಗಳು ಮುಖ್ಯವಾಗಿ ಪ್ರತಿಫಲನಗೊಂಡವು. ಅವರ ಕೃತಿಗಳನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ಅವಲೋಕನ ಮಾಡಿದರೆ, ಅವರು ಸೂಕ್ತ ಪ್ರತಿಮೆಗಳು, ಸಂಕೇತಗಳು ಮತ್ತು ಉಪಮೆಗಳನ್ನು ಸಮರ್ಥವಾಗಿ ಬಳಸಿಕೊಳ್ಳುವ ಅಪರೂಪದ ಕವಯಿತ್ರಿ ಎಂಬುದು ಸ್ಪಷ್ಟವಾಗುತ್ತದೆ. ಮಾನವನ ಸಹಜ ಭಾವುಕ ಅನುಭವಗಳನ್ನು ಪ್ರಾಕೃತಿಕ, ಸಹಜ, ವಾಸ್ತವತೆಯ ವಸ್ತುವನ್ನಾಗಿ ನಿರೂಪಿಸಬಲ್ಲ, ಜೀವತುಂಬುವ, ಮಾಂತ್ರಿಕಳಾಗುವ, ಅಮೃತಾ ಬದುಕನ್ನು ಕಾವ್ಯದಲ್ಲಿ ಬಹಳ ಹತ್ತಿರದಿಂದ ಆತ್ಮೀಯವಾಗಿ ಕಂಡವರು.

ಕೆ. ಷರೀಫಾ

ಇವರು ಕೇವಲ ಕಾವ್ಯ ಒಂದರಲ್ಲೇ ಪರಿಣತಿಯನ್ನು ಸಾಧಿಸಲಿಲ್ಲ, ಬದಲಾಗಿ ಕಾದಂಬರಿ, ಸಣ್ಣಕಥೆ, ಪ್ರವಾಸ ಕಥೆಗಳಂತಹ ಅನೇಕ ಪ್ರಕಾರಗಳಲ್ಲಿಯೂ ನಿಷ್ಣಾತರಾದ ಅಮೃತಾ ಹಿಂದಿ ಸಾಹಿತ್ಯ ಕ್ಷೇತ್ರದಲ್ಲೂ ಪ್ರಸಿದ್ಧ ಕಾದಂಬರಿಕಾರರಾಗಿದ್ದಾರೆ. ಅನೇಕ ಪತ್ರಿಕೆ, ನಿಯತಕಾಲಿಕೆಗಳ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಇವರ ಲೇಖನಿಗಿರುವ ಸಹಜ ಭಾವುಕತೆ, ಗಾಢ ತನ್ಮಯತೆಗಳು ವಾಚಕರನ್ನು ಸಾಹಿತ್ಯದ ಪಾತ್ರಗಳಲ್ಲಿ ಏಕೀಕೃತರನ್ನಾಗಿಸಿ ಸಂಮೋಹಕ್ಕೆ ಒಳಗುಮಾಡುವ ಕಲೆ ಅಮೃತಾರಿಗೆ ಕರಗತವಾಗಿತ್ತು.

ಅಮೃತಾ ಬಹಳಷ್ಟು ಸಲ ದೇಶ-ವಿದೇಶಗಳ ಪ್ರವಾಸವನ್ನೂ ಕೈಗೊಂಡಿದ್ದಾರೆ. ಈ ವಿಸ್ತೃತ ಪ್ರವಾಸಗಳ ಫಲವಾಗಿ ಅವರು "ಇಕ್ಕೀಸ್ ಪತ್ತಿಯೇ ಕಾ ಗುಲಾಬ್" (ಇಪ್ಪತ್ತೊಂದು ದಳಗಳ ಗುಲಾಬಿ) ಎಂಬ ಅವರ ೧೯೬೮ರ ಕೃತಿಯಲ್ಲಿ ಬಲ್ಗೇರಿಯಾ, ರಷಿಯಾ, ಯುಗೋಸ್ಲೊವಿಯಾ, ಹಂಗೇರಿ, ರುಮೇನಿಯಾ ಮತ್ತು ಜರ್ಮನಿ ದೇಶಗಳಿಗೆ ಕೈಕೊಂಡ ಪ್ರವಾಸದ ದಿನಚರಿಯನ್ನು ಪ್ರಸ್ತುತಪಡಿಸಿದ್ದಾರೆ. ಅವರ ಮತ್ತೊಂದು ಕೃತಿ "ಅತೀತ್ ಕೀ ಪರಛಾಯಿಯಾಂ" (೧೯೬೨) ಅಂದರೆ "ಅತೀತದ ನೆರಳುಗಳು." ಈ ಕೃತಿಯಲ್ಲಿ ದೇಶ ವಿದೇಶಗಳಲ್ಲಿ ನೆಲೆಸಿರುವ ಲೇಖಕರು, ಬರಹಗಾರರ ಬದುಕು ಹಾಗೂ ಸಾಹಿತ್ಯವನ್ನು ಕುರಿತ ಸ್ಮೃತಿಚಿತ್ರಗಳಿವೆ. ಇವರ "ರಶೀದಿ ಟಿಕೆಟ್" ಮತ್ತು "ಮೈ ಜಮಾತು" ಕೃತಿಗಳು ಆತ್ಮಚರಿತ್ರೆಗಳಾಗಿವೆ.

ಆಳವಾದ ಅಧ್ಯಯನ, ದೇಶ ವಿದೇಶಗಳ ಪ್ರವಾಸ ಮತ್ತು ಸ್ಥಳೀಯ ಸಮಸ್ಯೆಗಳು ಅಮೃತಾರನ್ನು ಮತ್ತಷ್ಟು ಪಕ್ವಗೊಳಿಸಿದವು. ಬಹಳ ಅಪರೂಪದ ಪ್ರಯೋಗಗಳನ್ನು ಮಾಡಿದ್ದು ಅವರ ಕೃತಿ "ಕಾಗಜ್ ಔರ್ ಕ್ಯಾನವಾಸ್." ಈ ಕವನ ಸಂಕಲನಕ್ಕೆ ೧೯೮೧ರ ಜ್ಞಾನಪೀಠ ಪ್ರಶಸ್ತಿಯನ್ನು ಸಹ ಪಡೆದರು. ಜನಪದ ಛಂದಸ್ಸು, ಲಾವಣಿಯ ಮಟ್ಟುಗಳ ಒಡನೆ ಮುಕ್ತ ಛಂದಸ್ಸುಗಳ ಸಂಯೋಜನೆ ಇವು ಇಲ್ಲಿಯ ವೈಶಿಷ್ಟ್ಯ. ಪಂಜಾಬಿನ ಜನಜೀವನದ ವಿವಿಧ ಮುಖಗಳನ್ನು ಅವರು ತಮ್ಮ ವಿವಿಧ ಕೃತಿಗಳಲ್ಲಿ ತೆರೆದಿಟ್ಟಿದ್ದಾರೆ.

ಮಹಿಳೆಯರ ಅಭಿಮಾನದ ರತ್ನ, ಶತಮಾನದ ಕವಯಿತ್ರಿ, ಅಮೃತಾ ಪ್ರೀತಂರವರು ಮೊಟ್ಟ ಮೊದಲು ಹೊರತಂದ ಕೃತಿ "ಲಾಮಿಯಾ ವತನ್" (೧೯೪೮). ೧೯೫೬ರಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಅವರ ಕೃತಿ "ಸುನಹರೇ." ಪಿಂಜರಾ, ಬಂದ-ದರ್ವಾಜಾ, ರಂಗ್ ಕಾ ಪತ್ತಾ, ಧರ್ತೀದಿಲ್ಲಿ ಕಿ ಗಲಿಯಾಂ, ಜಲಾ ವತನ್, ಇವು ಅವರ ಮುಖ್ಯವಾದ ಕಾದಂಬರಿಗಳಾಗಿವೆ. ಆಖಿರೀ ಖತ್

ಮತ್ತು ಎಕ್ ಲಡ್ಕಿ ಎಕ್ ಶಾಪೆ ಎಂಬ ಸಣ್ಣ ಕತೆಗಳ ಸಂಕಲನದಲ್ಲಿ ಮೂವತ್ತಾರು ಅತ್ಯುತ್ತಮ ಕಥೆಗಳಿವೆ. ಪಂಜಾಬಿನ ವಿಭಿನ್ನ ಸಾಮಾಜಿಕ ಸ್ತರಗಳನ್ನು ಸಂಕ್ಷಿಪ್ತವಾಗಿ, ಚೊಕ್ಕಟವಾಗಿ ಸೆರೆಹಿಡಿಯುವ ಪ್ರಯತ್ನ ಇದಾಗಿದೆ.

ಸ್ತ್ರೀ ಶೋಷಣೆ ಮತ್ತು ಬಂಡವಾಳಶಾಹಿ ವ್ಯವಸ್ಥೆ ವಿರುದ್ಧ ಬಂಡೆದ್ದು ಬರೆದ ಕವನ ಸಂಕಲನಗಳೆಂದರೆ ''ಪತ್ತರೆ ಗೀತೆ'' ಮತ್ತು ''ಲಾಮ್ ತಾನ್ ಮೌನ್.'' ಈ ಪ್ರಸಿದ್ಧ ಪಂಜಾಬಿ ಕವಯಿತ್ರಿಯ ಆತ್ಮಕಥೆಯನ್ನು ಅವರು ''ರಶೀದಿ ಟಿಕೇಟ್'' ನಲ್ಲಿ ಬರೆದುಕೊಂಡಿದ್ದಾರೆ. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಯಶಸ್ವಿ ಬರಹಗಾರ್ತಿಯಾಗಿರುವ ಅಮೃತಾ ಪ್ರೀತಂ ಐವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಕವಯಿತ್ರಿಯಾಗಿ ಛಾಪು ಮೂಡಿಸಿದ ಅಮೃತಾ ಸಾಹಿತ್ಯ ಕ್ಷೇತ್ರದಲ್ಲಿ ಅನೇಕ ಮೊದಲುಗಳನ್ನು ಸ್ಥಾಪಿಸಿದ ಕಾವ್ಯ ಲೋಕದ ಸಾಮ್ರಾಜ್ಞಿಯಾಗಿದ್ದಾರೆ.

ಅಮೃತಾ ಪ್ರೀತಂರವರು ಅನೇಕ ಸಲ ಕನಸಿನಲ್ಲಿಯೇ ಕವನಗಳನ್ನು ರಚಿಸಿದ್ದುಂಟು ಎಂದು ಹೇಳುತ್ತಾರೆ. ಹಲವು ಬಾರಿ ಅವರ ಕವನಗಳು ನಮ್ಮನ್ನು ಅಂತಃಪ್ರಜ್ಞೆಗೆ ಒಯ್ಯುತ್ತವೆ. ಕನಸಿನಲ್ಲಿ ರಚಿಸಿದ ಕವನಕ್ಕೆ ಅವರು ಎದ್ದು ಇನ್ನಷ್ಟು ಸೇರಿಸಿ, ಕಾಗದದ ಮೇಲೆ ಬರೆದಿಟ್ಟು, ಮತ್ತೆ ಮಲಗುತ್ತಿದ್ದರಂತೆ. ಹಾಗೆ ರಚಿಸಿದ ಕವನದ ಕೆಲವು ಸಾಲುಗಳು ಇಂತಿವೆ:

*ಬಾವಿಯ ಹಗ್ಗದಂತೆ ಅವಳೊಂದು ಕವನ*
*ಮೇಲೆ, ಕೆಳಗೆ ಪುಟಿ ನೆಗೆದಳು*
*ತಾನು ತುಂಬಿದ ಕೊಡಗಳಿಂದ*
*ಒಣಗಿದ ಆತ್ಮಗಳ ಮೇಲೆರೆದಳು*
*ನೀರು ತುಂಬಿದ ಕೊಡದಂತೇ ಅವಳು ಹೊರಸೂಸಿದಳು*
*ಆತ್ಮದ ಹಸಿರು ಎಲೆಯ ಪೀಳಿಗೆ ತಾ ಬೆಳೆಯಿತು.*

ಕಾವ್ಯ ಸೃಷ್ಟಿಯೆಂದರೆ ಅದೊಂದು ದೀರ್ಘ ಪಯಣವೆಂದು ಅವರು ಗುರುತಿಸಿದರು. ಬೇರಿನಿಂದ ಜಾಗೃತಕ್ಕೆ, ಕನಸಿನಿಂದ ವಾಸ್ತವಕ್ಕೆ, ಶಬ್ದದಿಂದ ಕಾವ್ಯಕ್ಕೆ, ಕಾವ್ಯದಿಂದ ಅರ್ಥಕ್ಕೆ ಈ ಪಯಣ ಸಾಗಬೇಕು ಎನ್ನುತ್ತಾರೆ. ಈ ಪಯಣದಲ್ಲಿ ಶತಮಾನಗಳಿಂದಲೂ ಬಿಡಿಸಲಾರದ ಅನೇಕ ಇತಿಹಾಸಗಳಿವೆ, ಸಮಸ್ಯೆಗಳಿವೆ. ಆ ಕುರಿತು ರಚಿಸುವ ಕಾವ್ಯವೇ ನಮ್ಮ ಮುಂದಿರುವ ಚೈತನ್ಯ ಪಯಣ ಎಂದು ನಂಬುತ್ತಾರೆ ಅಮೃತಾ.

*ನಂಬಿಗೆಯನ್ನು ನಾ ನಿನಗೆ ಮರಳಿ ತಂದಿರುವೆ*
*ನಿನ್ನ ನಾಲ್ಕು ದೀಪಗಳು ಬೆಳಗುತ್ತ ಇರಲಿ*
*ಐದನೆಯ ದೀವಿಗೆಯ ಹಚ್ಚಲೆಂದೇ ಬಂದಿರುವೆ.*

ತಮ್ಮ ಬಾಳ ಪಯಣವನ್ನು ಚೈತನ್ಯದ ದೀವಿಗೆಯಾಗಿ ಗುರುತಿಸಿಕೊಂಡಿರುವ ಈ ಶತಮಾನದ ಕವಯಿತ್ರಿ, ೨೦ನೇ ಶತಮಾನದ ಮೇಲೆ ಅಚ್ಚಳಿಯದ ಛಾಪು ಮೂಡಿಸಿದ್ದಾರೆ. ಪೃಥ್ವಿಯ ಸುತ್ತ ಇರುವ ರಹಸ್ಯಗಳು ಎಷ್ಟೋ ಸಲ ಬುದ್ಧಿಗೆ ನಿಲುಕುವುದಿಲ್ಲ. ಹಾಗೆಯೇ ಮಾನವನ ಸುತ್ತ ಮಾಯಾಜಾಲ ಹೆಣೆಯುವ ಚತುರ ಕಲ್ಪನಾ ವಿಲಾಸಿನಿ ಆಗಿದ್ದಾರೆ ಅಮೃತಾ.

ಸನಾತನ ಶಕ್ತಿಯ ಎದುರು ನಿಂತು ಪ್ರೀತಂ ಹೀಗೆ ನುಡಿಯುತ್ತಾರೆ :

*ದೇವರೆ ಆಕಾಶಗಂಗೆಯಿಂದ ಹಾಯ್ದು ಹೋಗುವ*
*ತಾರೆಗಳೆಲ್ಲ ನಿನ್ನ ನೇಸರನ ಬಳಿಗೆ ಬಂದಾಗ*
*ಪ್ರತಿಯೊಂದು ಚುಕ್ಕೆಯಲ್ಲಿ ಮೂಡಿರುವ*
*ನನ್ನ ಹಂಬಲದ ಆಳವೆಂದು ತಿಳಿ*

ಈ ಕುರಿತು ಶತಮಾನಗಳಿಂದ ಬಹಳಷ್ಟು ಬರಹಗಳು ಬಂದಿವೆ. ಬರುತ್ತಲಿವೆ. ಕಲ್ಪನೆಯನ್ನು ಕೆಣಕಿ ಅತೀತವನ್ನು ತಲುಪುವುದು ವಿಶ್ವಶಕ್ತಿಯ ಕೆಲವೇ ಕೆಲವು ಅಸ್ತಿತ್ವಗಳಿಗೆ ಮಾತ್ರ ಸಿದ್ಧಿಸಿದೆ. ಅಂತಹ ಸಿದ್ಧಿ ಸಾಧಿಸಿದವರು ಅಮೃತಾ ಪ್ರೀತಂ. ಒಂದು ಕಡೆ ಅಮೃತಾರವರು ಭಾವನೆಗಳನ್ನು ಈ ರೀತಿ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ: ''ಯಾರ ಮನವೆಂಬ ರೆಂಬೆಯಿಂದ ಎಲೆಗಳು ಉದುರಿವೆಯೋ ಅವನು ಕಾಣುವ ವೈದಿಕ ಗ್ರಂಥಗಳು, ಇವೆಲ್ಲ ಹೊತ್ತಿಗೆಗಳು ಒಂದೇ ರೆಂಬೆಯಿಂದ ಬಿದ್ದ ಎಲೆಗಳಾಗಿವೆ. ಇಂತಹ ಕಲ್ಪನೆಗಳು ಒಬ್ಬರ ಶಕ್ತಿಯ ಅಂಶವಾಗಿವೆ. ಇಂತಹ ಕಲ್ಪನೆಯೇ ಕಾವ್ಯ.''



ಚಿತ್ರ ಕೃಪೆ : ದಿ ಹಿಂದು

*ಗಾಳಿಯ ತುಟಿಗಳು*
*ಮೆಲು ಮಾತಾಡುತ್ತಿದ್ದವೋ ಏನೋ*
*ನನ್ನೆದುರು ಯಾರೂ ಇದ್ದಿಲ್ಲ*
*ಆದರೆ ದನಿ ಮಾತ್ರ ಕೇಳಿತು.*
*ಕೇಳು ಹೋದ ಜನ್ಮದಲಿ ಬರೆದ*
*ನಿನ್ನ ಸಮಾಧಿ ಲೇಖನವಿದು*
*ಈ ಚರಮ ಗೀತೆಯನ್ನು*
*ಯಾರು ಬರೆದರೊ ಗೊತ್ತಿಲ್ಲ*
*ಎಲ್ಲಿ ಮೂಡಿದೆ?*
*ಆದರೆ, ಆ ಶೋಕಗೀತೆ ಕೇಳಿದೆ*
*ಅದರ ಶಬ್ದಗಳು ಸುಳಿದಾಡಿದವು*
*ಎದ್ದ ಮೇಲೆ ಕಾಗದದ ಮೇಲೆ ಬರೆದೆ*

ಎಂದು ಹೇಳುವ ಅಮೃತಾ ಅದ್ಭುತ ಕನಸುಗಾರ್ತಿ, ಅಷ್ಟೇ ಸಮರ್ಥವಾಗಿ, ಪ್ರಬಲವಾಗಿ ಅದನ್ನು ರಚಿಸುವ ಕುಶಲ ಕವಯಿತ್ರಿ.

*ಸುಪ್ತ ಚೇತನದ ಲವಲೇಶಗಳ ಮೇಲೆ ಅಲೆಯುವಾಗ*
*ಹಲವು ನಿಮಿಷ ಗಮನಿಸಿದೆ. ಹೌದು ನಿಮಿಷಗಳು.*
*ಹತಾಶಾ ಬಹುಶಃ ನಡಗುತ್ತ*
*ಹವೆಯಲ್ಲಿ ಗೆಡ್ಡೆಗಟ್ಟಿ ನಿಂತೆ*
*ಅವುಗಳ ಅಡಿಯಲ್ಲಿ ಅಲ್ಲಿಯೇ*
*ಕಲ್ಲಾಗಿ ನಿಂತವು*
*ನಂತರ, ಅವುಗಳ ನೆರಳು ಬೆಳೆದವು*
*ಕಲ್ಲ ಬೆನ್ನ ಮೇಲೆ ಪಾಚಿಯಂತೆ ಅಂಟಿದವು*
*ಒಂದೆಡೆಗೆ ತಾಪಸನ ಗುಹೆಯ ಮುರಿದ ಗೋಡೆ*
*ನನ್ನ ಬೆರಳ ತುದಿ ಎಲ್ಲ ಕಲ್ಲುಗಳನ್ನು ಮುಟ್ಟಿದವು*
*ಮೊದಲು ನಕ್ಕವು ಆಮೇಲೆ ಅತ್ತವು.*
*ಎಲ್ಲೆ ದೇವನೇ ಏನಾಯಿತು*
*ಯಾವ ಚೈತನ್ಯವು*
*ನಾಶಗಳಿಂದ ಈಗ ಮರಳಿದೆ*
*ನನ್ನ ಕೈ ಕಾಲುಗಳು ಸೆಳೆಯತೊಡಗಿವೆ,*
*ಅನೇಕ ಜನ್ಮಗಳ ಪಯಣದಿಂದಲೋ ಎಂಬಂತೆ*
*ಒಂದೇ ಉಸಿರಿನಲಿ ಅನೇಕ ಕಾಲ ಖಂಡಗಳಲ್ಲಿ*

ಎಂದು ಕನಸಿನಲ್ಲಿ ಅಲೆದಾಡುವ ಶತ ಶತಮಾನಗಳ ಆತ್ಮದ ಕೆಲವು ನಿಶಾಚರಿ ಕವಿತೆಗಳು ಅವರವು. ಈ ಕವನದಲ್ಲಿ ಜನ್ಮ ಜನ್ಮಾಂತರಗಳಲ್ಲಿ, ಅನೇಕ ಸಲ ಸುಳಿದಾಡುವ, ಅಲೆದಾಡುವ ಅನುಭವವು ಶಬ್ದಗಳ ಬಂಧಿಯಾಗಿದೆ. ಇದಕ್ಕೆ ಸೀಮೆ ಅಥವಾ ಗಡಿಯಿಲ್ಲ. ಸೀಮಾತೀತವಾದ ಅನಂತವಾದ ಅನುಭವಗಳನ್ನು ಹಿಡಿ ಶಬ್ದಗಳಲ್ಲಿ ಹಿಡಿದಿಡುವುದು ಈ ಮಾಟಗಾತಿಯ ಕವನಗಳು.

*ನಾನಲ್ಲಿ ಇದ್ದೆ ಬಹುಶಃ ನೀನೂ ಸಹ*
*ಉಸಿರನ್ನು ಕೂಡ ಬಿಡದೆ*
*ಕನಸಿನ ಕತ್ತಲೆಯಲಿ ಹಾರಿ ಬಂದು*
*ಬಹುಶಃ ಚೈತನ್ಯದ ತಿರುವಿನ ಮೇಲೆ ತಿರುಗುತ್ತ*
*ಆದರೆ ಅದೊಂದು ಇತಿಹಾಸಕ್ಕಿಂತ ಮೊದಲಿನ ಕತೆ.*

ಸೃಷ್ಟಿಯ ಎಷ್ಟೊಂದು ನಿಗೂಢ ರಹಸ್ಯಗಳನ್ನು ತಮ್ಮ ಸುಪ್ತ ಚೇತನದ ಮೂಲಕ ಕಾವ್ಯದಲ್ಲಿ ಜಗತ್ತಿನ ಮುಂದೆ ತೆರೆದಿಡುವ ಈ ಮಹಾನ್ ಕವಯಿತ್ರಿಯ ಕಾವ್ಯ ಅವರಿಗೆ ಶತಮಾನದ ಕವಿಯ ಸ್ಥಾನ ನೀಡಿದೆ.

*ಅನೇಕ ಜನ್ಮಗಳ ದ್ರೌಪದಿ ನಾನು*
*ಪಂಚಭೂತಗಳಿಂದ ನಿರ್ಮಿತ ನಾನು*
*ಆ ಎಲ್ಲ ಐದು ಮಹಾಭೂತಗಳಿಗೆ ಸಂಲಗ್ನ*
*ಜನ್ಮವೊಂದರಲ್ಲಿ ದ್ರೌಪದಿಯಾದ ನಾನು*
*ಜೂಜಿನ ನ್ಯಾಸವಸ್ತುವಿನಂತೆ*
*ರಾಜಸಭೆಗೆ ಬಂದೆ.......*
*ತುಂಬಿದ ಸಭೆಯಿಂದೆದ್ದೆ*
*ಐದನ್ನೂ ಗೆದ್ದೆ*
*ಅನೇಕ ಜನ್ಮಗಳ ದ್ರೌಪದಿ ನಾನು.*

ಎನ್ನುವ ಕಾವ್ಯ ಲೋಕದ ಕನಸುಗಾರ್ತಿ ಅಮೃತಾ ಪ್ರೀತಂ. ದೆಹಲಿ ವಿಶ್ವವಿದ್ಯಾಲಯ ಇವರಿಗೆ ಗೌರವ ಡಿ.ಲಿಟ್. ಪದವಿಯನ್ನು ನೀಡಿ ಗೌರವಿಸಿದೆ. ಇವರು ಬಲ್ಗೇರಿಯನ್ ಪ್ರಶಸ್ತಿಗಳ ಗೌರವಕ್ಕೂ ಪಾತ್ರರಾಗಿದ್ದಾರೆ. ಅಮೃತಾರ ಕೃತಿಗಳ ಕುರಿತು ಅಮೆರಿಕದ ಮಿಚಿಗನ್ ವಿಶ್ವವಿದ್ಯಾಲಯದ ಒಂದು ನಿಯತಕಾಲಿಕವು ಒಂದು ವಿಶೇಷ ಸಂಚಿಕೆಯನ್ನೇ ಹೊರತಂದಿದೆ.

ಕೆ. ಷರೀಫಾ
ಎ. ಪಿ. ಎಂ. ಸಿ, ಹರಿಹರ - ೫೭೭ ೬೦೧.

# ಸಸ್ಯಗಳಲ್ಲಿ ರಕ್ಷಣೆಯ ವಿಧಾನಗಳು

ಸಾಧ್ಯವಿದ್ದಷ್ಟೂ ಹೆಚ್ಚು ಸಂತತಿಯನ್ನು ಭೂಮಿಯ ಮೇಲೆ ಬಿಟ್ಟು ಹೋಗುವುದೇ ಒಂದು ಜೀವಿಯ ಕಟ್ಟಕಡೆಯ ಗುರಿ ಎಂಬುದು ಹಲವು ಜೀವಶಾಸ್ತ್ರಜ್ಞರ ಅಭಿಪ್ರಾಯ. ಕಾಲಮಿತಿಯಲ್ಲಿ ಅಳಿಯದೇ ಉಳಿಯಲು ಒಂದು ಜೀವಿ ಸಾಧ್ಯವಿದ್ದಷ್ಟು ಅಧಿಕ ಸಂತಾನೋತ್ಪತ್ತಿ ಮಾಡುತ್ತದೆ. ಇದು ಕಠಿಣವೆನಿಸಿದರೂ ಬ್ಯಾಕ್ಟೀರಿಯಾ, ಪರಾವಲಂಬಿ ಕೀಟವರ್ಗಗಳಲ್ಲಿ ಮಿತಿ ಮೀರಿದ ಸಂತಾನೋತ್ಪತ್ತಿ ಸಾಮಾನ್ಯ.

ಬ್ಯಾಕ್ಟೀರಿಯಾಗಳು ಪ್ರತೀ ೨೦ ನಿಮಿಷಗಳಿಗೊಮ್ಮೆ ವಿಭಜನೆಗೊಂಡು ಒಂದೇ ದಿವಸದಲ್ಲಿ ಮಿಲಿಯಗಟ್ಟಲೆ ಸಂಖ್ಯೆಗೇರುತ್ತವೆ. ಕೀಟಜಾತಿಗಳಲ್ಲಿ ರಾಣಿ ಜೇನುನೊಣ ದಿನವೊಂದಕ್ಕೆ ೨,೦೦೦ ಮೊಟ್ಟೆಗಳನ್ನಿಟ್ಟರೆ, ಗೆದ್ದಲು ರಾಣಿ ೭,೦೦೦ದಷ್ಟು ಮೊಟ್ಟೆಗಳನ್ನಿಡುತ್ತದೆ. ನೈಸರ್ಗಿಕ ವಿಪತ್ತು ಮತ್ತು ಸ್ವಾಭಾವಿಕ ಶತ್ರುಗಳಿಂದ ಸಂತತಿ ನಾಶವಾಗುವುದಿದ್ದರೂ ಅವು ತಮ್ಮ ಸಂಖ್ಯಾ ಬಲವನ್ನು ಉಳಿಸಿಕೊಳ್ಳುತ್ತವೆ. ಜೀವ ಉಳಿಸಿಕೊಳ್ಳುವ ಹಲವಾರು ರಕ್ಷಣಾ ವಿಧಾನಗಳು ಪ್ರಕೃತಿಯಲ್ಲಿವೆ. ವಿನಾಶದ ಅಂಚಿನ ಕೊನೆಯ ಹೋರಾಟದಲ್ಲಿ ಜೀವಿಗಳು ಹೊಸ ಚೈತನ್ಯ ಮತ್ತು ಕೌಶಲ್ಯಗಳನ್ನೊಳಗೊಂಡ, ಊಹೆಗೆ ಮೀರಿದ ಸಾಹಸಕಾರ್ಯಗಳನ್ನು ಪ್ರದರ್ಶಿಸುತ್ತವೆ. ಕಾದಾಟ ಅಥವಾ ಪಲಾಯನ ಅತೀ ಸಾಮಾನ್ಯವಾದ ರಕ್ಷಣಾ ವಿಧಾನ.

ಚಲನೆಯೇ ಇಲ್ಲದ ಸಸ್ಯಗಳಿಗೆ ಪಲಾಯನ ಸಾಧ್ಯವಿಲ್ಲ. ಸಸ್ಯಗಳ ಈ ನ್ಯೂನತೆಯನ್ನು ಗುರುತಿಸಿ ಸಸ್ಯಾಹಾರಿಗಳು ಅವುಗಳ ಬೇರು, ಕಾಂಡ, ತೊಗಟೆ, ಬೀಜ, ಎಲೆ, ಹಣ್ಣುಗಳನ್ನು ತಿನ್ನುತ್ತವೆ. ಈ ಜೀವಿಗಳಿಂದ ರಕ್ಷಣೆ ಪಡೆಯಲು ಸಸ್ಯಗಳೂ ಕೆಲವು ರಕ್ಷಣಾ ಕ್ರಮಗಳನ್ನು ಹೊಂದಿವೆ. ಚುಚ್ಚುವ ಮುಳ್ಳುಗಳು, ಕಹಿ ರುಚಿ, ಒಗ್ಗದಿರುವ ವಾಸನೆ ಕೆಲವು ವೈರಿಗಳನ್ನು ದೂರವಿರಿಸುತ್ತವೆ. ಮನುಷ್ಯ ತನ್ನ ದಿನನಿತ್ಯದ ಅನುಭವದಿಂದ ತಿನ್ನಲು ಯೋಗ್ಯವಾದ ಸಸ್ಯಗಳು ಯಾವುದೆಂಬುದನ್ನು ಕಂಡುಕೊಂಡಿದ್ದಾನೆ.

ಸಸ್ಯಗಳ ರಕ್ಷಣಾ ವಿಧಾನದಲ್ಲಿ ಕೆಲವು ರಾಸಾಯನಿಕ ವಸ್ತುಗಳು ನಿರ್ಣಾಯಕ ಪಾತ್ರ ವಹಿಸುತ್ತವೆ. ಉದಾಹರಣೆಗೆ, ಬೇವಿನ ಎಲೆ ಕಹಿಯಾಗಿದೆ. ಈ ಎಲೆಗಳನ್ನು ತಿಂದ ಕೀಟಗಳು ಹಸಿವನ್ನು ಕಳೆದುಕೊಂಡು ಸಾವನ್ನಪ್ಪುತ್ತವೆ. ಕೆಲವು ದ್ವಿದಳ ಧಾನ್ಯಗಳಲ್ಲಿ ಪಚನ ಕ್ರಿಯೆಗೆ ನೆರವಾಗುವ ಕಿಣ್ವಗಳನ್ನು ನಿಷ್ಕ್ರಿಯಗೊಳಿಸುವ ರಾಸಾಯನಿಕಗಳಿವೆ. ಸೋಯಾ ಅವರೆಯಲ್ಲಿ ಟ್ರಿಪ್ಸಿನನ್ನು ತಡೆಗಟ್ಟುವ ಅಣುಗಳಿವೆ.

ಸಸ್ಯ ಭಕ್ಷಕಗಳು ಸಸ್ಯಗಳ ಈ ರಕ್ಷಣೋಪಾಯಗಳನ್ನು ನಿವಾರಿಸಿಕೊಳ್ಳುವ ವಿಧಾನಗಳನ್ನು ಅನುಸರಿಸುತ್ತವೆ. ಕೀಟಗಳು ವಿಷವಸ್ತುಗಳನ್ನು ನಿಷ್ಕ್ರಿಯಗೊಳಿಸುವ ವಿಧಾನವನ್ನು ಕಂಡುಕೊಂಡಿವೆ. 'ನನ್ನ ಶತ್ರುವಿನ ಶತ್ರು ನನ್ನ ಮಿತ್ರ' ಎಂಬ ತತ್ವವನ್ನು ಸಸ್ಯಗಳು ತಮ್ಮ ರಕ್ಷಣೆಯಲ್ಲಿ ಉಪಯೋಗಿಸಿಕೊಳ್ಳುತ್ತವೆ. ಭಕ್ಷಕರಿಂದ ರಕ್ಷಿಸಿಕೊಳ್ಳಲು ಸಸ್ಯಗಳು ಪರಭಕ್ಷಕಗಳ ನೆರವು ಪಡೆಯುತ್ತವೆ ಎಂಬುದು ಫ್ಲಾರಿಡಾದ ಡಾ॥ ಜೇಮ್ಸ್ ಟಿಮ್ಲಿನ್ಸನ್ ಮತ್ತು ಸಂಗಡಿಗರ ಸಂಶೋಧನೆಗಳಿಂದ ಕಂಡುಬಂದಿದೆ.

ಮೆಕ್ಕೆಜೋಳದಲ್ಲಿರುವ ಒಂದು ಸುಗಂಧಿತ ಟರ್ಪಿನ್ನಾಯ್ಡ್ ರಾಸಾಯನಿಕವು ಪರಾವಲಂಬಿ ಕಣಜಗಳನ್ನು ತನ್ನತ್ತ ಆಕರ್ಷಿಸುತ್ತದೆ. ಈ ಕಣಜಗಳು ಸಸ್ಯಕ್ಕೆ ಹಾನಿ ಮಾಡುವ ಹುಳುಗಳನ್ನು ಸುಲಭವಾಗಿ ಪತ್ತೆ ಹಚ್ಚಿ ಅವುಗಳನ್ನು ನಾಶಮಾಡುತ್ತವೆ. ಈ ಗುಳ್ಳೆಗಳ ಜೊಲ್ಲಿನಲ್ಲಿರುವ 'ವೊಲಿಸಿಟಿನ್' ಎಂಬ ಅಣುವನ್ನು ಬೇರ್ಪಡಿಸಲಾಗಿದೆ. ಅಂತಃಸ್ರಾವದಂತೆ ಕೆಲಸ ಮಾಡುವ ವೊಲಿಸಿಟಿನ್ ಹುಳುಗಳಿಗೆ ರಕ್ಷಣೆ ನೀಡುತ್ತದೆ !

ಸಂಶೋಧನೆಗಳು ಮುಂದುವರಿದಂತೆಯೇ ಇನ್ನಷ್ಟು ರಹಸ್ಯಗಳು ಬಯಲಾಗುತ್ತವೆ. ಕೆಲವು ಸಂದರ್ಭಗಳಲ್ಲಿ ಸತ್ಯಾಂಶಗಳು ಕಟ್ಟು ಕಥೆಗಳಿಗಿಂತಲೂ ಕುತೂಹಲಕಾರಿಯಾಗಿರುತ್ತವೆ !

**ಡಾ॥ ಶಿವರಾಮ ರೈ**
ನಂ. ೧೬, ಗುರುಪ್ರಸಾದ ಲೇನ್, ಕಂಕನಾಡಿ, ಮಂಗಳೂರು - ೫೭೫ ೦೦೨

# ವಸ್ತುನಿಷ್ಠ ಶಿಕ್ಷಣಕ್ಕೆ ಕುತ್ತು

ಎಚ್. ಎಸ್. ದೊರೆಸ್ವಾಮಿ

ಶಿಕ್ಷಣ ನಾಗರಿಕತೆಯ ಒಂದು ವರ. ನಮ್ಮ ದೇಶ ಅಜ್ಞಾನದ ಕತ್ತಲೆಯಲ್ಲಿ, ಬಡತನದ ಬವಣೆಯಲ್ಲಿ ೧೯ನೆಯ ಶತಮಾನದಲ್ಲಿ ಮುಳುಗಿತ್ತು. ಆಗ ಆಧುನಿಕ ಶಿಕ್ಷಣ ಪದ್ಧತಿ ಜಾರಿಗೆ ಬಂದಿತು. ಆ ಪರ್ವ ಕಾಲದಲ್ಲಿ ರಾಜಾ ರಾಮ್‌ಮೋಹನ್ ರಾಯ್, ಈಶ್ವರ ಚಂದ್ರ ವಿದ್ಯಾಸಾಗರ್, ಮುಂತಾದ ಮಹನೀಯರು ಜನಸಾಮಾನ್ಯರ ಜ್ಞಾನದ ಮಟ್ಟ ಹೆಚ್ಚಬೇಕಾದರೆ ಮತ್ತು ಆರ್ಥಿಕ ಅಭಿವೃದ್ಧಿ ಆಗಬೇಕಾದರೆ, ಜನರ ಜಾತಿ ಮತ್ತು ಧರ್ಮ, ಆರ್ಥಿಕ ಪರಿಸ್ಥಿತಿ ಯಾವುದೇ ಇರಲಿ, ಎಲ್ಲರಿಗೂ ಆಧುನಿಕ ಶಿಕ್ಷಣ ದೊರೆಯಬೇಕೆಂದು ಸಾರಿದರು. ಅವರ ಪ್ರಯತ್ನದಿಂದ ಸ್ವಲ್ಪಮಟ್ಟಿಗೆ ನಮಗೆ ಜಾತ್ಯತೀತ, ವೈಜ್ಞಾನಿಕ, ಪ್ರಜಾಸತ್ತಾತ್ಮಕ ಶಿಕ್ಷಣ ದೊರೆಯುವಂತಾಯಿತು.

ಸ್ವಾತಂತ್ರ್ಯ ಪ್ರಾಪ್ತವಾದ ಈ ೫೩ ವರ್ಷಗಳ ನಂತರ ನಮ್ಮ ಶಿಕ್ಷಣ ನೀತಿಯನ್ನು ಪರಿಗಣಿಸಿದರೆ, ಶಿಕ್ಷಣದ ಖಾಸಗೀಕರಣ, ವ್ಯಾಪಾರೀಕರಣ ವ್ಯಾಪಕವಾಗಿ ಹರಡುತ್ತಿದೆ. ಇದುವರೆಗೆ ತಾಂತ್ರಿಕ ಶಿಕ್ಷಣ, ಮತ್ತು ವೈದ್ಯಕೀಯ ಶಿಕ್ಷಣಕ್ಕೆ ಸೀಮಿತವಾಗಿದ್ದ ಈ ಪಿಡುಗು ಈಗ ವಿಜ್ಞಾನ, ಕಲೆ, ವಾಣಿಜ್ಯ ಕಾಲೇಜುಗಳಿಗೂ ವ್ಯಾಪಿಸಿದೆ. ಸರ್ಕಾರಿ ಕಾಲೇಜು, ಪ್ರೌಢಶಾಲೆಗಳಿಗೂ ಪ್ರವೇಶ ಧನ ವಿಧಿಸಲಾಗಿದೆ. ಖಾಸಗಿ ಕಾಲೇಜ್ ಮತ್ತು ಪ್ರೌಢ ಶಾಲೆಗಳಲ್ಲಿ ವಸೂಲ್ಮಾಡುವ ಹಣದಲ್ಲಿ ಇಂತಿಷ್ಟು ಹಣ ಸರ್ಕಾರಕ್ಕೆ ಸಲ್ಲಿಸಬೇಕೆಂದು ಷರತ್ತು ಹಾಕಲಾಗಿದೆ. ಹೀಗಾಗಿ ಈಗ ಶಿಕ್ಷಣ ಎಲ್ಲ ಹಂತಗಳಲ್ಲೂ ವ್ಯಾಪಾರದ ಒಂದು ಸರಕಾಗಿದೆ.

ಇಷ್ಟೇ ಅಲ್ಲದೆ ಬಿ. ಜೆ. ಪಿ. ನೇತೃತ್ವದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಶಿಕ್ಷಣವನ್ನು ಹಿಂದುತ್ವಕ್ಕೆ ಒಗ್ಗಿಸಲು, 'ಆಧ್ಯಾತ್ಮೀಕೃತ'ಗೊಳಿಸಲು ಹೊರಟು ಇತಿಹಾಸವನ್ನು ತಿರುಚಿಹಾಕುವ ಸನ್ನಾಹ ನಡೆಸಿವೆ.

ಕರ್ನಾಟಕ ಮತ್ತು ಇತರೆ ರಾಜ್ಯಗಳಲ್ಲಿ ಎರಡು ದಶಕಗಳ ಹಿಂದೆ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ಖಾಸಗಿ ಕಾಲೇಜುಗಳಲ್ಲಿ ತಲೆದಂಡ (ಕ್ಯಾಪಿಟೇಶನ್ ಶುಲ್ಕ) ವಸೂಲು ಮಾಡಲು ಪ್ರಾರಂಭವಾಯಿತು. ಆಗ ವಿದ್ಯೆಯ ಪಕ್ಷಪಾತಿ ಸಮೂಹ ಈ ಬೆಳವಣಿಗೆಯನ್ನು ತಿರಸ್ಕಾರ ಭಾವನೆಯಿಂದ ನೋಡಿತು. ಈ ಪದ್ಧತಿ ಶ್ರೀಮಂತರಿಗಾಗಿ, ದುಷ್ಟ ಮಾರ್ಗದಲ್ಲಿ ಮೇಲೇರಿ ಬರುವವರಿಗಾಗಿ ಆರಂಭಿಸಲಾದ ದಂಧೆ ಎಂದು ಗುರುತಿಸಲಾಯಿತು.

ಸರ್ಕಾರ ಈ ದುಷ್ಟ ಪದ್ಧತಿಯನ್ನು ತಡೆಗಟ್ಟುವ ಬದಲು, ಖಾಸಗಿಯವರಿಗೆ ತಮ್ಮ ಸಾಧನ ಸಂಪತ್ತನ್ನು ಬೆಳೆಸಿಕೊಳ್ಳಲು ಅವಕಾಶ ಕಲ್ಪಿಸಲು ತಲೆದಂಡ ಹಾಗೂ ಶಿಕ್ಷಣ ಶುಲ್ಕಗಳನ್ನು ಏರಿಸಬೇಕೆಂದು ಸಲಹೆ ಮಾಡಿತು. ಸರ್ಕಾರದ ಉದ್ದೇಶ ಶಿಕ್ಷಣ ವಿಚಾರಕ್ಕೆ ತನಗಿದ್ದ ಹೊಣೆಗಾರಿಕೆಯಿಂದ ನುಣುಚಿಕೊಳ್ಳುವುದೇ ಆಗಿತ್ತು. ಯು.ಜಿ.ಸಿ. ೧೯೯೫ರಲ್ಲಿ ಎಲ್ಲ ವಿಶ್ವವಿದ್ಯಾನಿಲಯಗಳಿಗೂ ಒಂದು ಸುತ್ತೋಲೆ ಕಳುಹಿಸಿ 'ಸಾಮಾನ್ಯವಾಗಿ ವಿದ್ಯಾಭ್ಯಾಸಕ್ಕೆ ಅದರಲ್ಲೂ ಮುಖ್ಯವಾಗಿ ತಾಂತ್ರಿಕ ಶಿಕ್ಷಣಕ್ಕೆ ನಿಗದಿಯಾಗುವ ಹಣ, ಆರ್ಥಿಕ ಸುಧಾರಣೆ ಮತ್ತು ಮಾರುಕಟ್ಟೆಯ ಉದಾರೀಕರಣಗಳ ನಿರ್ಣಾಯಕ ಗುಣವನ್ನವಲಂಬಿಸುತ್ತದೆ' ಎಂದು ಸೂಚನೆ ನೀಡಿತು.




> *ಮುಂದಿನ ವರ್ಷಗಳಲ್ಲಿ ಕೇಂದ್ರದ ಬಿ.ಜೆ.ಪಿ. ಸರ್ಕಾರವು ತರಲು ಬಯಸುವ ಸುಧಾರಣೆಯ ಸುಳಿವು ಈಗ ಸಿಕ್ಕಿದೆ :*
>
> *ಅ) ಶಿಕ್ಷಣದ ತಿರುಳನ್ನು ಎಲ್ಲ ಹಂತಗಳಲ್ಲೂ ಹಿಂದುತ್ವಕ್ಕೆ ಒತ್ತುಕೊಡುವಂತೆ ಮಾಡುವುದು;*
>
> *ಆ) ವೇದಗಳ ಅಧ್ಯಯನ, ಆಧ್ಯಾತ್ಮಿಕ ಅಧ್ಯಯನ, ವೇದಗಣಿತ, ವೇದ ವಿಜ್ಞಾನ ಇವುಗಳನ್ನು ಅವೈಜ್ಞಾನಿಕವಾಗಿ ಪಠ್ಯಕ್ರಮದಲ್ಲಿ ಸೇರಿಸುವುದು;*
>
> *ಇ) ಆರ್. ಎಸ್. ಎಸ್.ಗೆ ಬೇಕಾದ ರೀತಿಯಲ್ಲಿ ಇತಿಹಾಸವನ್ನು ಪುನರ್‌ರಚಿಸುವುದು;*
>
> *ಈ) ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಶಿಕ್ಷಣ ವ್ಯವಸ್ಥೆ ಮಾಡುವುದು;*
>
> *ಉ) ಹಿಂದು ಧಾರ್ಮಿಕ ಸಂಸ್ಥೆಗಳನ್ನು ಕಾನೂನುಬದ್ಧಗೊಳಿಸಲು ರಾಜ್ಯಾಂಗದಲ್ಲಿ ಅವಕಾಶ ಕಲ್ಪಿಸುವುದು.*

ಯು.ಜಿ.ಸಿ. ನೀಡುವ ಹಣ ಸಾಧಾರಣವಾಗಿ ಶಿಕ್ಷಕರ ವೇತನಕ್ಕೆ ಹೋಗುತ್ತದೆ. ಉಳಿದ ಹಣವನ್ನು ಕಾಲೇಜು ನಡೆಸುವ ಸಂಸ್ಥೆಗಳು ಜನತೆಯ ಸಹಕಾರದಿಂದ ಪಡೆಯಬೇಕು. ನಾಮ ಮಾತ್ರ ಸ್ವಲ್ಪ ಹಣವನ್ನು ವಿದ್ಯಾರ್ಥಿಗಳಿಂದ ಫೀಸ್ ರೂಪದಲ್ಲಿ ವಸೂಲ್ಮಾಡಬೇಕು ಎಂಬುದು ಅಂದಿನ ನೀತಿಯಾಗಿತ್ತು. ೯ನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ ಉನ್ನತ ಶಿಕ್ಷಣಕ್ಕೆ ಅನುದಾನವನ್ನು ೮ನೆಯ ಯೋಜನೆಯ ಶೇ. ೩೫ ರಷ್ಟಕ್ಕೆ ಇಳಿಸಲಾಯಿತು.

ಇದರಿಂದಾಗಿ ಅನೇಕ ಖ್ಯಾತ ವಿಶ್ವವಿದ್ಯಾನಿಲಯಗಳು, ಕಾಲೇಜುಗಳು ತಮ್ಮ ಪುಸ್ತಕ ಭಂಡಾರಗಳಿಗೆ, ಪ್ರಯೋಗಶಾಲೆಗಳಿಗೆ ಬೇಕಾದ ಪುಸ್ತಕಗಳು, ಉಪಕರಣಗಳನ್ನೂ ತರಿಸಿಕೊಳ್ಳುವುದನ್ನು ಕಡಿತಗೊಳಿಸುವುದು ಅನಿವಾರ್ಯವಾಯಿತು. ಇದುವರೆಗೆ ಬಡಹುಡುಗರೂ ಕಷ್ಟಪಟ್ಟುಕೊಂಡು ಹೈಸ್ಕೂಲ್, ಕಾಲೇಜ್ ಮೆಟ್ಟಲು ಹತ್ತಲು ಸಾಧ್ಯವಾಗುತ್ತಿತ್ತು. ಶಾಲೆ ಕಾಲೇಜುಗಳ ಶಿಕ್ಷಣದ ವೆಚ್ಚವನ್ನೆಲ್ಲ ವಿದ್ಯಾರ್ಥಿಗಳೇ ಹೊರಬೇಕಾದ ಸನ್ನಿವೇಶವನ್ನು ಈಗ ಸರ್ಕಾರ ಉಂಟುಮಾಡಿದೆಯಾಗಿ, ಇನ್ನು ಮುಂದೆ ಜನಸಾಮಾನ್ಯರಿಗೆ ತಮ್ಮ ಮಕ್ಕಳಿಗೆ ಶಿಕ್ಷಣ ಒದಗಿಸುವುದು ಅಸಾಧ್ಯವಾದೀತು. ನಾಯಿಕೊಡೆಯಂತೆ ಬೆಳೆಯುತ್ತಿರುವ ಈ ತಲೆಗಂದಾಯ ಹೇರುವ, ವಿದ್ಯಾವಿಕ್ರಯ ಮಾಡುವ ವಿದ್ಯಾಸಂಸ್ಥೆಗಳು ವ್ಯಾಪಾರಿಸಂಸ್ಥೆಗಳಾಗಿ ಪರಿವರ್ತನೆಗೊಳ್ಳುತ್ತಿವೆ. ಜನರೂ ಈ ಪರಿಸ್ಥಿತಿಗೆ ಅನಿವಾರ್ಯವಾಗಿ ಹೊಂದಿಕೊಳ್ಳುತ್ತಿರುವುದು ಒಂದು ದುರ್ದೈವ. ವೃತ್ತಿ ಶಿಕ್ಷಣ ಶಾಲೆಗಳಿಗೆ ಪ್ರವೇಶ ಬಯಸಿ ಶ್ರೀಮಂತ ವಿದ್ಯಾರ್ಥಿಗಳು ನುಗ್ಗಿಬರುತ್ತಿದ್ದಾರೆ. ಬಂಡವಾಳ ಹೂಡಿಕೆಗೆ ಈ ವಿದ್ಯಾಸಂಸ್ಥೆಗಳು ಹೇಳಿ ಮಾಡಿಸಿದಂತಿವೆ. ಮಿಕ್ಕ ಉದ್ಯಮಗಳು ನಷ್ಟಕ್ಕೊಳಗಾಗಬಹುದು. ಈ ವಿದ್ಯಾಸಂಸ್ಥೆಗಳು ಎಂದೆಂದೂ ಲಾಭದಾಯಕ ಎಂಬುದನ್ನು ಇವು ಕಂಡುಕೊಂಡಿವೆ. ಅದರಿಂದಲೇ ಇಂದು ಈ ಉದ್ಯಮಕ್ಕೆ ಬಂಡವಾಳಶಾಹಿಗಳು, ರಾಜಕೀಯ ಪುಢಾರಿಗಳು, ಮಂತ್ರಿಗಳು, ಶಾಸಕರು, ಭಾರತದ ಅನಿವಾಸಿಗಳು, ಬಿರ್ಲಾ, ರಿಲಯನ್ಸ್, ಪಿಯರ್‌ಲೆಸ್ ಮುಂತಾದ ಪಾಲುಗಾರಿಕೆ ಸಂಸ್ಥೆಗಳವರೂ ನುಗ್ಗಿಬರುತ್ತಿದ್ದಾರೆ. ಈ ಚಿನ್ನದ ಮೊಟ್ಟೆ ಇಡುವ ಶೈಕ್ಷಣಿಕ ಕೈಗಾರಿಕೆಗೆ ಬೆರಗಾದ ಒಬ್ಬ ಅಧಿಕಾರಿ ಈ ಉದ್ಯಮ ಮುಂದೆ ವಿದೇಶಿ ವಿನಿಮಯದ ಅಂತಃಸತ್ವವುಳ್ಳ ಒಂದು ಮೂಲವಾಗಬಹುದು ಎಂದು ಭವಿಷ್ಯ ನುಡಿದ. ವಿಶ್ವದ ಇತರ ರಾಷ್ಟ್ರಗಳ ಶ್ರೀಮಂತರ ಮಕ್ಕಳೂ ಭಾರತಕ್ಕೆ ವೃತ್ತಿ ಶಿಕ್ಷಣ ಪಡೆಯಲು ಬರಬಹುದು ಎಂಬುದು ಅವರ ಮಾತಿನ ಇಂಗಿತ. ಹೀಗೆ ಈಗ ಶಿಕ್ಷಣಪೂರ್ವ ಪ್ರಾಥಮಿಕದಿಂದ ಹಿಡಿದು ವೃತ್ತಿಪರ ಶಿಕ್ಷಣ ಕಾಲೇಜುಗಳವರೆಗೆ ವಾಣಿಜ್ಯೋದ್ಯಮವಾಗಿ ಬೆಳೆಯಹತ್ತಿದೆ. ಭಾರತಾದ್ಯಂತ ೧೯೮೦ರಲ್ಲಿ ಒಟ್ಟು ಸುಮಾರು ೮೦೦೦ ಕಾಲೇಜುಗಳಿದ್ದದ್ದು ಈಗ ಆ ಸಂಖ್ಯೆ ೯೦೦೦ಕ್ಕೆ ಏರಿದೆ. ೧೦ ಕೋಟಿ ರೂಪಾಯಿ ಇಡುಹಣ (ನಿಗದಿತ ಠೇವಣಿ)ವನ್ನು ಬ್ಯಾಂಕಿನಲ್ಲಿ ತೊಡಗಿಸುವ ಸಾಮರ್ಥ್ಯವುಳ್ಳ

ಯಾವುದೇ ದಳ್ಳಾಳಿ ಸಂಸ್ಥೆ, ಈಗ ಷೇರುಗಳನ್ನು ಮಾರುಕಟ್ಟೆಗೆ ಬಿಡುಗಡೆ ಮಾಡಬಹುದು. ಆ ಮೂಲಕ ಒಂದು ವಿಶ್ವವಿದ್ಯಾನಿಲಯವನ್ನೇ ಸ್ಥಾಪಿಸಬಹುದು. ಸದ್ಯದಲ್ಲಿ ಮದ್ಯಸಾರ ತಯಾರ್ಮಾಡುವ ಮೆಕ್ಡೊನಾಲ್ಡ್ ಕಂಪೆನಿಯಾಗಲಿ, ರಸ್ತೆ ನಿರ್ಮಾಣ ಕಾರ್ಯದಲ್ಲಿ ತೊಡಗಿರುವ ರಿಲಯನ್ಸ್ ಕಂಪೆನಿಯಾಗಲಿ ಒಂದು ವಿಶ್ವವಿದ್ಯಾನಿಲಯ ಸ್ಥಾಪಿಸಲು ಮುಂದೆ ಬಂದರೆ ನಾವು ಆಶ್ಚರ್ಯ ಪಡಬೇಕಾಗಿಲ್ಲ.

೧೯೯೫ರಲ್ಲಿ ಪಾರ್ಲಿಮೆಂಟಿನಲ್ಲಿ ಖಾಸಗಿ ವಿಶ್ವವಿದ್ಯಾನಿಲಯ ಮಸೂದೆಯನ್ನು ಮಂಡಿಸಲಾಯಿತು. ವಿಶ್ವವಿದ್ಯಾನಿಲಯದ ಮುಖ್ಯ ಕೆಲಸ ಶ್ರೇಷ್ಠತಮವಾದ ಜ್ಞಾನವನ್ನು ಶ್ರಮವಹಿಸಿ ವಿದ್ಯಾರ್ಥಿಗಳಲ್ಲಿ ಬೆಳೆಸುವುದು ಎಂದು ಆ ಮಸೂದೆಯಲ್ಲಿ ಹೇಳಲಾಗಿತ್ತು. ಈಗ ಆ ಮಸೂದೆಗೆ ವಿದಾಯ ಹೇಳಿ ಅದರ ಸ್ಥಾನದಲ್ಲಿ ಹೊಸ ಬಂಡವಾಳ ಹೂಡಿಕೆ ನೀತಿಯನ್ನು ಅನುಷ್ಠಾನಕ್ಕೆ ತರಲಾಗಿದೆ.

ಈ ಹೊಸ ಯೋಜನೆಯ ಅನುಮೋದಕರು ಮಾರುಕಟ್ಟೆಯಲ್ಲಿ ಎಲ್ಲ ಪದಾರ್ಥಗಳ ಬೆಲೆಯೂ ೧೦-೨೦ ಪಟ್ಟು ಏರಿರುವಾಗ ಕಾಲೇಜು ಶುಲ್ಕ ಮಾತ್ರ ಹಿಂದೆ ಇದ್ದಂತೆ ಇರಬೇಕು ಎಂದು ಹೇಳುವುದು ಯೋಗ್ಯವೇ ಎಂದು ಕೇಳುತ್ತಾರೆ. ದೆಹಲಿಯ ಹಿಂದು ಕಾಲೇಜಿನಲ್ಲಿರುವ ೧೩,೦೦ ವಿದ್ಯಾರ್ಥಿಗಳ ಪೈಕಿ ೨೫೦ ವಿದ್ಯಾರ್ಥಿಗಳು ಕಾರುಗಳನ್ನು ಹೊಂದಿರುತ್ತಾರೆ. ಅವರು ನೀಡುವ ಶುಲ್ಕ ಅವರ ಎರಡು ದಿನದ ಪೆಟ್ರೋಲ್ ಖರ್ಚಿನಷ್ಟು. ಹೀಗಿರುವಾಗ ಕಾಲೇಜ್ ಫೀ ಏಕೆ ಏರಿಸಬಾರದು ಎಂಬುದು ಅವರ ವಾದ. ಪಶ್ಚಿಮ ಬಂಗಾಳದ ಮುಖ್ಯಮಂತ್ರಿಯಾಗಿದ್ದ ಜ್ಯೋತಿ ಬಸು ಬಂಕುರಾದಲ್ಲಿ ಒಂದು ಕಾಲೇಜಿನ ಆರಂಭೋತ್ಸವ ನೆರವೇರಿಸುತ್ತಾ 'ಹಣ ಕೊಟ್ಟು ವಿದ್ಯೆ ಪಡೆಯ ಬಯಸುವವರಿಗೆ ಶಿಕ್ಷಣದ ಅವಕಾಶ ಒದಗಿಸುವುದರಲ್ಲಿ ತಪ್ಪೇನು?' ಎಂದರು. ಮಾನವ ಸಂಪನ್ಮೂಲಗಳ ಸಚಿವ ಮುರಳಿ ಮನೋಹರ ಜೋಶಿಯವರು 'ಉನ್ನತ ಶಿಕ್ಷಣಕ್ಕೆ ಅಪಾರವಾಗಿ ಹಣ ಬೇಕಾಗಿರುವುದರಿಂದ, ಅದರ ಜವಾಬ್ದಾರಿಯನ್ನು ಖಾಸಗಿಯವರಿಗೆ ಏಕೆ ವಹಿಸಬಾರದು' ಎನ್ನುತ್ತಾರೆ.

ಇನ್ನೂ ಒಂದು ವಾದ ಹುಟ್ಟಿಕೊಂಡಿದೆ. ನರ್ಸರಿ ಮತ್ತು ಪ್ರೈಮರಿ ಶಿಕ್ಷಣಕ್ಕೆ ಕಾಲೇಜಿಗೆ ನೀಡುವುದಕ್ಕಿಂತ ಹೆಚ್ಚಿಗೆ ಹಣ ನೀಡಿ ವಿದ್ಯೆ ಪಡೆಯುತ್ತಿರುವಾಗ, ಕಾಲೇಜು ನಡೆಸುವವರು ತಲೆಗಂದಾಯ ವಸೂಲ್ಮಾಡಿದರೆ ತಪ್ಪೇನು? ನರ್ಸರಿ, ಪ್ರಾಥಮಿಕ ಮಟ್ಟದಲ್ಲೇ ಅಪಾರ ಹಣವನ್ನು ವಸೂಲು ಮಾಡಲು ಕಾನ್ವೆಂಟುಗಳಿಗೆ ಅವಕಾಶ ಮಾಡಿಕೊಟ್ಟದ್ದು ಸರ್ಕಾರ. ಅದನ್ನು ಮೊಳಕೆಯಲ್ಲೇ ತಡೆಗಟ್ಟದೆ ಹೋದದ್ದು ಯಾರ ತಪ್ಪು? ಈಗ ಅದನ್ನೇ ನೆಪ ಹೇಳಿ, ಕಾಲೇಜು, ಪ್ರೌಢಶಾಲೆಗಳಲ್ಲಿ ಖಾಸಗಿಯವರು ಹಣ ಲೂಟಿ ಮಾಡಲು ಅವಕಾಶ ನೀಡುವುದು ಘೋರ ಅಪರಾಧ.

ಇಂದಿನ ವ್ಯಾಪಾರಿ ಮನೋವೃತ್ತಿಯ ವಿದ್ಯಾ ಸಂಸ್ಥೆಗಳನ್ನು ಅವಲೋಕಿಸಿದರೆ ವಿದ್ಯಾರ್ಥಿ ವಿದ್ಯೆಯನ್ನು ಒಂದು ಪದಾರ್ಥವನ್ನಾಗಿ ಪರಿಗಣಿಸಿಕೊಳ್ಳುವ ಮನೋಭಾವ ಉಳ್ಳವನಾಗಿದ್ದಾನೆ. ಇಂತಹ ವಿದ್ಯಾರ್ಥಿಯಲ್ಲಿ ಯಾವ ವಿಧವಾದ ಸಾಮಾಜಿಕ ಕಳಕಳಿ ಅಥವಾ ಹೊಣೆಗಾರಿಕೆಯನ್ನು ತಾನೆ ನಾವು ನಿರೀಕ್ಷಿಸಲಾದೀತು? ಅವರು ಡಿಗ್ರಿಯನ್ನು ಹಣ ಕೊಟ್ಟು ಪಡೆದು ಅದನ್ನು ಲಾಭಗಳಿಕೆಯ ಸಾಧನವನ್ನಾಗಿ ಬಳಸಿಕೊಂಡರೆ ನಾವು ಅದಕ್ಕೆ ಆಶ್ಚರ್ಯಪಡಬೇಕಾಗಿಲ್ಲ.

ಶುಲ್ಕ ಹೆಚ್ಚಿದರೆ ಶಿಕ್ಷಣದ ಗುಣಮಟ್ಟ ಹೆಚ್ಚುವುದೆಂಬ ವಾದ ಒಂದಿದೆ. ಹೀಗೆ ಮಾತನಾಡುವವರಿಗೆ ಗುಣಮಟ್ಟ ಎಂದರೇನು ಎಂಬುದೇ ಗೊತ್ತಿಲ್ಲ ಎನ್ನಬಹುದು.

ಈಗ ದೇಶದ ತುಂಬ ಮನೆಪಾಠದ ಕಾರ್ಖಾನೆಗಳು ಆರಂಭವಾಗಿವೆ. ವಿದ್ಯಾರ್ಥಿ ತಾನು ಓದಿದ್ದನ್ನು ಮನನ ಮಾಡಿದನೆ ಎಂಬುದು ಇವರಿಗೆ ಮುಖ್ಯವಲ್ಲ. ಪರೀಕ್ಷೆಯಲ್ಲಿ ಉತ್ತೀರ್ಣನಾಗುವುದು ಹೇಗೆ ಎಂಬುದನ್ನು ಅಲ್ಲಿ ಕಲಿಸುತ್ತಾರೆ. ಈ ಖಾಸಗಿ ಪಾಠ ಮಾಡುವ ಸಂಸ್ಥೆಗಳು ಪ್ರಶ್ನೆ ಪತ್ರಿಕೆಯ ಮಾದರಿಯನ್ನು ತಯಾರಿಸಿ ವಿದ್ಯಾರ್ಥಿಗಳಿಗೆ ಕೊಡುತ್ತವೆ. ಈ ಟ್ಯುಟೋರಿಯಲ್‌ಗಳು

ಪ್ರಶ್ನೆ ಪತ್ರಿಕೆ ಸಿದ್ಧಪಡಿಸುವವರ ಸಂಪರ್ಕ ಹೊಂದಿದ್ದರಿದ್ದು, ಅವರು ಊಹಿಸುವ ಪ್ರಶ್ನೆಗಳಲ್ಲಿ ಶೇ. ೯೦ರಷ್ಟು ಅವೇ ಆಗಿರುತ್ತವೆ. ಸಹಜವಾಗಿ ರ್‍ಯಾಂಕುಗಳೂ ಕೂಡ ಅಲ್ಲಿ ಪಾಠ ಹೇಳಿಸಿಕೊಂಡವರಿಗೇ ಬರುತ್ತದೆ.

ಇದು ಒಂದು ಬೆಳವಣಿಗೆಯಾದರೆ ಆರ್. ಎಸ್. ಎಸ್. ನವರು ಹಿಂದುತ್ವದ ದುರಭಿಮಾನ ಬೆಳೆಸುವುದಕ್ಕಾಗಿ ಮಾನವ ಸಂಪನ್ಮೂಲ ಸಚಿವಾಲಯವನ್ನು ತಮ್ಮ ಹತೋಟಿಯಲ್ಲಿಟ್ಟುಕೊಳ್ಳಲು ಬಯಸಿ, ಕಟ್ಟಾ ದುರಭಿಮಾನಿ ಡಾ. ಮುರಳಿ ಮನೋಹರ ಜೋಶಿ ಅವರನ್ನು ಕೇಂದ್ರ ಸರ್ಕಾರದಲ್ಲಿ ಕೂಡಿಸಿದ್ದಾರೆ. ಹಿಂದುತ್ವದ ಆಧಾರದ ಮೇಲೆ ಜೋಶಿಯವರು ಶಿಕ್ಷಣವನ್ನು 'ಆಧ್ಯಾತ್ಮೀಕರಣ' ಗೊಳಿಸುತ್ತಾರಂತೆ. ಈ ಯೋಜನೆಯನ್ನು ಆರ್. ಎಸ್. ಎಸ್. ರೂಪಿಸಿ ಬಹಳ ವರ್ಷಗಳಾಗಿವೆ. ಇದಕ್ಕಾಗಿ ಪಾಠಕ್ರಮ, ಪಠ್ಯಕ್ರಮಗಳನ್ನು ಬದಲಾಯಿಸುವ ವಿಚಾರ ಇದೆ. ಆರ್. ಎಸ್. ಎಸ್. ನವರು ಜಾತ್ಯತೀತ ಶಿಕ್ಷಣ ನೀಡುವ ಬದಲು 'ಹಿಂದುತ್ವ' ಶಿಕ್ಷಣ ನೀಡಲು ಬಯಸಿ ಈ ದೇಶದ ತುಂಬ ವಿದ್ಯಾಭಾರತಿ ಎಂಬ ಸಂಸ್ಥೆಯ ಹೆಸರಿನಲ್ಲಿ ೧೪೦೦೦ ನರ್ಸರಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಶಾಲೆಗಳನ್ನು ತೆರೆದಿದ್ದಾರೆ. ಈ ಶಾಲೆಗಳಲ್ಲಿ ೧೮ ಲಕ್ಷ ಹುಡುಗ ಹುಡುಗಿಯರು ಶಿಕ್ಷಣ ಪಡೆಯುತ್ತಿದ್ದಾರೆ. ಇದಲ್ಲದೆ ಉಚ್ಚ ಶಿಕ್ಷಣ ನೀಡುವ ೬೦ ಕಾಲೇಜುಗಳನ್ನು, ೨೫ ಬೇರೆ ಬೇರೆ ವಿದ್ಯಾಸಂಸ್ಥೆಗಳನ್ನು ಅವರು ಆರಂಭಿಸಿದ್ದಾರೆ. ಇಲ್ಲಿ ಇರಾನಿನ ತಾಲಿಬಾನ್ ಮಿಲಿಷಿಯಾ ರೀತಿಯಲ್ಲಿ ಹಿಂದು ಮಿಲಿಷಿಯಾ ತಯಾರ್‍ಮಾಡಲಾಗುತ್ತಿದೆ. ಗುಜರಾತ್, ರಾಜಾಸ್ತಾನ್, ಉತ್ತರಪ್ರದೇಶ ಮತ್ತು ದೆಹಲಿಯಲ್ಲಿ ಅವರದೇ ಸರ್ಕಾರಗಳಿದ್ದಾಗ ಅಲ್ಲಲ್ಲ ಸರ್ಕಾರದ ನೆರವಿನಿಂದಲೇ ಈ ಸಂಸ್ಥೆಗಳು ಬೆಳೆಯಹತ್ತಿದವು. ಮಹಾರಾಷ್ಟ್ರದಲ್ಲೂ ಇವೆ. ಇಲ್ಲೆಲ್ಲ ತಮ್ಮದೇ ಆದ ಪಠ್ಯಕ್ರಮ, ಪಠ್ಯಪುಸ್ತಕಗಳನ್ನು ಅವರು ರಚಿಸಿಕೊಂಡಿದ್ದಾರೆ. ಉದಾಹರಣೆಗೆ, ರಾಜಾಸ್ತಾನದಲ್ಲಿ ೯ನೇ ತರಗತಿಗೆ ಇಟ್ಟಿರುವ 'ನೂತನ ಪದ್ಯ ಗದ್ಯ ಮಂಜರಿ' ಎಂಬ ಪುಸ್ತಕದಲ್ಲಿ ನಾಲ್ಕು ಲೇಖನಗಳಿವೆ (ಪಾಠ). ಅವನ್ನು ಬರೆದವರು ಆರ್. ಎಸ್. ಎಸ್. ನ ರಜ್ಜು ಭಯ್ಯ, ತರುಣ ವಿಜಯ್, ಪಾಂಚಜನ್ಯ ಪತ್ರಿಕೆಯ ಸಂಪಾದಕ ಕೆ. ಸಿ. ಸುದರ್ಶನ್ ಮತ್ತು ಡಾ. ಜಲಂಸಿಂಗ್ ರವೊಚಿತ್ ಇವರುಗಳು. ಈ ಲೇಖನಗಳಲ್ಲಿ ಅವರು ಆರ್. ಎಸ್. ಎಸ್. ಮತ್ತು ಬಿ. ಜೆ. ಪಿ. ನಾಯಕರನ್ನು ಅವತಾರಗಳೆಂದೇ ವರ್ಣಿಸಿದ್ದಾರೆ. ೧೦ ಮತ್ತು ೧೨ ನೇ ತರಗತಿಗೆ ಇಟ್ಟಿರುವ ವ್ಯಾಕರಣ ಪುಸ್ತಕದಲ್ಲಿ, ಸಂಭಾಷಣೆ ಕುರಿತು ಬರೆದಿರುವ ಒಂದು ಅಧ್ಯಾಯದಲ್ಲಿ ವಿದ್ಯಾರ್ಥಿ ಭಾರತ ಬಾಂಬ್ ಸಿಡಿಸಿದ್ದರ ಔಚಿತ್ಯ ಕುರಿತು ಕೇಳುತ್ತಾನೆ. ಉಪಾಧ್ಯಾಯರು ಬಾಂಬ್ ಸಿಡಿಸಿದ್ದನ್ನು ಸಮರ್ಥಿಸಿಕೊಂಡು ಉತ್ತರ ಕೊಡುತ್ತಾರೆ. ಭಾರತದ ಬಾಂಬನ್ನು 'ಹಿಂದು ಬಾಂಬ್' ಎಂದೂ ಪಾಕಿಸ್ತಾನದ ಬಾಂಬನ್ನು 'ಇಸ್ಲಾಮಿಕ್ ಬಾಂಬ್' ಎಂದೂ ಅವರು ಕರೆದಿದ್ದಾರೆ. ೯ನೆಯ ತರಗತಿಯ ಪಠ್ಯ ಪುಸ್ತಕದಲ್ಲಿ ದೀನದಯಾಳ್ ಉಪಾಧ್ಯಾಯರ ವಿಚಾರಕ್ಕೆ ಒಂದು ಪಾಠ ಇದೆ. ಈ ಲೇಖನದಲ್ಲಿ ಧರ್ಮರಾಜ್ಯದ ಬಗೆಗೆ ಅವರ ಸಿದ್ಧಾಂತಗಳನ್ನು ಚರ್ಚಿಸಲಾಗಿದೆ. ಉತ್ತರಪ್ರದೇಶದ ೯ನೇ ತರಗತಿ ಪಠ್ಯ ಪುಸ್ತಕದಲ್ಲಿ, ಭಾರತದಲ್ಲಿ ಆಳುವ ಮುಸ್ಲಿಮರಿದ್ದರು, ಆಳ್ವಿಕೆಗೊಳಗಾದ ಹಿಂದುಗಳಿದ್ದರು, ಹಿಂದುಗಳು ಹೋರಾಡಿ ಭಾರತದ ಸ್ವಾತಂತ್ರ್ಯ ಪಡೆದರು, ಇದನ್ನು 'ಪ್ರತಿರೋಧ ಕಾಲ' ಎಂದು ಕರೆಯಲಾಗಿದೆ, ಎಂದು ಬರೆದಿದ್ದಾರೆ.

ಚರಿತ್ರೆ ಪುಸ್ತಕದಲ್ಲಿ ಹೆಡ್ಗೆವಾರ್, ಗೋಲ್ವಾಲ್ಕರ, ದೀನ ದಯಾಲ ಉಪಾಧ್ಯಾಯ ಮುಂತಾದ ಆರ್. ಎಸ್. ಎಸ್. ನಾಯಕರ ಪಾಠಗಳಿವೆ. ರಾಷ್ಟ್ರೀಯ ಚಳುವಳಿಯ ನಾಯಕರಾದ ತಿಲಕ್, ಸುಭಾಸ್ ಬೋಸ್, ಲಾಲಾ ಲಜಪತ್ ರಾಯ್, ಮೌಲಾನಾ ಅಬುಲ್ ಕಲಂ ಆಜಾದ್, ಸರೋಜಿನಿ ದೇವಿ, ಭಗತ್‌ಸಿಂಗ್, ಫುಲೆ, ಡಾಂಗೆ, ಲೋಹಿಯ ಮುಂತಾದವರ ಪ್ರಸ್ತಾಪವೇ ಇಲ್ಲ.

ಎಳೆ ಮಕ್ಕಳ ಮನಸ್ಸಿನಿಂದ ಸ್ವರಾಜ್ಯಕ್ಕೆ ದುಡಿದವರ ಹೆಸರುಗಳನ್ನು ಮರೆಸಿ, ಹಿಂದುಗಳು ಸ್ವಾತಂತ್ರ್ಯ ತಂದವರು ಎಂದೂ, ಹಿಂದುಗಳೆಂದರೆ ಆರ್. ಎಸ್. ಎಸ್. ನವರು ಎಂದೂ ವಿಷ ಬೀಜ ಬಿತ್ತುವ ಹುನ್ನಾರ ಈ ಪಠ್ಯಪುಸ್ತಕಗಳಲ್ಲಿವೆ.

ಇತ್ತೀಚೆಗೆ ಎಲ್ಲ ಶಾಲೆಗಳಲ್ಲೂ ಸರಸ್ವತಿವಂದನಂ, ವಂದೇ ಮಾತರಂ ಪೂರ್ಣಪಾಠ ಜಾರಿಗೆ ತರಲು ಮುರಳಿ ಮನೋಹರ ಜೋಶಿ ಒಂದು ಸಂಚು ಹೂಡಿದ್ದರು. ಇದನ್ನು ಜಾರಿಗೆ ಕೊಡುವ ಮೊದಲು ಭಾರತದ ಎಲ್ಲ ರಾಜ್ಯಗಳ ವಿದ್ಯಾಸಚಿವರನ್ನೂ ಇಲಾಖೆಯ ಕಾರ್ಯದರ್ಶಿ ದೆಹಲಿಯಲ್ಲಿ ನಡೆದ ಒಂದು ಸಭೆಗೆ ಕರೆದಿದ್ದರು. ಸಭೆ ಆರಂಭವಾಗುವ ಮುನ್ನ ಸರಸ್ವತಿವಂದನಂ ಹಾಡಿಸಿದಾಗ, ಎಲ್ಲ ಆಮಂತ್ರಿತ ಮಂತ್ರಿಗಳೂ ಇದನ್ನು ಪ್ರತಿಭಟಿಸಿದರು. ಹೀಗಾಗಿ ಅವರ ಪ್ರಯತ್ನ ಅಲ್ಲಿಗೇ ನಿಂತುಹೋಗಿದೆ.

ಭಾರತೀಯ ಇತಿಹಾಸ ಸಂಶೋಧನಾ ಮಂಡಲಿ, ಸಮಾಜಶಾಸ್ತ್ರ ಮಂಡಲಿ, ಭಾರತೀಯ ಉನ್ನತ ಅಧ್ಯಯನ ಸಂಸ್ಥೆ (ಸಿಮ್ಲಾ), ಮುಂತಾದವುಗಳ ಆಡಳಿತ ಮಂಡಲಿಗಳನ್ನು ಗಾಳಿಗೆ ತೂರಿ ಆರ್. ಎಸ್. ಎಸ್. ಸಮೀಪವರ್ತಿಗಳಾದ ಅಪ್ರಬುದ್ಧರನ್ನು ಈ ಸಮಿತಿಗಳಿಗೆ ನೇಮಕ ಮಾಡಿದ್ದಾರೆ. ಈ ಎಲ್ಲ ಸಂಶೋಧನಾ ಸಂಸ್ಥೆಗಳ ಪುನರ್‌ರಚನೆಯ ಉದ್ದೇಶವೂ ಆರ್. ಎಸ್. ಎಸ್. ತತ್ವಗಳನ್ನು ಪಠ್ಯಗಳಲ್ಲಿ ತುಂಬಲು ಸಹಕಾರಿಯಾಗ ಬೇಕೆಂಬುದೇ ಆಗಿದೆ, ಇತಿಹಾಸವನ್ನು ತಿರುಚಿ ಬರೆಯುವುದೇ ಆಗಿದೆ.

ಈ ಬಗೆಯ ಸರ್ವಾಧಿಕಾರ ಶಿಕ್ಷಣ ಪದ್ಧತಿ ಅಸ್ತಿತ್ವಕ್ಕೆ ಬಂದಿತೆಂದರೆ ಇಡೀ ಸಮಾಜವನ್ನು ಮೃಗೀಯ ಉನ್ಮಾದ ಆಕ್ರಮಣ ಮಾಡುತ್ತದೆ. ಆದ್ದರಿಂದ ವಿದ್ಯಾರ್ಥಿಗಳೂ, ಶಿಕ್ಷಕರೂ, ಶಿಕ್ಷಣ ತಜ್ಞರೂ, ಭಾರತದ ಸಮಗ್ರತೆ ಬಯಸುವವರೂ ಈ ಶಿಕ್ಷಣ ನೀತಿಯ ವಿರುದ್ಧವಾಗಿ ಸಂಘಟಿತರಾಗಬೇಕು. ಶಿಕ್ಷಣ ಇಂದು ಆಪತ್ತಿಗೆ ಒಳಗಾಗಿದೆ. ಅದನ್ನು ಲಾಭಕೋರರಿಂದ ಉನ್ಮಾದಗ್ರಸ್ತ ಆರ್. ಎಸ್. ಎಸ್. ನಿಂದ ರಕ್ಷಿಸುವುದು ಎಲ್ಲ ಭಾರತೀಯರ ಆದ್ಯಕರ್ತವ್ಯ.

ಎಚ್. ಎಸ್. ದೊರೆಸ್ವಾಮಿ
ನಂ. ೧೮/ಬಿ, ೭ನೇ ಅಡ್ಡ ರಸ್ತೆ, ಎನ್. ಆರ್. ಕಾಲೋನಿ
ಬೆಂಗಳೂರು - ೫೬೦೦೧೯

## ನವಕರ್ನಾಟಕ ಮತ್ತು ಡಾ॥ ಹಾ. ಮಾ. ನಾ.



ಡಾ॥ ಹಾ. ಮಾ. ನಾಯಕ ಮತ್ತು ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸಂಬಂಧ ಬಹಳ ದೀರ್ಘಕಾಲದ್ದು. ಅವರ ಕನ್ನಡಾಭಿಮಾನದ ಬಗ್ಗೆ ಹೇಳಬೇಕಾದ ಅಗತ್ಯವಿಲ್ಲ. ಕನ್ನಡದ ಕಾರ್ಯ ನಡೆಯುವಲ್ಲಿ ಅವರು ಯಾವಾಗಲೂ ಮುಂದಿರುತ್ತಿದ್ದರು. ಸುಮಾರು ೨೫ ವರ್ಷಗಳ ಹಿಂದೆ ನಾವು '**ವಿಶ್ವಕಥಾ ಕೋಶ**'ದ ಇಪ್ಪತ್ತೈದು ಸಂಪುಟಗಳನ್ನು ಪ್ರಕಟಿಸುವ ಬೃಹತ್ ಕಾರ್ಯದಲ್ಲಿ ತೊಡಗಿಕೊಂಡಿದ್ದಾಗ ನಮ್ಮ ಚಟುವಟಿಕೆಯನ್ನು ಅವರು ಬಹಳ ಆಸಕ್ತಿಯಿಂದ ಗಮನಿಸುತ್ತ, ಇದೊಂದು ಸಾಹಸದ ಕೆಲಸವೆಂದು ನಮ್ಮನ್ನು ಹುರಿದುಂಬಿಸಿದ್ದರು. ಆ ಸಂಪುಟಗಳನ್ನು ಆರು ಕಂತುಗಳಲ್ಲಿ ಬಿಡುಗಡೆಮಾಡಲಾಯಿತು. ಎಲ್ಲ ಆರು ಸಮಾರಂಭಗಳಲ್ಲಿ ಹಾಮಾನಾ ಭಾಗವಹಿಸಿ ನಮಗೆ ಪ್ರೋತ್ಸಾಹ ನೀಡಿದ್ದರು, ಶ್ಲಾಘಿಸಿದ್ದರು. ಮೊದಲ ಮತ್ತು ಕೊನೆಯ ಕಂತಿನ ಸಂಪುಟಗಳನ್ನು ಹಾಮಾನಾ ಅವರೇ ಬಿಡುಗಡೆ ಮಾಡಿದ್ದರು.

ಇದೀಗ ನವಕರ್ನಾಟಕ ಪ್ರಕಟಿಸಲಿರುವ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತ ಕನ್ನಡ ಲೇಖಕರ ಬದುಕು ಬರಹ ಕುರಿತ 'ನವಕರ್ನಾಟಕ ಸಾಹಿತ್ಯ ಸಂಪದ' ಮಾಲಿಕೆಯ ಸಂಪಾದಕರಲ್ಲೊಬ್ಬರಾಗಿ ಡಾ॥ ಪ್ರಧಾನ್ ಗುರುದತ್ತ ಅವರೊಂದಿಗೆ ಕಾರ್ಯನಿರತರಾಗಿದ್ದರು. ಈ ಮಾಲಿಕೆಯ ಹನ್ನೆರಡು ಕೃತಿಗಳು ೨೦೦೧ರ ಜನವರಿಯಲ್ಲಿ ಬಿಡುಗಡೆಯಾಗಲಿವೆ. ಇದು ಅವರ ಜೀವಿತಾವಧಿಯ ಬೃಹತ್ ಕಾರ್ಯಭಾರವೆಂದು ಅವರು ಭಾವಿಸಿದ್ದರು. ಇದು ಅವರ ಅಂತಿಮ ಕಾರ್ಯಾಚಟುವಟಿಕೆಯಾಯಿತು. ಅವರ ನಿಧನದ ಬಗ್ಗೆ ನವಕರ್ನಾಟಕ ಬಳಗ ಅನುತಾಪ ವ್ಯಕ್ತಪಡಿಸುತ್ತದೆ. ಈ ಮೂಲಕ ಅವರಿಗೆ ಶ್ರದ್ಧಾಂಜಲಿ ಅರ್ಪಿಸುತ್ತದೆ.

# ಜನಜಾಗೃತಿಯಲ್ಲಿ ನಮ್ಮ ಪತ್ರಿಕೆಗಳು

ನನಗೆ ಯಾವುದೇ ರಾಜಕೀಯ ಇಲ್ಲವಪ್ಪ ಎಂದು ಹೇಳುವುದು ಆತ್ಮ ವಂಚನೆಯೇ ಹೊರತು ಇನ್ನೇನೂ ಅಲ್ಲ. ಪತ್ರಿಕೆಗಳು ಯಾವುದೇ ಒಂದು ಚಳುವಳಿಗೆ ಇಂಬು ಕೊಡಬಲ್ಲವು. ಆದೇ ರೀತಿ ಆಂದೋಲನದ ಜತೆಗೆ ಅವು ಬೆಳೆಯಲೂ ಬಲ್ಲವು. ೧೯೮೦ರ ದಶಕದ ಆರಂಭದ ಕಾಲಘಟ್ಟದಲ್ಲಿ ಕರ್ನಾಟಕದಲ್ಲಿ ನಡೆದ ಜನಪರ ಚಳುವಳಿಗಳನ್ನು ಇಲ್ಲಿ ಉದಾಹರಿಸಬಹುದು. ಆಗ ಆಡಳಿತದಲ್ಲಿದ್ದ ಸರಕಾರದ ಜನವಿರೋಧಿ ನೀತಿಗಳು ಹಾಗೂ ದಮನಕಾರಿ ಕ್ರಮಗಳಿಗೆ ಪ್ರತಿಕ್ರಿಯೆಯಾಗಿ ಭುಗಿಲೆದ್ದ ರೈತ, ಕಾರ್ಮಿಕ ಹಾಗೂ ಇತರೆ ಜನ ವಿಭಾಗಗಳ ತೀಕ್ಷ್ಣ ಆಂದೋಲನಗಳಿಗೆ ಪತ್ರಿಕೆಗಳು ವಿಶೇಷ ಗಮನ ನೀಡಿದವು. ಈ ದಿನಗಳ ಪತ್ರಿಕೆಗಳು ಅಂದಿನ ಕಾಲದ ಹೋರಾಟದ ಕಾವಿನ ದಾಖಲೆಗಳಾಗಿವೆ. ಆಂದೋಲನದ ಜತೆಜತೆಯಲ್ಲಿ ಪತ್ರಿಕೆಗಳು ಬೆಳೆಯಬಲ್ಲವು ಎನ್ನುವುದಕ್ಕೆ 'ಲಂಕೇಶ್ ಪತ್ರಿಕೆ' ಒಂದು ಉತ್ತಮ ನಿದರ್ಶನ ಎಂದು ಹೇಳಬಹುದು. ಕಾರ್ಮಿಕ ಚಳವಳಿ, ನರಗುಂದ ರೈತ ಬಂಡಾಯ ಮೊದಲಾದವು ವಿಶೇಷವಾಗಿ ಮುದ್ರಣ ಮಾಧ್ಯಮದಿಂದ ಇಂಬುಪಡೆದವು.

ಇನ್ನೂ ಕಾವಿಳಿಯದ ಬಾಗೂರು ನವಿಲೆ ಚಳವಳಿ ಈ ವಿಚಾರದಲ್ಲಿ ತೀರಾ ಈಚಿನ ತಾಜಾ ನಿದರ್ಶನ. ರೈತರ ಆಂದೋಲನ ತೀವ್ರಗೊಳ್ಳಲು ಪತ್ರಿಕೆಗಳೇ ಕಾರಣ ಎಂದು ಹೇಳಿ ವರದಿಗಾರರ ಮೇಲೆ ಪೊಲೀಸರೂ ದೌರ್ಜನ್ಯ ಎಸಗಿ ಪತ್ರಿಕೆಗಳ ಮೇಲೆ ಮೊಕದ್ದಮೆಗಳನ್ನು ದಾಖಲಿಸುವುದುಂಟು. ಅಭಿಪ್ರಾಯ ರೂಪಿಸುವಲ್ಲಿ ಪತ್ರಿಕೆಗಳು ವಹಿಸಬಹುದಾದ ಪಾತ್ರ ಏನೆಂಬುದಕ್ಕೆ ಇದು ಒಂದು ಉತ್ತಮ ಉದಾಹರಣೆಯಾಗಿ ದಾಖಲಾಗಬಹುದು.

**ಚಳವಳಿಗಳ ಕಿಚ್ಚು**

ಚಳವಳಿಗಳಲ್ಲಿ ಪತ್ರಿಕೆಗಳು ಮಹತ್ವದ ಪಾತ್ರ ವಹಿಸಬಲ್ಲವು ಎಂಬುದಕ್ಕೆ ಕುದುರೆಮೋತಿ ಪ್ರಕರಣ ಒಂದು ನಿದರ್ಶನ. ಕಾವಿಧಾರಿ ಕಾಮಾಂಧನೊಬ್ಬ ಮುಗ್ಧ ಮಹಿಳೆಯ ಮೇಲೆ ನಡೆಸಿದ ಅತ್ಯಾಚಾರದ ವಿರುದ್ಧ ಕರ್ನಾಟಕದಾದ್ಯಂತ ಚಳುವಳಿಯ ಕಿಚ್ಚು ಹಬ್ಬುವಲ್ಲಿ ಪತ್ರಿಕೆಗಳು ವಹಿಸಿದ ಪಾತ್ರವನ್ನು ಯಾರೂ ಅಲ್ಲಗಳೆಯಲಾಗದು. ನಾನಾ ಪ್ರಕಾರದ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಳುವಳಿಯ ಪ್ರಸಾರದಲ್ಲಿಯೂ ಜನರನ್ನು ಸುಲಭವಾಗಿ ತಲುಪುವ ಪತ್ರಿಕೆಗಳು ತಮ್ಮದೇ ಆದ ಕೊಡುಗೆಯನ್ನು ಸಲ್ಲಿಸಿವೆ. ಈ ವಿಚಾರದಲ್ಲಿ ಸಮುದಾಯ ಸಾಂಸ್ಕೃತಿಕ ಚಳವಳಿ ಇಲ್ಲಿ ಉಲ್ಲೇಖನೀಯ. ಕರ್ನಾಟಕದ ಸಾಂಸ್ಕೃತಿಕ ಕ್ಷೇತ್ರದಲ್ಲಿ ಹೊಸ ಅಲೆಯನ್ನೇ ಹುಟ್ಟುಹಾಕಿದ ಬೀದಿ ನಾಟಕದ ಆಂದೋಲನಕ್ಕೆ ಚಾಲನೆ ಕೊಟ್ಟ ಸಂಘಟನೆ ಸಮುದಾಯ. ದೇಶದ ಹಲವು ಭಾಗಗಳಲ್ಲಿ ಹಾಗೂ ರಾಜ್ಯದಲ್ಲಿಯೂ ನಡೆದ ಅನೇಕ ದೌರ್ಜನ್ಯ ಶೋಷಣೆಯ ಪ್ರಕರಣಗಳನ್ನು ಎತ್ತಿಕೊಂಡು ಹಾಡು, ಬೀದಿ ನಾಟಕದ ರೂಪ ಕೊಟ್ಟು ಶೋಷಿತರ ದನಿಗೆ ದನಿಗೂಡಿಸುತ್ತಿದ್ದ ಸಂಘಟನೆ ಸಮುದಾಯ.

ಜನಜಾಗೃತಿಯ ಅಲೆ ಸಾಮಾಜಿಕ ಪಿಡುಗುಗಳ ವಿರುದ್ಧ ಜನಾಭಿಪ್ರಾಯವನ್ನು ಮೂಡಿಸಿ ಅದಕ್ಕೊಂದು ಆಂದೋಲನದ ರೂಪ ನೀಡುವಲ್ಲಿ ಪತ್ರಿಕೆಗಳು ಸಮರ್ಥವಾಗುತ್ತವೆ ಎಂಬುದಕ್ಕೆ ಒಂದು ಪ್ರಕರಣ ನೆನಪಾಗುತ್ತದೆ. ವರದಕ್ಷಿಣೆ ಸಮಸ್ಯೆ ಬಗ್ಗೆ ವಿವರಿಸುವುದು ಅನಗತ್ಯ. ಸುಮಾರು ಹತ್ತು ವರ್ಷಗಳ ಹಿಂದೆ ಆಗ ಮಂಗಳೂರಿನಿಂದ ಪ್ರಕಟವಾಗುತ್ತಿದ್ದ ವಡ್ಡರ್ಸೆ ಸಂಪಾದಕತ್ವದ 'ಮುಂಗಾರು' ಪತ್ರಿಕೆ ವರದಕ್ಷಿಣೆಯು ಸಮಾಜವನ್ನು ಕಿತ್ತು ತಿನ್ನುತ್ತಿರುವ ಪರಿಯ ಬಗ್ಗೆ ಓದುಗರ ಪತ್ರಗಳನ್ನು ಲೇಖನಗಳನ್ನು ಪ್ರಕಟಿಸಿತು. ಇದು ಎಷ್ಟರಮಟ್ಟಿಗೆ ಪರಿಣಾಮ ಬೀರಿತೆಂದರೆ ವರದಕ್ಷಿಣೆ ಪಿಡುಗಿನ ವಿರುದ್ಧ ಜನಜಾಗೃತಿಯ ಒಂದು ಅಲೆಯೇ ಎದ್ದಿತು. ಅಂದಿನ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವರದಕ್ಷಿಣೆ ವಿರೋಧಿ ಬಳಗ ಎಂಬ ವೇದಿಕೆಯೇ ಹುಟ್ಟಿಕೊಂಡು ಈ ಜಾಗೃತಿಗೆ ಮಾತ್ರರೂಪ ಸಿಕ್ಕಿತು.

೧೯೯೮ರ ಜುಲೈನಲ್ಲಿ ಉತ್ತರ ಪ್ರದೇಶದಲ್ಲಿ ನಡೆದ ಒಂದು ವಿದ್ಯಮಾನ ! 'ಜನ ಮೋರ್ಚಾ' ಎಂಬ ಸಹಕಾರಿ ಕ್ಷೇತ್ರದ ಪತ್ರಿಕೆಯನ್ನು ಯಾವುದೇ ಕಾರಣವಿಲ್ಲದೆ ಬಿಜೆಪಿ ನೇತೃತ್ವದ ಸಮ್ಮಿಶ್ರ ಸರ್ಕಾರ ವಹಿಸಿಕೊಂಡಿತು. ಕಾರಣವನ್ನು ಕೆದಕಲು ಹೋದರೆ ಕೋಮುವಾದದ ವಿರುದ್ಧ ಜನಜಾಗೃತಿ ಮೂಡಿಸುವಲ್ಲಿ, ಅಂಥ ಶಕ್ತಿಗಳನ್ನು ಸೋಲಿಸುವಲ್ಲಿ, ಪತ್ರಿಕೆಗಳು ವಹಿಸಬಹುದಾದ ಪಾತ್ರ ಏನೆಂಬುದಕ್ಕೆ ಒಂದು ನಿದರ್ಶನ ಲಭ್ಯವಾಗುತ್ತದೆ.

ಅಯೋಧ್ಯೆ ಪ್ರಕರಣದಲ್ಲಿ ಬಿಜೆಪಿ ನಿಲುವನ್ನು ಪತ್ರಿಕೆಗಳು ಬೆಂಬಲಿಸದಿದ್ದುದೇ ಸರ್ಕಾರದ ನಿರ್ಧಾರಕ್ಕೆ ಕಾರಣ ಎನ್ನುತ್ತಾರೆ 'ಜನಮೋರ್ಚಾ' ಸಂಪಾದಕ ಶೀತ್ಲಾ ಸಿಂಗ್. ಆದು ಅಯೋಧ್ಯೆ ವಿಚಾರದಲ್ಲಿ ಜಾತ್ಯಾತೀತ ಧೋರಣೆಯನ್ನು ಪ್ರಬಲವಾಗಿ ಪ್ರತಿಪಾದಿಸಿದ್ದ ಪತ್ರಿಕೆ. ವಿವಾದಾತ್ಮಕ ಪ್ರದೇಶವನ್ನೊಳಗೊಂಡ ಫೈಜಾಬಾದ್ ಲೋಕಸಭಾ ಕ್ಷೇತ್ರದಲ್ಲಿ ಬಜರಂಗ ದಳದ ನಾಯಕ ಬಿಜೆಪಿ ಅಭ್ಯರ್ಥಿ ವಿನಯ ಕತಿಯಾರ ಸೋಲುವಲ್ಲಿ ಮಹತ್ವದ ಕೊಡುಗೆಯನ್ನು ಅದು ಸಲ್ಲಿಸಿತ್ತು. ಜನರ ನಿಜವಾದ ಸಮಸ್ಯೆಗಳನ್ನು ಕಂಡುಕೊಳ್ಳದೆ ದೇವರು -ಧರ್ಮದ ಹೆಸರಿನಲ್ಲಿ ಜನರ ಏಕತೆಯನ್ನು ಒಡೆಯುವ ಶಕ್ತಿಗಳ ಕೆಂಗಣ್ಣಿಗೆ ಪತ್ರಿಕೆ ಗುರಿಯಾಗಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ಜನರಲ್ಲಿ ಜಾಗೃತಿ ಮೂಡುವುದು ಕೂಡ ಚಳವಳಿಯ ಒಂದು ಭಾಗವೇ.

**ಟಿ. ಕೆ. ಗೋವಿಂದರಾಜ್**

ತುಂಬಾ ಹತ್ತಿರದ ಒಂದು ಉದಾಹರಣೆಯನ್ನು ಗಮನಿಸೋಣ. ೧೯೮೦ರ ದಶಕದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವೇಶ್ಯಾವಾಟಿಕೆ ಜಾಲವೊಂದರ ಬಗ್ಗೆ 'ಕನ್ನಡ ಪ್ರಭ'ದಲ್ಲಿ ಪ್ರಕಟವಾದ ಗರುಡನಗಿರಿ ನಾಗರಾಜ್ ಅವರ ತನಿಖಾ ವರದಿಗಳು ಈ ಹೀನ ಸಾಮಾಜಿಕ ಪಿಡುಗಿನ ವಿರುದ್ಧ ಜನಜಾಗೃತಿ ಮೂಡಿಸುವಲ್ಲಿ ಪರಿಣಾಮ ಬೀರಿದ್ದು ಕಡಿಮೆ ಸಾಧನೆಯೇನೂ ಅಲ್ಲ. ಪ್ರಜಾಪ್ರಭುತ್ವದ ಕತ್ತನ್ನೇ ಮುರಿದಂಥ ತುರ್ತುಪರಿಸ್ಥಿತಿಯ ವಿರುದ್ಧ ಇಂಡಿಯನ್ ಎಕ್ಸ್‌ಪ್ರೆಸ್‌ನಂಥ ಪತ್ರಿಕೆಗಳು ದಮನಕಾರಿ ಸರ್ವಾಧಿಕಾರಿ ನೀತಿಗಳ ವಿರುದ್ಧ ಹೋರಾಟದ ಭಾಗವಾಗಿಯೇ ನಿರ್ವಹಿಸಿದ ಪಾತ್ರ ಅಮೋಘ.

ಪತ್ರಿಕೆಗಳು ಹಲವು ಸಂದರ್ಭಗಳಲ್ಲಿ ಚಳವಳಿಯ ಬಗ್ಗೆ ಹೇಗೆ ನೆಗೆಟಿವ್ ಅಪ್ರೋಚ್ ಹೊಂದಿರುತ್ತವೆ, ನಿಜವಾಗಿಯೂ ಚಳವಳಿಗಳಿಗೆ ನೆರವಾಗಲು ಅವು ಯಾವ ರೀತಿಯಲ್ಲಿ ಕಾರ್ಯ ನಿರ್ವಹಿಸಲು ಸಾಧ್ಯ ಎಂಬ ಅಂಶಗಳನ್ನು ಚರ್ಚಿಸುವುದು ಅಗತ್ಯ ಎನಿಸುತ್ತದೆ. ಹಿಂಸಾತ್ಮಕ ಘಟನೆಗಳು ನಡೆದಾಗಲಷ್ಟೇ ಚಳವಳಿಗೆ ಗಮನ ಕೊಡುವ ಒಂದು ಪ್ರವೃತ್ತಿ ಪತ್ರಿಕೆಗಳಲ್ಲಿ ಇದೆ ಎಂಬುದನ್ನು ವಿಷಾದದಿಂದ ಹೇಳಬೇಕಾಗುತ್ತದೆ. ಹೆಜ್ಜಾಲ ಗೋಲಿಬಾರ್ ಪ್ರಕರಣವನ್ನು ಇದಕ್ಕೆ ಉದಾಹರಣೆಯಾಗಿ ನೀಡಬಹುದು. ಟೆಕ್ಸ್‌ಟೈಲ್ ಮಿಲ್ ಒಂದರ ಮಾಲಿಕರು ನಡೆಸುತ್ತಿದ್ದ ಅಪಾರ ಶೋಷಣೆಯ ವಿರುದ್ಧ ಅದರ ಕಾರ್ಮಿಕರು ಹಾಗೂ ಕುಟುಂಬ ಸದಸ್ಯರು ದೀರ್ಘಕಾಲದಿಂದ ಹೋರಾಟದ ಹಾದಿ ಹಿಡಿದಿದ್ದರೂ ಅದು ಸುದ್ದಿಯೇ ಆಗಿರಲಿಲ್ಲ. ಚಳವಳಿ ತೀಕ್ಷ್ಣ ಹಂತಕ್ಕೆ ಹೋಗಿ ಪೊಲೀಸರು ಗೋಲಿಬಾರ್ ನಡೆಸಿದಾಗ ಮೂವರು ಕಾರ್ಮಿಕರ ಜೀವಹರಣ ಆದಾಗಲಷ್ಟೆ ಇದು ಗಮನ ಸೆಳೆದ ಸುದ್ದಿಯಾಯಿತು. ಉದಾರವಾದ, ಜಾಗತೀಕರಣ ಈಗ ಇವು ಪರಿಚಿತ ಪದಗಳಾಗಿವೆ. ಅದೇ ರೀತಿ ಈ ಪರಿಕಲ್ಪನೆಗಳು ಜನಜೀವನವನ್ನು ಹಿಂಡಿ ಹಿಪ್ಪೆ ಮಾಡುತ್ತಿವೆ ಅನ್ನುವುದು ಅಷ್ಟೇ ಸತ್ಯ. ಈ ತಪ್ಪು ವಾಸ್ತವವನ್ನು ಜನರು ಅರಿಯುತ್ತಿದ್ದು ಅದರ ವಿರುದ್ಧ ಸೆಟೆದು ನಿಲ್ಲಲು ಅಣಿಯಾಗುತ್ತಿದ್ದಾರೆ. ಆ ಬಗೆಗಿನ ಸಮಾವೇಶಗಳು, ಹೋರಾಟಗಳು ನಮ್ಮ ಪತ್ರಿಕೆಗಳಿಗೆ ಸುದ್ದಿಯೇ ಅಲ್ಲ. ಅದಕ್ಕೆ ಬದಲಾಗಿ ಒಂದು ದಾಂಧಲೆ ನಡೆದರೆ ಅದು ಸುದ್ದಿಯಾಗುತ್ತದೆ !

**ಮೂಲೆ ಸುದ್ದಿಯೂ ಆಗಲಿಲ್ಲ**

'ಕೃಷಿ ಕಾರ್ಮಿಕರಿಗಾಗಿ ಕೇಂದ್ರೀಯ ಕಾನೂನಿನ ಅಗತ್ಯವಿಲ್ಲ; ಇಂಥಾ ಕಾನೂನನ್ನು ರಚಿಸಿದರೆ ಭೂಮಾಲೀಕರು ಮತ್ತು ಕೂಲಿಗಾರರ ನಡುವೆ ಸಂಘರ್ಷ ಉಂಟಾಗುತ್ತದೆ'. ಹೀಗೆಂದು ಹೇಳಿದವರು ಬೇರೆ ಯಾರೂ ಅಲ್ಲ. ದೇಶದ ಒಬ್ಬ ಜವಾಬ್ದಾರಿಯುತ 'ಆಡಳಿತಗಾರ' ಸ್ವತಃ ಕೇಂದ್ರದ ಕಾರ್ಮಿಕ ಮಂತ್ರಿ,. ಲಾಗಾಯ್ತಿನಿಂದಲೂ

ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ತುಳಿತಕ್ಕೊಳಗಾದ ದಲಿತರೇ ಪ್ರಧಾನ ಭಾಗವಾಗಿರುವ ಕೋಟ್ಯಾಂತರ ಕೃಷಿ ಕೂಲಿಗಾರರ ಜೀವನದ ಒಳಿತಿಗಾಗಿ ಕಾನೂನಿನ ಅಗತ್ಯವಿಲ್ಲ ಎಂದು ವಾಜಪೇಯಿ ಸರಕಾರದ ಮಂತ್ರಿ ಹೇಳಿದ್ದು ಪತ್ರಿಕೆಗಳ 'ಮೂಲೆ ಸುದ್ದಿ'ಯೂ ಆಗದೆ ಹೋಯಿತು. ಆದರೆ ಅಂಬೇಡ್ಕರ್ ಪ್ರತಿಮೆ ಭಗ್ನವಾದಾಗ, ಕನ್ನಡಕ ಕಳುವು ಆದಾಗ, ಅದರ ವಿರುದ್ಧ ದಲಿತರು ನಡೆಸುವ ಪ್ರತಿಭಟನೆಯನ್ನು ಅದೇ ದಲಿತ ಚಳುವಳಿ ಎಂಬಂತೆ ಚಿತ್ರಿಸಲು ಹೋರಾಡುವ ಪತ್ರಿಕೆಗಳು ದಲಿತರ ಜೀವನ ನಿರ್ವಹಣೆಯ ಪ್ರಶ್ನೆ ಬಂದಾಗಲೂ ಅದೇ ರೀತಿಯಲ್ಲಿ ಸೂಕ್ತವಾಗಿ ಸ್ಪಂದಿಸುವುದಿಲ್ಲ ಎನ್ನುವುದು ವಾಸ್ತವ ಸಂಗತಿ. ಕೃಷಿ ಕಾರ್ಮಿಕರಿಗೆ ಕೇಂದ್ರ ಕಾಯಿದೆಯ ಅಗತ್ಯವಿಲ್ಲ ಎಂಬ ಹೇಳಿಕೆಯ ಹಿಂದಿನ ಮನೋಭಾವ ಅದರ ವರ್ಗ ಗುಣ ವನ್ನು ಬಯಲಿಗೆಳೆಯುತ್ತದೆ ಎಂದು ಪತ್ರಿಕೆಗಳು ಬರೆದರೆ ಅದು ಅಸಂಖ್ಯಾತ ಕೃಷಿ ಕೂಲಿಗಾರರು ಸಂಘಟಿತರಾಗಿ ಚಳುವಳಿ ನಡೆಸಲು ಹಾಗೂ ದಲಿತ ಚಳುವಳಿಗೆ ಅಸ್ತ್ರವನ್ನು ಒದಗಿಸಬಲ್ಲುದು. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ ಪತ್ರಿಕೆಗಳು ಚಳುವಳಿಗಳ ಸುದ್ದಿಯನ್ನು ಪ್ರಕಟಿಸುವುದಷ್ಟೆ ಅಲ್ಲ, ಆಂದೋಲನಗಳಿಗೆ ನೇರವಾಗಿ ನೆರವಾಗ ಬಹುದಾದ ಲೇಖನಗಳನ್ನು ಪ್ರಕಟಿಸಬಹುದು. ಇದೇ ಈಗ ಚರ್ಚೆ ನಡೆಸುತ್ತಿರುವ ವಸ್ತುವನ್ನು ತೆಗೆದುಕೊಂಡೇ ವೈಜ್ಞಾನಿಕ ರೀತಿಯಲ್ಲಿ ವಿಶ್ಲೇಷಿಸುತ್ತಾ ಹೋದರೆ ಅದೆಷ್ಟು ಮಹತ್ವಪೂರ್ಣ ಎಂಬುದು ಅರಿವಾಗುತ್ತದೆ. ಕೃಷಿ ಕಾರ್ಮಿಕರಿಗಾಗಿ ಇಡೀ ದೇಶದಲ್ಲಿ ಏಕರೂಪದ ಕಾನೂನು ಒಂದು ಅನುಷ್ಠಾನಕ್ಕೆ ಬಂದು ಕೂಲಿ ಹೆಚ್ಚಳವಾದರೆ ಗ್ರಾಮೀಣ ಬಡಜನರ ಕೊಳ್ಳುವ ಶಕ್ತಿ ಹೆಚ್ಚಾಗುತ್ತದೆ. ಕೊಳ್ಳುವ ಶಕ್ತಿ ಹೆಚ್ಚಿದಂತೆಲ್ಲಾ ಗ್ರಾಹಕ ವಸ್ತುಗಳ ಬೇಡಿಕೆ ಹೆಚ್ಚುತ್ತದೆ. ಅದು ಹೆಚ್ಚು ಹೆಚ್ಚಿನ ಕೈಗಾರಿಕೆಗಳಿಗೆ ಅವಕಾಶ ಕಲ್ಪಿಸುತ್ತದೆ. ಇದರಿಂದಾಗಿ ನಗರ ಪ್ರದೇಶಗಳ ಉದ್ಯೋಗಾ ವಕಾಶ ಹೆಚ್ಚುತ್ತದೆ. ಈ ರೀತಿಯಾಗಿ ಅಂತಿಮವಾಗಿ ಅದು ಆರ್ಥಿಕ ಚಟುವಟಿಕೆಗಳ ಹೆಚ್ಚಳಕ್ಕೆ ಕಾರಣವಾಗಿ ದೇಶದ ಪ್ರಗತಿಯಲ್ಲಿ ಹೇಗೆ ಪಾತ್ರ ವಹಿಸಬಲ್ಲುದು ಎಂಬುದನ್ನು ಎಳೆ ಎಳೆಯಾಗಿ ವಿಶ್ಲೇಷಿಸಬಹುದು. ಪತ್ರಿಕೆ ಮತ್ತು ಚಳವಳಿಯ ಸಂದರ್ಭದಲ್ಲಿ ಇದೂ ಕೂಡ ಒಂದು ಮುಖ.

**ಚಳವಳಿ ಪ್ರಚಾರಕ್ಕಾಗಿ ಅಲ್ಲ**

ಅಂದ ಹಾಗೆ ಚಳವಳಿಗಳು ಪತ್ರಿಕೆಗಳನ್ನೇ ಅವಲಂಬಿಸಿವೆಯೇ ಎಂದು ಕೇಳಿದರೆ ಖಂಡಿತಾ ಇಲ್ಲ ಎಂದೇ ಹೇಳಬೇಕಾಗುತ್ತದೆ. ನಡೆಯುವ ಚಳವಳಿ-ಆಂದೋಲನಗಳಲ್ಲಿ ಅತ್ಯಲ್ಪ ಪ್ರಮಾಣದ್ದು ಮಾತ್ರ ವರದಿ ಯಾಗುತ್ತವೆ, ದಾಖಲೆಗಳಾಗುತ್ತವೆ. ಪತ್ರಿಕೆಗಳಲ್ಲಿ ಬಾರದಿರುವುದು ಚಳವಳಿಗಳಲ್ಲ ಎಂದೇ ? ಹಾಗೇನಿಲ್ಲ. ವಿಶೇಷವಾಗಿ ಎಡಪಂಥೀಯ ಪಕ್ಷಗಳ ಸಂಘಟನೆಗಳಿಗೆ ಈ ಮಾತು ಅನ್ವಯಿಸುತ್ತದೆ. ನಿರಂತರವಾಗಿ ಜನ ಸಮುದಾಯದ ನಡುವೆ ಇರುವ ಅವರು ಪ್ರಚಾರಕ್ಕಾಗಿ ಹಾತೊರೆಯದೆ ಪತ್ರಿಕೆಗಳಲ್ಲಿ ತಮ್ಮ ಚಳವಳಿಯ ವರದಿ ಬರುತ್ತದೋ ಇಲ್ಲವೋ, ಬಂತೋ ಇಲ್ಲವೋ ಎಂಬುದನ್ನು ಲಕ್ಷಿಸದೆ ಸದಾ ಅನ್ಯಾಯದ ವಿರುದ್ಧದ ಹೋರಾಟದಲ್ಲಿ ತೊಡಗುತ್ತಾರೆ. ಸ್ವಾತಂತ್ರ್ಯಕ್ಕಾಗಿ ನಡೆದ ಚಳವಳಿಗೆ ಪ್ರಚಾರದ ಗೀಳಿತ್ತೆ ? ಹಾಗೆ ನೋಡಿದರೆ ಪ್ರಸಾರದ ದೃಷ್ಟಿಯಿಂದಲಾದರೂ ಚಳವಳಿಗಳ ವರದಿಯನ್ನು ಪ್ರಕಟಿಸುವುದು ಪತ್ರಿಕೆಗಳಿಗೆ ಅಗತ್ಯವಾಗುತ್ತದೆ.

**ಪ್ರಶ್ನೆಗಳ ಪಕ್ಷಪಾತ**

ವ್ಯಕ್ತಿಗತ ದ್ವೇಷ, ಅಸೂಯೆ, ಪೂರ್ವಾಗ್ರಹ ಪೀಡಿತ ಮನೋಭಾವ ಇತ್ಯಾದಿಗಳಿಂದಾಗಿ ಪತ್ರಿಕೆಗಳು ನಿಷ್ಪಕ್ಷಪಾತ ವಾಗಿರಬೇಕು ಎಂಬ ಮಾತು ಬೆಲೆ ಕಳೆದುಕೊಳ್ಳುತ್ತದೆ. ತನಗಾಗದವರು ಎಂಬ ಕಾರಣಕ್ಕಾಗಿ ಮಾಜಿ ಪ್ರಧಾನಿ ಯೊಬ್ಬರ ವಿರುದ್ಧ ಬೆಂಗಳೂರಿನಲ್ಲಿ ಕುಳಿತಲ್ಲೇ ದೆಹಲಿ ಡೇಟ್‌ಲೈನ್‌ನಲ್ಲಿ ಕಂತುಗಟ್ಟಲೆ ಸುದ್ದಿ-ವರದಿಗಳು ಸೃಷ್ಟಿ ಯಾಗುತ್ತವೆ. ಶಕ್ತಿಯೇ ಇಲ್ಲದ ಒಂದು ರಾಜಕೀಯ ಪಕ್ಷಕ್ಕೆ ಶಕ್ತಿ ತುಂಬಲು ಪತ್ರಿಕಾ ವೃತ್ತಿಯ ಎಲ್ಲಾ ನೀತಿ ನಿಯಮಗಳನ್ನು ಗಾಳಿಗೆ ತೂರಿ ಕೆಲವರು ಟೊಂಕಕಟ್ಟಿ ನಿಲ್ಲುತ್ತಾರೆ. ಬೆಲೆಯೇರಿಕೆ ವಿರುದ್ಧ ಪಕ್ಷಕ್ಕೆಂದು ನಡೆಸಿದ ಚಳುವಳಿ ಸರ್ಕಾರವನ್ನೇ ಕೆಳಗಿಳಿಸುವ ಆಂದೋಲನವೆಂಬ ಧಾಟಿಯಲ್ಲಿ ಚಿತ್ರಿತಗೊಳ್ಳುತ್ತದೆ.

ಸಾಮಾನ್ಯವಾಗಿ ಎಲ್ಲಾ ರಾಜಕೀಯ ಪಕ್ಷಗಳಿಗೆ ಮುಖವಾಣಿ ಇರುತ್ತದೆ. ಆದರೆ ಕೆಲವು ಪತ್ರಿಕೆಗಳು ಪಕ್ಷಗಳ ಮುಖವಾಣಿಗಳಿಗಿಂತಲೂ ಮುಂದೆ ಹೋಗಿ ನಿರ್ದಿಷ್ಟ ಪಕ್ಷಗಳಿಗೆ ಪ್ರಚಾರ ಕೊಡುವ ಪರಿವಾರಿಕೆ ನಡೆಸುತ್ತಿರುತ್ತವೆ. ಪತ್ರಕರ್ತರ ಇಷ್ಟ, ನಿಷ್ಠೆ, ನಿಲುವುಗಳು ಪತ್ರಿಕೆಗಳಲ್ಲಿ ಪ್ರಕಟವಾಗಬಾರದು ಎಂದು ದೊಡ್ಡದಾಗಿ ಉಪದೇಶ ನೀಡಲಾಗುತ್ತದೆ, ರಾಜಕೀಯವನ್ನು ತುರುಕಬಾರದು ಎಂದು ಹೇಳಲಾಗುತ್ತದೆ. ಇವೆಲ್ಲವೂ ಹುಸಿ ನಾಟಕಗಳಷ್ಟೆ. ಮನುಷ್ಯನಿಗೆ ಹಸಿವು, ನಿದ್ದೆಯಂತೆ ರಾಜಕೀಯ ಒಲವು-ನಿಲುವು ಇದ್ದೇ ಇರುತ್ತದೆ. ಆದರೆ ಅದು ಜನಪರವೋ ಜನವಿರೋಧಿಯೋ ಎಂಬುದಷ್ಟೇ ಮುಖ್ಯವಾಗಿರುತ್ತದೆ.

**ದೃಷ್ಟಿದೋಷ**

ಅತ್ಯಾಚಾರಕ್ಕೆ ಸಂಬಂಧಿಸಿದಂತೆ ಸುಪ್ರೀಂಕೋರ್ಟ್ ಒಂದು ತೀರ್ಪು ನೀಡಿ ಆರೋಪಿಗಳಿಗೆ ಕರ್ನಾಟಕ ಹೈಕೋರ್ಟ್ ನೀಡಿದ್ದ ಸಜೆಯ ಅವಧಿಯನ್ನು ಕಡಿಮೆ ಮಾಡಿತ್ತು. ಶಿಕ್ಷೆಯ ಅವಧಿಗೆ ಸಂಬಂಧಿಸಿ ಅಲ್ಲ, ಆದರೆ ಅತ್ಯಾಚಾರಕ್ಕೆ ಒದಗಿದ ಪ್ರೇರಣೆ ಬಗ್ಗೆ ನ್ಯಾಯಾಧೀಶರು ಮಾಡಿದ ವಾದ ಆಘಾತಕಾರಿಯಾಗಿತ್ತು. ಆರೋಪಿಗಳು 'ಕಾಮೋದ್ರೇಕ ತಡೆದುಕೊಳ್ಳಲಾರದೆ' ಅತ್ಯಾಚಾರ ನಡೆಸಿರಬಹುದೆಂದು ನ್ಯಾಯಾಧೀಶರು ತಮ್ಮ ತೀರ್ಪಿನಲ್ಲಿ ಹೇಳಿದ್ದರು.

ಭಾರತದ ನ್ಯಾಯ ಕ್ಷೇತ್ರದ ಸರ್ವೋನ್ನತ ಸ್ಥಾನವೆಂದು ಪರಿಗಣಿಸಲಾದ ಕೇಂದ್ರದಿಂದ ಬಂದ ಬೇಜವಾಬ್ದಾರಿ ತೀರ್ಪನ್ನು ಟೀಕಿಸಿ ನಾನು ಬರೆದ ಲೇಖನ 'ಸುಪ್ರೀಂ ಕೋರ್ಟ್ ತೀರ್ಪು ಅತ್ಯಾಚಾರಕ್ಕೆ ಕುಮ್ಮಕ್ಕು ?' ಅದು ಕನ್ನಡ ಪ್ರಭದ ದಿ : ೧೯-೧೧-೧೯೯೩ರ ಸಂಚಿಕೆಯಲ್ಲಿ ಪ್ರಕಟವಾಯಿತು. ಸ್ತ್ರೀಯರು ಬಟ್ಟೆ ತೊಡುವ ಶೈಲಿ ಕೂಡ ಅತ್ಯಾಚಾರಕ್ಕೆ ಪ್ರೇರಣೆ ನೀಡುತ್ತದೆ - ಇದು ಸಹೋದ್ಯೋಗಿಯೊಬ್ಬನ ವಾದ ಸರಣಿಯ ಸಾರಾಂಶ. ಈ ಚರ್ಚೆಯ ವಿವರವನ್ನು ಇಲ್ಲಿ ಪ್ರಸ್ತಾಪಿಸುವುದಿಲ್ಲ. ಎಂತಹ ಕೀಳುಮಟ್ಟದ ಅಮಾನವೀಯ ಚಿಂತನೆ ಅದಲ್ಲವೆ ? ಜಗತ್ತಿನ ಬೇರೆ ಸ್ತ್ರೀಯರ ಬಗ್ಗೆ ಚಿಂತಿಸುವುದು ಬೇಡ, ಸ್ವತಃ ತನ್ನ ಒಡಹುಟ್ಟಿದವರನ್ನು ಅತ್ಯಾಚಾರ ಪೀಡಿತ ನತದೃಷ್ಟ ಸೋದರಿಯರ ಸ್ಥಾನದಲ್ಲಿ ಕಲ್ಪಿಸಿ ಕೊಂಡಾಗಲಾದರೂ ತನ್ನಲ್ಲಿ ಇಂತಹ ಯೋಚನೆ ಬರಲು ಸಾಧ್ಯವೇ ಎಂದಾದರೂ ಆತ ಯೋಚಿಸಬೇಕಿತ್ತು.

ಪತ್ರಿಕಾ ಮಾಧ್ಯಮ ಸಮಾಜ ದ್ರೋಹಿಗಳನ್ನು, ಭಯೋತ್ಪಾದಕರನ್ನು ವೈಭವೀಕರಿಸುತ್ತದೆ ಎಂದು ಹಿರಿಯ ರಾಜಕಾರಣಿ ಹಾರ್‍ನಹಳ್ಳಿ ರಾಮಸ್ವಾಮಿ ಹಾಸನದಲ್ಲಿ ನಡೆದ ಕರ್ನಾಟಕ ರಾಜ್ಯ ಸಣ್ಣ ಮತ್ತು ಜಿಲ್ಲಾ ಪತ್ರಿಕಾ ಸಂಪಾದಕರ ಸಂಘದ ಬೆಳ್ಳಿ ಹಬ್ಬದ ಸಮಾರಂಭದಲ್ಲಿ ವಿಷಾದ ವ್ಯಕ್ತಪಡಿಸಿದ್ದು ಸೂಕ್ತವಾಗಿಯೆ ಇದೆ. ಅದು ಪರಿಸ್ಥಿತಿಗೆ ಹಿಡಿದ ಕೈಗನ್ನಡಿಯಾಗಿದೆ. ಸಾಮಾಜಿಕ ರಾಜಕೀಯ ಅನ್ಯಾಯ ಅಕ್ರಮಗಳನ್ನು ಬಯಲಿಗೆಳೆಯುತ್ತಾ ತನ್ನ ಸುತ್ತಮುತ್ತಲಿನ ಜನತೆಗೆ ಬೇಕಾದುದನ್ನು (ಹೀಗೆಂದಾಕ್ಷಣ ಜನರು ಬಯಸುವುದನ್ನು ನಾವು ಕೊಡುತ್ತೇವೆ ಎಂದು ಲೈಂಗಿಕತೆ ಹಾಗೂ ಹಿಂಸೆಯ ಪ್ರದರ್ಶನವನ್ನು ಸಮರ್ಥಿಸುವ ಸಿನಿಮಾ ಮಂದಿಯಂತೆ ಹಿಂಸೆ ಲೈಂಗಿಕತೆಯ ವೈಭವೀಕರಣ ಮಾಡುವುದಲ್ಲ) ನೀಡುತ್ತಾ ಅವರ ನೋವು ನಲಿವಿಗೆ ಸ್ಪಂದಿಸುತ್ತಾ ಕನಿಷ್ಠ ಪಕ್ಷ ಸುದ್ದಿನಿಷ್ಠರಾಗಿ ಕಾರ್ಯನಿರ್ವ ಹಿಸಿದರೆ ಚಳವಳಿಗೆ ಅದು ನೆರವಾಗುತ್ತದೆ ಎಂಬ ಮಾತನ್ನು ಹೇಳಲೇಬೇಕಾಗುತ್ತದೆ. ನಿಷ್ಪಕ್ಷಪಾತವಾಗಿ ವರ್ತಿಸಿ ವಿಷಯನಿಷ್ಠರಾಗಿ ಸುದ್ದಿಗೆ ನ್ಯಾಯ ಒದಗಿಸುವುದರ ಮೂಲಕ ಪತ್ರಿಕೆ-ಪತ್ರಕರ್ತ ತನ್ನ ಚಳವಳಿಗೆ ತನ್ನ ಕೊಡುಗೆಯನ್ನು ಸಲ್ಲಿಸುವ ಪಾತ್ರವನ್ನು ಖಂಡಿತ ನಿರ್ವಹಿಸಬಹುದು. ಏನಿದ್ದರೂ ನಾವು ಪತ್ರಕರ್ತರು ನಮ್ಮ ಕರ್ಮವನ್ನು ಮಾಡುವ ದುಡಿಮೆಗಾರರು ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡರೆ ಯಾವ ಚಳವಳಿ ಸರಿ-ತಪ್ಪು ಯಾವುದು, ಯಾವುವು ಬೇಕು-ಬೇಡ ಎಂಬುದನ್ನು ನಿರ್ಧರಿಸುವುದು ಕಷ್ಟವಾಗಲಾರದು.

**ಟಿ. ಕೆ. ಗೋವಿಂದರಾಜ್**
ಊರುಕೆರೆ (ಅಂಚೆ) - ೫೭೨೧೦೬ ತುಮಕೂರು ಜಿಲ್ಲೆ



# ಕ್ಷಯರೋಗ ಚಿಕಿತ್ಸೆಯಲ್ಲಿ ಹೊಸತೇನು?

ಡಾ|| ವೆಂಕಟರಾಮಗುಪ್ತ

**ಮೂ**ರುವಾರ ಸತತ ಕೆಮ್ಮು, ಜ್ವರ, ಎದೆನೋವು ಮತ್ತು ಕಫದಲ್ಲಿ ರಕ್ತ ಕಾಣಿಸುವಿಕೆ, ದೇಹದ ತೂಕ ಶೇಕಡಾ ಹತ್ತು ಭಾಗ ಕಡಿಮೆಯಾಗುವುದು, ಹಸಿವು ಕಡಿಮೆಯಾಗುವುದು ಮುಂತಾದ ಲಕ್ಷಣಗಳು ಕಂಡುಬಂದಾಗ ವೈದ್ಯರು ಕಫ ಪರೀಕ್ಷೆ ಮಾಡಿಸಲು ಹೇಳುತ್ತಾರೆ. ಕಫ ಪರೀಕ್ಷೆಯಲ್ಲಿ ಕ್ಷಯ ರೋಗಾಣುಗಳು ಕಂಡಾಗ ಕ್ಷಯರೋಗ ಖಚಿತವಾಗುತ್ತದೆ. ನಂತರ ಖಾಯಿಲೆ ಗುಣಪಡಿಸಲು, ಸಾವನ್ನು ತಪ್ಪಿಸಲು ಮತ್ತು ಕ್ಷಯರೋಗಿಗಳು ಕೆಮ್ಮುವಾಗ ಕಫದ ಮುಖಾಂತರ ಸದಾ ರೋಗಾಣುಗಳನ್ನು ಇತರರಿಗೆ ಹರಡುವುದನ್ನು ತಪ್ಪಿಸಲು ಔಷಧಿಗಳನ್ನು ನಿರಂತರವಾಗಿ ಸೇವಿಸಬೇಕು.

೧೯೬೪ರಲ್ಲಿ ಕ್ಷಯರೋಗ ನಿವಾರಣಾ ರಾಷ್ಟ್ರೀಯ ಯೋಜನೆಯಂತೆ ಸತತವಾಗಿ ಎರಡು ವರ್ಷ ಔಷಧಿಗಳ ಸೇವನೆ ಮಾಡಬೇಕಿತ್ತು. ಚಿಕಿತ್ಸೆಗಾಗಿ ಐ. ಎನ್. ಹೆಚ್, ಥಯಸಿಟಾಜೋನ್, ಸ್ಟ್ರೆಪ್ಟೋಮೈಸಿನ್, ಇಥೆಂಬುಟಾಲ್, ಪಿ. ಎ. ಎಸ್. ಸೇವಿಸಬೇಕಿತ್ತು. ಅನೇಕ ರೋಗಿಗಳು ನಾನಾ ಕಾರಣಗಳಿಂದ ಎರಡು ವರ್ಷ ಸೇವನೆ ಮಾಡಲಾರದೆ ಬಹು ಔಷಧಿಗಳಿಗೆ ನಿರೋಧ ಪಡೆದು ಸಾವಿಗೆ ಈಡಾಗುತ್ತಿದ್ದರು. ೧೦೦ ರೋಗಿಗಳಿಗೆ ೭೦ ರೋಗಿಗಳಲ್ಲಿ ಗುಣ ಕಾಣುತ್ತಿರಲಿಲ್ಲ.

ಇಥಿಯಾನಾಮೈಡ್, ಕಾನಾಮೈಸಿಸ್, ಸೈಕ್ಲೋಸೆರಿನ್, ಉಪಯೋಗಿಸಲ್ಪಡುತ್ತಿದ್ದವು. ಆದರೆ ಅವು ಅಲ್ಪ ಪರಿಣಾಮಕಾರಿ ಮತ್ತು ವಿಷಮ ಅಡ್ಡ ಪರಿಣಾಮಗಳನ್ನುಂಟುಮಾಡುವ ಔಷಧಿಗಳು. ಇವು ಪಿತ್ತಜನಕಾಂಗ ಮತ್ತು ಮೂತ್ರಪಿಂಡಗಳ ಕಾರ್ಯಗಳನ್ನು ವಿಫಲಗೊಳಿಸುವ ಸಾಧ್ಯತೆಗಳು ಬಹಳ ಹೆಚ್ಚು. ಆದಕಾರಣ ಕ್ಷಯರೋಗ ಗುಣಪಡಿಸಲು ನಿರಂತರವಾಗಿ ಹೊಸ ಔಷಧಿಗಳ ಸಂಶೋಧನೆ ನಡೆಯುತ್ತಾ ಇದೆ. ಹಾಗೂ ದೀರ್ಘಾವಧಿಯಾದ ಎರಡು ವರ್ಷಗಳಿಂದ ಕಡಿಮೆ ಮಾಡುವ ಸಲುವಾಗಿ ಸಂಶೋಧನೆ ನಡೆಯುತ್ತಾ ಬಂದಿದೆ.

ಆದರ ಫಲವಾಗಿ ಅನೇಕ ಸಂಶೋಧನೆಗಳ ಮೂಲಕ ಆರು ತಿಂಗಳ ಅಲ್ಪಾವಧಿ ಚಿಕಿತ್ಸಾಕ್ರಮ ಮೂಡಿಬಂತು ಮತ್ತು ಔಷಧಿಗಳ ದುಷ್ಪರಿಣಾಮದ ಮಟ್ಟ ಕಡಿಮೆಯಾಗಲು ಸಾಧ್ಯವಾಯಿತು.

ಅಲ್ಪಾವಧಿ ಚಿಕಿತ್ಸಾ ಕ್ರಮದಲ್ಲಿ ೩ ಅಥವಾ ೪ ಔಷಧಿಗಳು ಮೊದಲ ೨ ತಿಂಗಳು ಮತ್ತು ಎರಡು ತಿಂಗಳ ನಂತರ ೬ ತಿಂಗಳವರೆಗೆ ೨ ಔಷಧಿಗಳು ಕೊಡಲಾಗುವುದು. ಸತತವಾಗಿ ಸಪ್ರಮಾಣದಲ್ಲಿ, ಸಕ್ರಮವಾಗಿ ಸೇವಿಸಿದಲ್ಲಿ ಕ್ಷಯವು ಪೂರ್ಣಗುಣ ಹೊಂದುವುದರಲ್ಲಿ ಸಂದೇಹವೇ ಇಲ್ಲ.

ಹೊಸದಾಗಿ ಉಪಯೋಗಿಸಲ್ಪಡುವ ಔಷಧಿಗಳೆಂದರೆ ಐ. ಎನ್. ಹೆಚ್, ರಿಫಾಮೈಸಿನ್, ಪೈರಿಜನಾಮೈಡ್, ಇಥೆಂಬುಟಾಲ್ ಇವುಗಳನ್ನು ಸೇವಿಸಬೇಕು. ಎರಡರಿಂದ ಆರು ವಾರಗಳವರೆಗೆ ಸೇವಿಸಿದ ಮೇಲೆ ರೋಗಿಗಳ ಸತತ ಕೆಮ್ಮು, ಜ್ವರ, ಎದೆನೋವು ಮತ್ತು ಸುಸ್ತು ಕಡಿಮೆಯಾಗಿ ಉತ್ಸಾಹ ಮರುಕಳಿಸುವುದು. ಹಸಿವು ಹೆಚ್ಚುವುದು. ಶಕ್ತಿ ಬರುವುದು. ದೇಹದ ತೂಕ ಜಾಸ್ತಿಯಾಗುವುದು. ರೋಗಿಗಳಿಗೆ ರೋಗವು ವಾಸಿಯಾಯಿತೆಂದು ಕೆಲವರು ತಪ್ಪು ಕಲ್ಪನೆಯಿಂದ ಔಷಧಿಗಳ ಸೇವನೆ ನಿಲ್ಲಿಸಿಬಿಡುವರು. ೧೦೦ಕ್ಕೆ ೬೦ ಜನ ಹೀಗೆ ನಿಲ್ಲಿಸಿಬಿಡುತ್ತಾರೆ. ಇದರಿಂದಾಗಿ ಕೆಲವು ತಿಂಗಳು ಅಥವಾ ವರ್ಷಗಳ ನಂತರ ರೋಗವು ಮರುಕಳಿಸಿ ತೀವ್ರಸ್ಥಿತಿ ಬರುವುದು. ಅವರಲ್ಲಿ ಕಂಡುಬರುವ ಕ್ಷಯ ರೋಗಾಣುಗಳು ಶೇಕಡಾ ೧೨ ರಿಂದ ೧೬. ಇಂತಹ ರೋಗಿಗಳಲ್ಲಿ ಆಗಲೇ ತೆಗೆದುಕೊಂಡಿರುವ ಔಷಧಿಗಳಿಗೆ ''ನಿರೋಧ ಶಕ್ತಿ'' ಉದ್ಭವವಾಗುತ್ತದೆ. ಅಂಥ ರೋಗಿಗಳಿಗೆ ಅದೇ ಔಷಧಿಗಳನ್ನು ಮತ್ತೆ ಕೊಟ್ಟರೆ ಕ್ಷಯವು ಗುಣವಾಗುವುದಿಲ್ಲ. ರೋಗಾಣುಗಳು ಔಷಧಿಗಳಿಂದ ಸಾಯುವುದಿಲ್ಲ. ಹೀಗಾಗಿ ಇವರು ಬಹು ಔಷಧಿಗಳಿಗೆ ನಿರೋಧ ಪಡೆದ ಕ್ಷಯ ರೋಗಿಗಳಾಗುತ್ತಾರೆ. ಈ ರೋಗಿಗಳಿಂದ ಇನ್ನೊಬ್ಬರಿಗೆ ಖಾಯಿಲೆ ಬಂದಲ್ಲಿ ಅವರು ಅಲ್ಪಾವಧಿ ಚಿಕಿತ್ಸಾ ಪದ್ಧತಿಯಲ್ಲಿ ಬಳಸುವ ಔಷಧಿಗಳನ್ನು ಬಳಸಿದರೆ ಕ್ಷಯವು ಗುಣವಾಗುವುದಿಲ್ಲ. ರೋಗವು ಉಲ್ಬಣಿಸಿ ಸಾವಿಗೀಡಾಗುತ್ತಾರೆ.

ಇದೀಗ ಡಾಟ್ ಪದ್ಧತಿಯನ್ನು ವಿಶ್ವ ಆರೋಗ್ಯ ಸಂಸ್ಥೆ ಅನೇಕ ದೇಶಗಳಲ್ಲಿ ಅಳವಡಿಸಿದೆ. ಅಲ್ಪಾವಧಿ ಚಿಕಿತ್ಸೆಯ ಔಷಧಿಗಳನ್ನು ಆರೋಗ್ಯ ಕಾರ್ಯಕರ್ತರ ಸಮಕ್ಷಮ ವಿತರಿಸಿ ರೋಗಿಗಳು ಔಷಧಿಗಳನ್ನು ಸೇವಿಸಬೇಕು. ಈ ಡಾಟ್ ಪದ್ಧತಿಯನ್ನು ಪಾಲಿಸುವುದರಿಂದ ೧೦೦ಕ್ಕೆ ೮೫ ರೋಗಿಗಳು ಕ್ಷಯರೋಗದಿಂದ ಪೂರ್ಣ ಗುಣ ಪಡೆಯುವರು. ಔಷಧಿಗಳಿಗೆ ನಿರೋಧ ಪಡೆಯುವ ಸಂಭವ ಕಡಿಮೆ. ಸಾವು ಈ ರೋಗಿಗಳಲ್ಲಿ ಅಸಂಭವ. ಇದೇ ಹೊಸ ಸಂಶೋಧನೆಗಳಿಂದ ಬಂದಿರುವ ಹೊಸ ವಿಜ್ಞಾನ ಸಾರ. ''ಡಾಟ್'' ಅಂದರೆ ''ಸಮಕ್ಷಮ ಚಿಕಿತ್ಸಾ ಅಲ್ಪಾವಧಿ ಪದ್ಧತಿ''. ಅದನ್ನು ೧೯೯೭ರಿಂದ ಭಾರತದಲ್ಲಿ ಸರಕಾರವು ಅಳವಡಿಸಿದೆ.



'ಹರಿದ' ಹಾಳೆಗಳನ್ನು ನೋಡಿಯೇ ಅಂದ್ಕೊಂಡೆ.... ನಿಮ್ಮ ಲೇಖನಿ ತುಂಬಾ ತುಂಬಾ.... ಹರಿತವಾಗಿದೆ!

ಕಳೆದ ದಶಕದಿಂದ ಪಾಶ್ಚಿಮಾತ್ಯ ದೇಶಗಳಿಂದ ಏಡ್ಸ್ ರೋಗವು ಇತರ ದೇಶಗಳಿಗೆ ಅತಿ ಶೀಘ್ರವಾಗಿ ಹರಡುತ್ತಾ ಇದೆ. ಈ ರೋಗದಲ್ಲಿ ''ನೈಸರ್ಗಿಕ ರೋಗ ನಿರೋಧ ಶಕ್ತಿಯು'' ಕುಂಠಿತವಾಗುತ್ತದೆ. ಈ ರೋಗವನ್ನು ಪೂರ್ಣ ಗುಣಪಡಿಸಲು ಔಷಧಿಗಳು ಲಭ್ಯವಿಲ್ಲ. ಕ್ಷಯರೋಗವು ಅತಿ ಶೀಘ್ರದಲ್ಲಿ ಇಂಥ ರೋಗಿಗಳಿಗೆ ಹರಡುತ್ತದೆ ಹಾಗೂ ಉಲ್ಬಣಗೊಳ್ಳುತ್ತದೆ. ರೋಗಿಗಳು ಅತಿ ತೀವ್ರಗತಿಯಿಂದ ನರಳುತ್ತಾರೆ. ಅಷ್ಟೇ ಶೀಘ್ರವಾಗಿ ಸಾವಿಗೀಡಾಗುತ್ತಾರೆ. ಭಾರತದಲ್ಲಿ ೩೭% ಏಡ್ಸ್ ಸೋಂಕಾದವರು ಕ್ಷಯದಿಂದ ಬಳಲುವರು. ೫೩% ಏಡ್ಸ್‌ನಿಂದಾಗುವ ಸಾವುಗಳಲ್ಲಿ ಕ್ಷಯವೇ ಮುಖ್ಯ ಕಾರಣವೆಂದು ಗೊತ್ತಾಗಿದೆ. ಏಡ್ಸ್ ಮತ್ತು ಕ್ಷಯರೋಗಿಗಳಲ್ಲಿ ೭೫% ಶ್ವಾಸಕೋಶದ ಕ್ಷಯದಿಂದ ನರಳುವರು. ಇದರಿಂದಾಗಿ ೧೦ ಪಟ್ಟು ಹೆಚ್ಚು ಸಾವುಗಳು ಕಂಡುಬಂದಿವೆ. ಬಹು ಔಷಧಿ ನಿರೋಧವಿರುವ ಕ್ಷಯ ರೋಗಿಗಳು ಜಾಸ್ತಿಯಾಗುತ್ತಿದ್ದಾರೆ. ಕೆಲವೇ ತಿಂಗಳಲ್ಲಿ ಅವರು ಸಾವನ್ನಪ್ಪುವ ದುರಂತ ಬರುತ್ತದೆ.

ಇದನ್ನು ತಪ್ಪಿಸಲು ಕೆಳಗೆ ಕಂಡಂತೆ ಅಲ್ಪಾವಧಿ ಚಿಕಿತ್ಸೆಯನ್ನು ಕೊಡಲಾಗುವುದು : ಕಫದಲ್ಲಿ ಕ್ಷಯ ರೋಗಾಣು ಪರೀಕ್ಷೆಯಿಂದ ಖಚಿತಪಡಿಸಿದ ಹೊಸ ಕ್ಷಯ ರೋಗಿಗಳಿಗೆ ಮೊದಲ ೨ ತಿಂಗಳ ಅವಧಿಯಲ್ಲಿ HRZE ಅಂದರೆ ಐ. ಎನ್. ಹೆಚ್. ೬೦೦ ಮಿ. ಗ್ರಾಂ. + ರಿಫಾಮೈಸಿನ್ ೪೫೦ ಮಿ. ಗ್ರಾಂ. + ಇಥೆಂಬುಟಾಲ್ ೧೨೦೦ ಮಿ. ಗ್ರಾಂ. ಮತ್ತು ಪೈರಿಜಿನಾಮೈಡ್ ೧.೫ ಗ್ರಾಂ. ಎಂಬ ನಾಲ್ಕು ಔಷಧಿಗಳನ್ನು ಸೇವಿಸಬೇಕು. ಎಲ್ಲಾ ಔಷಧಿಗಳನ್ನು ವಾರಕ್ಕೆ ಎರಡು ದಿನ ಸೇವಿಸಿದರೆ ಸಾಕು. ಆನಂತರ ೪ ತಿಂಗಳ ಅವಧಿಯಲ್ಲಿ ಐ. ಎನ್. ಹೆಚ್. ೬೦೦ ಮಿ. ಗ್ರಾಂ. + ರಿಫಾಮೈಸಿನ್ ೪೫೦ ಮಿ. ಗ್ರಾಂ. ಎಂಬ ಎರಡು ಔಷಧಿಗಳನ್ನು ಸೇವಿಸಬೇಕು, ವಾರದಲ್ಲಿ ಎರಡು ದಿವಸ.

ಇದರಿಂದ ಕ್ಷಯ ರೋಗವು ಸಂಪೂರ್ಣ ಗುಣಹೊಂದುವುದು.

ಬಹು ಔಷಧಿ ನಿರೋಧವಿರುವ ಕ್ಷಯರೋಗಿಗಳಿಗೆ ಇದೀಗ ಹೊಸ ಸಂಶೋಧನೆಗಳ ಫಲವಾಗಿ ನೂತನ ಔಷಧಿಗಳು ಲಭ್ಯವಾಗಿವೆ. ಅವುಗಳೆಂದರೆ, ಓಫ್ಲಾಕ್ಸಾಸಿನ್, ಸ್ಪರ್‌ಫ್ಲಾಕ್ಸಾಸಿನ್, ರಿಫಾಪೆಂಟೀನ್, ಸಿಫಾಕ್ಸಿಟಿನ್, ಕ್ಲಾರಿತ್ರೋಮೈಸಿನ್, ಏಜಿತ್ರೋಮೈಸಿನ್ ಮತ್ತು ಸೆಫ್‌ಮೆಟಜೋಲ್. ಈ ಪೈಕಿ ಅನೇಕ ಔಷಧಿಗಳು ಭಾರತದಲ್ಲಿ ಲಭ್ಯವಿಲ್ಲ. ಮತ್ತು ಬೆಲೆ ವಿಪರೀತ. ಹಾಗಿದ್ದಾಗ್ಯೂ ಜನಸಾಮಾನ್ಯರಿಗೆ ಸರಕಾರವು ಸಹ ಕ್ಷಯರೋಗ ನಿವಾರಣಾ ಯೋಜನೆಯಲ್ಲಿ ಔಷಧಿಗಳ ಉಚಿತ ವಿತರಣೆ ಮಾಡುತ್ತಿಲ್ಲವೆಂಬುದು ಶೋಚನೀಯ. ರಾಷ್ಟ್ರದ ಹಿತದೃಷ್ಟಿಯಿಂದ ಈ ಕಡೆ ಸರ್ಕಾರಗಳು ಆದ್ಯತೆಯ ಗಮನ ನೀಡಬೇಕಾಗಿದೆ.

# ವಿನೋದ ಗಣಿತ

## ನವೆಂಬರ್ ತಿಂಗಳ ಪ್ರಶ್ನೆಗೆ ಉತ್ತರ

ಆಟವನ್ನು ಆರಂಭಿಸಿದ ಆಟಗಾರ 'ಕ' ಗೆಲ್ಲುವ ವ್ಯೂಹ ಇಂತಿದೆ.

ಆತ ಆಟದ ಮೊದಲನೆಯ ನಡೆಯಲ್ಲಿ ರಾಶಿಯಿಂದ ಎರಡು ಕವಡೆಗಳನ್ನು ಹೆಕ್ಕಿ ತನ್ನದನ್ನಾಗಿಸಿಕೊಳ್ಳುತ್ತಾನೆ. ಇದಾದ ನಂತರ 'ಖ' ನಿಯಮಕ್ಕನುಸಾರವಾಗಿ (೧ರಿಂದ ೬ರ ವರೆಗಿನ ಸಂಖ್ಯೆಯ ಎಷ್ಟು ಕವಡೆಗಳನ್ನಾದರೂ ಹೆಕ್ಕಿ ಕೊಳ್ಳಲಿ !) ಆಡಿದ ನಂತರ 'ಕ' ತನ್ನ ಸರದಿಯ ನಡೆಯಲ್ಲಿ ರಾಶಿಯಲ್ಲಿ ಕೇವಲ ೨೧ ಕವಡೆಗಳು ಮಾತ್ರ ಉಳಿಯುವಂತೆ ತಾನು ಹೆಕ್ಕಬೇಕಾದ ಕವಡೆಗಳ ಸಂಖ್ಯೆಯನ್ನು ನಿರ್ಧರಿಸಿ ಅದರಂತೆ ಹೆಕ್ಕಿ ತನ್ನದಾಗಿಸಿಕೊಳ್ಳುತ್ತಾನೆ. ಆಟದ ನಿಯಮಕ್ಕನುಸಾರವಾಗಿಯೇ ಇದನ್ನು 'ಕ' ಮಾಡಲು ಸಾಧ್ಯ ಎಂಬುದನ್ನು ವಿಮರ್ಶಿಸಿ ತಿಳಿಯಬಹುದು! ಮುಂದುವರೆದು 'ಖ' ನಿಯಮಕ್ಕನುಸಾರವಾಗಿ ಹೇಗಾದರೂ ಆಡಲಿ 'ಕ' ತನ್ನ ಸರದಿ ಬಂದಾಗ ರಾಶಿಯಲ್ಲಿ ಕೇವಲ ೧೪ ಕವಡೆಗಳು ಮಾತ್ರ ಉಳಿಯುವಂತೆ ರಾಶಿಯಿಂದ ಕವಡೆಗಳನ್ನು ಹೆಕ್ಕಿ ತನ್ನದಾಗಿಸಿ ಕೊಳ್ಳುತ್ತಾನೆ. ಈಗ 'ಖ' ನ ಸರದಿ. 'ಖ' ಹೇಗೆ ಆಡಿದರೂ 'ಕ' ತನ್ನ ಸರದಿಯಲ್ಲಿ ರಾಶಿಯಲ್ಲಿ ೭ ಕವಡೆಗಳು ಮಾತ್ರ ಉಳಿಯುವಂತೆ ನಡೆಯನ್ನು ಯೋಜಿಸಬಹುದು. ರಾಶಿಯಲ್ಲಿ ೭ ಕವಡೆಗಳಿದ್ದು 'ಖ' ನ ನಡೆಯ ಸರದಿ! ಈ ನಡೆಯಲ್ಲಿ 'ಖ' ನ ಆಟ ಹೇಗಿದ್ದರೂ ಮುಂದಿನ 'ಕ' ನ ಸರದಿ ಬಂದಾಗ ರಾಶಿಯನ್ನು ಖಾಲಿ ಮಾಡಿ 'ಖ' ಸೋಲುವಂತೆ ಮಾಡಬಹುದಷ್ಟೆ!

ತನ್ನ ಸರದಿ ಬಂದಾಗಲೆಲ್ಲ 'ಕ' ತನ್ನ ಪೂರ್ವ ಯೋಜಿತ ಸಂಖ್ಯೆಯ ಪ್ರಕಾರವೇ (೨೮, ೨೧, ೧೪ ಮತ್ತು ೭) ರಾಶಿಯಲ್ಲಿ ಕವಡೆಗಳು ಉಳಿಯುವಂತೆ ಯೋಜಿಸಲು ಸಾಧ್ಯವಾಗಿರುವಂತೆ ಮೊದಲನೆ ನಡೆಯ ಪ್ರಯೋಜನ ಎಡೆ ಮಾಡಿಕೊಡುವುದರಿಂದಲೇ 'ಕ' ಗೆಲ್ಲಲು ಸಾಧ್ಯವಾಯಿತು.

## ಈ ತಿಂಗಳ ಪ್ರಶ್ನೆ

'ಅ' ಮತ್ತು 'ಗ' ಊರುಗಳ ನಡುವೆ ೫೦ ಕಿ.ಮೀ. ಉದ್ದದ ಒಂದು ನೇರ ರಸ್ತೆ ಇದೆ. ಒಂದು ನಿಶ್ಚಿತ ಸಮಯಕ್ಕೆ ಸರಿಯಾಗಿ ಇಬ್ಬರು ಸೈಕಲ್ ಸವಾರರು 'ಅ' ಮತ್ತು 'ಗ' ನಿಂದ ಹೊರಟು ಪರಸ್ಪರ ಅಭಿಮುಖವಾಗಿ ಗಂಟೆಗೆ ೨೫ ಕಿ. ಮೀ. ವೇಗದಲ್ಲಿ ಪ್ರಯಾಣ ಮಾಡುತ್ತಿದ್ದಾರೆ.

'ಅ' ನಿಂದ ಸೈಕಲ್ ಸವಾರ ಹೊರಟ ಕ್ಷಣದಿಂದಲೇ ಅವನ ಸೈಕಲ್‌ನ ಹಿಡಿಯ ಮೇಲೆ ಕುಳಿತಿದ್ದ ನೊಣವೊಂದು 'ಗ' ದಿಕ್ಕಿನಲ್ಲಿ ಗಂಟೆಗೆ ೩೦ ಕಿ. ಮೀ. ವೇಗದಲ್ಲಿ ನೇರವಾಗಿ ಹಾರುತ್ತಾ ಎದುರಿಗೆ ಸಿಕ್ಕ 'ಗ' ನಿಂದ ಹೊರಟ ಸೈಕಲ್‌ನ ಹಿಡಿಯನ್ನು ಮುಟ್ಟಿ ಕೂಡಲೇ ಹಿಂದಿರುಗಿ ಮತ್ತೆ ಅದೇ ವೇಗದಲ್ಲಿ 'ಅ' ದಿಕ್ಕಿನಲ್ಲಿ ನೇರವಾಗಿ ಹಾರುತ್ತ 'ಅ' ದಿಕ್ಕಿನಿಂದ ಬರುತ್ತಿರುವ ಸೈಕಲ್‌ನ ಹಿಡಿಯನ್ನು ಮುಟ್ಟಿ ಕೂಡಲೇ ಹಿಂದಿರುಗಿ 'ಗ' ದಿಕ್ಕಿನೆಡೆಗೆ ನೇರವಾಗಿ ಹಾರುತ್ತದೆ. ಹೀಗೆ ಒಂದೇ ವೇಗದಲ್ಲಿ ಹಿಂದೆ-ಮುಂದೆ ಹಾರುತ್ತ ಎರಡೂ ಸೈಕಲ್‌ಗಳನ್ನು ಮತ್ತೆ ಮತ್ತೆ ಮುಟ್ಟುತ್ತಾ, ರಸ್ತೆಯ ನಡುವೆ ಎರಡೂ ಸೈಕಲ್‌ಗಳು ಪರಸ್ಪರ ಸಂಧಿಸುವವರೆಗೆ ನೊಣ ತನ್ನ ಹಾರಾಟವನ್ನು ಮುಂದುವರಿಸುತ್ತದೆ. ಹಾಗಾದರೆ ನೊಣ ಹಾರಿದ ಒಟ್ಟು ದೂರವೆಷ್ಟು ?

ನವೆಂಬರ್ ಪ್ರಶ್ನೆಗೆ ಸರಿಯಾದ ಉತ್ತರವನ್ನು ಚಂದ್ರಶೇಖರ ಹ. ದೇವಾಂಗದ, ರಾಣೆಬೆನ್ನೂರು, ಅವರು ಕಳುಹಿಸಿದ್ದಾರೆ. ಅವರಿಗೆ ಅಭಿನಂದನೆಗಳು. ಉತ್ತರವಷ್ಟೇ ಅಲ್ಲದೆ ಅದನ್ನು ವಿಶದಪಡಿಸಲು ಆಟದ ಒಂದು ಉದಾಹರಣೆಯನ್ನು ಕೊಟ್ಟಿದ್ದಾರೆ. ಅದನ್ನು ಕೆಳಗೆ ಕೊಟ್ಟಿದ್ದೇವೆ.

ಆಟದ ಒಂದು ಉದಾಹರಣೆ

| ಹಂತ | | | ಉಳಿಯುವ ಕವಡೆಗಳ ಸಂಖ್ಯೆ |
|---|---|---|---|
| | - | | ೩೦ |
| I | ಕ - ೨ | | ೨೮ |
| | ಖ - ೫ | ೭ | ೨೩ |
| II | ಕ - ೨ | | ೨೧ |
| | ಖ - ೩ | ೭ | ೧೮ |
| III | ಕ - ೪ | | ೧೪ |
| | ಖ - ೧ | ೭ | ೧೩ |
| IV | ಕ - ೬ | | ೭ |
| | ಖ - ೬ | ೭ | ೧ |
| V | ಕ - ೧ | | - |

## ಹೊಸತು ಪದ ಹೊಸೆತ

| | | | | | | | | |
|---|---|---|---|---|---|---|---|---|
| | 1 | | 2 | | 3 | | 4 | |
| 5 | | | 6 | 7 | | | 8 | 9 |
| 10 | | | | | | | 11 | |
| | 12 | | 13 | | 14 | | | |
| 15 | | | 16 | | | | | 17 |
| 18 | | 19 | | | | 20 | | |
| | | 21 | 22 | | 23 | | | |
| 24 | 25 | | | | | | 26 | |
| 27 | | | 28 | | | | 29 | |

**ಅಡ್ಡ**

೧. ಬಿಸ್ಮಿಲ್ಲಾಖಾನ್ ಎಂದರೆ ನೆನಪಾಗುತ್ತದೆ ಅನಾದಿ ವಾದ್ಯ — ೩
೩. ಅಡ ೨೪ರ ಸುತ್ತಲೂ ಇರುವ ಅಗಳು — ೩
೫. ಆಹಾರದಲ್ಲಿ ಕಂಡ ಸರ ! — ೨
೬. ಇಸ್ಲಾಂ ಮತದವರ ಅರಸ — ೩
೮. ದಶರಥನ ಮೊಮ್ಮಗನ 'ಅಲ್ಪ' ನಾಮ — ೨
೧೦. ಮಹಮ್ಮದೀಯರ ಲಗ್ನವಿಧಿ — ೨
೧೧. ಕೆಲಸದಿಂದ ಉಳಿ — ೨
೧೨. ಬೆಳ್ಳಿಹಬ್ಬ — ೩,೪
೧೬. ಗಣಪತಿ ಆಟ — ೩
೧೮. ಹಿಂದಿನಿಂದಾಗಲೀ, ಮುಂದಿನಿಂದಾಗಲಿ ಸಿಗುವ ಬಲಶಾಲಿ — ೩
೨೦. ಜೀವದಿಂದ ಹುಟ್ಟಿದ ಮಗ — ೩
೨೧. ಕಂಚಿನ ಘಟಕ ಲೋಹಗಳು — ೩,೨
೨೪. ಸೇನಾ ರಕ್ಷಣೆಗಾದ ಪ್ರಾಕಾರ — ೨
೨೬. 'ಅನಾಗರೀಕತೆ'ಯಲ್ಲಿ ಅಸ್ಸಾಂ ಬೆಟ್ಟಗಳ ಜನವರ್ಗ?! — ೨
೨೭. ಮೆಟ್ರಿಕ್ ಪದ್ಧತಿಯಲ್ಲಿ ಕಾಂತೀಯ ಸಾಂದ್ರತೆಯ ಮಾನಕ್ಕೆ ನಾಮ (ನೋಡಿ : ಲಂಬ ೨೫, ಅದೇ ಉತ್ತರ) — ೨
೨೮. ಸಾಲಕ್ಕಾಗಿ ಹಟ ! — ೩
೨೯. ಚಕ್ರವರ್ತಿಗೆ ತೆರಿಗೆ — ೨

**ಲಂಬ**

೧. ರಾಜ್ಯ, ದೇಶವನ್ನಾಳುವ ವ್ಯವಸ್ಥೆ — ೪
೨. ಇಪ್ಪತ್ನಾಲ್ಕು ಘಂಟೆಗಳು — ೨
೩. ಆಧಾರಕ್ಕೊಂದು ಸ್ತಂಭ — ೨
೪. ಮಧುರ ಧ್ವನಿ — ೪
೫. ಕೆಡುಕು — ೨
೭. ಈ ದೇವರು ಮಾತಿಗೆ ನಿಲುಕ — ೬
೯. ಇಲ್ಲದಂತೆ ಮಾಡುವಿಕೆ — ೨
೧೩. ಅಂಗೈ ಕೆಳಭಾಗ — ೨
೧೪. ವೃಷಭ — ೨
೧೫. ಇತ್ತೀಚೆಗೆ ಕನ್ನಡ ಸಾಹಿತ್ಯ ಸಮ್ಮೇಳನ ನಡೆದ ಸ್ಥಳ — ೫
೧೭. ನಿಜ, ಲಿಂಗೈಕ್ಯರಾದ ಕರ್ನಾಟಕದ ಏಕೀಕರಣದ ಹರಿಕಾರ — ೫
೧೯. ಅಸ್ತಂಗತದಲ್ಲಿ ಕಣ್ಮರೆಯಾದದ್ದು — ೨
೨೦. ಮಾವಿನ ಹುಳಿಸಾರು — ೨
೨೨. ಅಡುಗೆ ಬಲ್ಲವನೇ 'ಗೋಪಾಲ'? — ೩
೨೩. ನಡುವೆ 'ಕೀ' ಇಟ್ಟರೆ ತಗಲೀತು, ಎಚ್ಚರಿಕೆ! — ೩
೨೫. ಪರ್ಯಾಯ ವಿದ್ಯುತ್ ಪ್ರವಾಹದ (ಎ.ಸಿ.ಯ) ವ್ಯಾಪಕ ಬಳಕೆಗೆ ದಾರಿತೋರಿದ 'ನಿಕೊಲಾ' (ನೋಡಿ : ಅಡ್ಡ ೨೭, ಅದೇ ಉತ್ತರ) — ೨
೨೬. ಗಾದೆ ತಿಳಿದಿದ್ದರೆ, ಇದರ ಸಂತೋಷ ಸೂಕರಗೆ ತಿಳಿದೀತೇ ? — ೨

ಜಿ. ಮಲ್ಲಿಕಾರ್ಜುನ
ಪ್ರಕೃತಿ ಚಿಕಿತ್ಸೆ ಮತ್ತು ಯೋಗ ವಿಜ್ಞಾನ ಸಂಸ್ಥೆ
ಜಿಂದಾಲ್‌ನಗರ, ಬೆಂಗಳೂರು - ೫೬೦ ೦೭೩



## ನಿತ್ಯಜೀವನದಲ್ಲಿ ಮೋಟಾರು ವಾಹನ ಕಾನೂನು

*ಸಿ. ಬಸವರಾಜು*

**ಪುಟ : 56** **ಬೆಲೆ : ರೂ. 20**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

*ಯಾವುದೇ ವಾಹನಗಳ ಮಾಲಿಕರು-ಚಾಲಕರಿಗಾಗಿ ಕಾನೂನಿನ ಮಾಹಿತಿ ನೀಡುವ ಕೈಪಿಡಿ. ವಾಹನದ ಲೈಸೆನ್ಸ್, ನವೀಕರಣ, ಖರೀದಿ, ರಸ್ತೆ ನಿಯಮ ಇಂಥ ಸಣ್ಣ ಪುಟ್ಟ ವಿಷಯಗಳಿಗೆ ಕಾನೂನು ಪಾಲಿಸಿಲ್ಲವೆಂದು ಪ್ರಯಾಣದ ಮಧ್ಯೆ ತೊಂದರೆ ಅನುಭವಿಸುವವರಿಗೆ ಈ ಪುಸ್ತಕ ಸಹಕಾರಿ. ಮಾಹಿತಿಗಳು ಖರವಾಗಿವೆ. ಇತ್ತೀಚಿನ ಬದಲಾದ ಶುಲ್ಕಗಳ ವಿವರದೊಂದಿಗೆ ರಸ್ತೆ ಸಂಕೇತಗಳೆಲ್ಲವನ್ನು ಚಿತ್ರಸಹಿತ ಕೊಡಲಾಗಿದೆ.*



## ಹಾಸ-ಭಾಸ (ಹಾಸ್ಯ ಪ್ರಬಂಧಗಳು)

*ಭುವನೇಶ್ವರಿ ಹೆಗಡೆ*

**ಪುಟ : 144** **ಬೆಲೆ : ರೂ. 50**

**ಹಿಮಂತ ಪ್ರಕಾಶನ**, 1-183, ಗಾಲದಕಟ್ಟೆ ರಸ್ತೆ, ಉಪ್ಪಿನಕೋಟಿ, ಬ್ರಹ್ಮಾವರ - 576 213

*ಇದೊಂದು ಹಾಸ್ಯ ಪ್ರಬಂಧಗಳ ಸಂಕಲನ. ನಮ್ಮ ಗಮನಕ್ಕೆ ಬಾರದೆ ಅಥವಾ ನಾವು ಸಹಿಸಿಕೊಂಡು ಸುಮ್ಮನಾಗುವ ಅನೇಕ ದೈನಂದಿನ ಚಿಕ್ಕಪುಟ್ಟ ವಿಷಯಗಳಿಗೂ ರಿಯಾಯಿತಿ ತೋರಿಸದೆ ತಮ್ಮ ಹಾಸ್ಯದ ಚೌಕಟ್ಟಿನೊಳಗೆ ಬಂಧಿಸಿ ನಮ್ಮೆದುರು ಹರಡಿದ್ದಾರೆ ಲೇಖಕಿ. ತುಂಬ ಗಹನವಾದ ವಿಚಾರಗಳನ್ನೂ ತಿಳಿಹಾಸ್ಯದಲ್ಲಿ ತೇಲಿಸಿದಂತೆ ಕಂಡರೂ, ಲೇವಡಿಯ ಚಾಟಿ ಏಟಿನಿಂದ ಸಾಕಷ್ಟು ಚುರುಕುಮುಟ್ಟಿಸುವುದು ಈ ಲೇಖನಗಳ ಉದ್ದೇಶ.*



## ಬೆಳ್ಳಕ್ಕಿ ಸಾಲು

*ಡಾ|| ಬಸವರಾಜ ಸಬರದ*

**ಪುಟ : 116** **ಬೆಲೆ : ರೂ. 25**

ಪಲ್ಲವಿ ಪ್ರಕಾಶನ, ಸರಸ್ವತಿಪುರ, ವಿಶ್ವವಿದ್ಯಾಲಯ ಅಂಚೆ, ಗುಲ್ಬರ್ಗಾ-585 106

*ಪ್ರಪಂಚದ ಸುಂದರ ಮೌಲ್ಯಗಳನ್ನೆಲ್ಲ ಒಮ್ಮೆಲೇ ಎತ್ತಿ ಹಿಡಿದಂತಿರುವ ಈ ಸುಂದರ ಗೀತ ನಾಟಕದಲ್ಲಿ ಪ್ರಕೃತಿಯ ಎಲ್ಲ ಪಾತ್ರಗಳೂ ಭಾಗವಹಿಸುವಂತಿದೆ. ದರ್ಪ-ದಬ್ಬಾಳಿಕೆಗಳ ಆಳುವ ವ್ಯವಸ್ಥೆಯಲ್ಲಿನ ಅತಿರೇಕಗಳಿಂದಾಗಿ ಮಾನವರ ಜೊತೆಗೆ ಪಕ್ಷಿ-ಬೆಟ್ಟ-ಗಿಡಮರಗಳೂ ದನಿಗೂಡಿಸಿ ಅನ್ಯಾಯಕ್ಕಾಗಿ ಮರುಗುತ್ತವೆ. ಪ್ರಕೃತಿಯ ಯಾವ ಸುಂದರ ವಸ್ತುವೂ ಇಲ್ಲಿ ತಪ್ಪಿಸಿಕೊಳ್ಳುವುದಿಲ್ಲ. ಶಾಲಾಮಕ್ಕಳಿಂದ ರೂಪಕವಾಗಿ ಅಭಿನಯಿಸಬಹುದು.*



## ಸರ್. ಚಾರ್ಲ್ಸ್ ಲಯಲ್

*ಎಂ. ವೆಂಕಟಸ್ವಾಮಿ*

**ಪುಟ : 124** **ಬೆಲೆ : ರೂ. 35**

**ಕನ್ನಡ ಪುಸ್ತಕ ಪ್ರಾಧಿಕಾರ**, ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-560 018

*ಆಧುನಿಕ ಭೂ ವಿಜ್ಞಾನಕ್ಕೆ ಭದ್ರ ಬುನಾದಿ ಹಾಕಿಕೊಟ್ಟ ಜಗತ್ತಿನ ಶ್ರೇಷ್ಠ ವಿಜ್ಞಾನಿಗಳ ಸಾಲಿಗೆ ಸೇರ್ಪಡೆಯಾದ ಪ್ರಮುಖ ಭೂ ವಿಜ್ಞಾನಿ ಸರ್. ಚಾರ್ಲ್ಸ್ ಲಯಲ್ ಇವರ ಜೀವನ-ಸಾಧನೆಯನ್ನು ಈ ಕೃತಿ ಪರಿಚಯಿಸುತ್ತದೆ. ಪುಸ್ತಕದ ಲೇಖಕರೂ ವರಿಷ್ಠ ಭೂ ವಿಜ್ಞಾನಿಯೇ. ಈ ಪುಸ್ತಕಕ್ಕಾಗಿ ಬೇಕಾದ ಮಾಹಿತಿಗಳನ್ನು ಲೇಖಕರು ಬ್ರಿಟನ್ ಜಿಯಾಲಾಜಿಕಲ್ ಸರ್ವೇ ಇವರಿಂದ ಪಡೆದುಕೊಂಡು ನಮಗಾಗಿ ಪರಿಚಯಿಸಿದ್ದಾರೆ.*



## ನ್ಯಾಯಕ್ಕಾಗಿ ಮಹಿಳೆಯರ ಹೋರಾಟ

*ಡಿ. ವೆಂಕೋಬರಾವ್*

**ಪುಟ : 192** **ಬೆಲೆ : ರೂ. 50**

**ದಿವ್ಯಚಂದ್ರ ಪ್ರಕಾಶನ**, ಕರ್ನಾಟಕ ಹೌಸಿಂಗ್ ಬೋರ್ಡ್ ಕಾಲೋನಿ, ಬಸವೇಶ್ವರ ನಗರ, ಬೆಂಗಳೂರು-560 079

*ನ್ಯಾಯಕ್ಕಾಗಿ ಮೊರೆಯಿಟ್ಟ ಮಹಿಳೆಯ ಕೂಗು ಮುಗಿಲು ಮುಟ್ಟಿದ್ದರೂ ಈ ನೆಲದ ಮೇಲೆ ಆವಳಿಗೆ ಸರಿಯಾದ ಪರಿಹಾರ ಸಿಗುತ್ತಿಲ್ಲವೇಕೆ ? ಕುರುಡೂ-ಕಿವುಡೂ ಆದ ನ್ಯಾಯ ವ್ಯವಸ್ಥೆಯಲ್ಲಿ ಅರಣ್ಯ ರೋದನ ವಾದ ಸಮಸ್ಯೆಗಳಿಗೆ ಪುಸ್ತಕದಲ್ಲಿ ಉತ್ತರ ನೀಡಲಾಗಿದೆ. ಸೇವಾ ಸಂಸ್ಥೆಗಳಿಂದ ಪಡೆಯ ಬಹುದಾದ ಸಹಾಯ-ಸಲಹೆ, ಕೌಟುಂಬಿಕ ಸಮಸ್ಯೆಗಳಿಂದ ಪಾರಾಗುವ ಬಗೆ, ಉಚಿತ ಕಾನೂನು ವ್ಯವಸ್ಥೆ ಇವುಗಳನ್ನು ಸದುಪಯೋಗ ಮಾಡಿಕೊಳ್ಳುವ ಬಗ್ಗೆ ಸೂಚನೆಗಳಿವೆ.*



## ಚಹರೆ

*ಡಾ|| ಎಚ್. ಎಸ್. ಶ್ರೀಮತಿ*

**ಪುಟ : 148** **ಬೆಲೆ : ರೂ. 70**

**ಇಳಾ ಪ್ರಕಾಶನ**, 153, 4ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಚಾಮರಾಜಪೇಟೆ, ಬೆಂಗಳೂರು - 560 018

*ಇತ್ತೀಚಿನ ದಿನಗಳಲ್ಲಿ ಗಂಭೀರ ಅಧ್ಯಯನಕ್ಕೆ ಒಳಗಾದ ಮಹಿಳೆ ಬಗ್ಗೆ ಎಲ್ಲ ಮಜಲುಗಳಿಂದಲೂ ಚಿಂತನೆ ನಡೆಸಿರುವ ಹನ್ನೊಂದು ಲೇಖನಗಳ ಸಂಗ್ರಹ. ದಾನ ಕೊಡಲು ಯೋಗ್ಯಳೆಂದು ಪರಿಗಣಿತವಾಗಿದ್ದು ಎರಡನೆಯ ದರ್ಜೆಯ ಪ್ರಜೆಯಾಗಿ ಉತ್ತಮ ಅವಕಾಶಗಳಿಂದ ವಂಚಿತಳಾಗಿದ್ದ ಈಕೆಗೆ ಸ್ವಸಾಮರ್ಥ್ಯದ ಕೊರತೆ ಇದೆಯೇ ? ಎಂಬುದಾಗಿ ಲೇಖನಗಳಲ್ಲಿ ವಿಶ್ಲೇಷಿಸಲಾಗಿದೆ. ಆಕೆಯನ್ನು ನಡೆಸಿಕೊಂಡು ಬಂದ ದಾರಿಯ ಸಿಂಹಾವಲೋಕನ ಇಲ್ಲಿದೆ.*



## ಫಲ ಜ್ಯೋತಿಷ ನಂಬುವಿರಾ ?

*ಡಾ|| ಎಸ್. ಬಾಲಚಂದ್ರರಾವ್*

**ಪುಟ : 120** **ಬೆಲೆ : ರೂ. 40**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - 560 001

*ಚಂದ್ರ ಹಾಗೂ ಮಂಗಳನ ಮೇಲೆ ಮಾನವನ ಹೆಜ್ಜೆಯ ಗುರುತು ಮೂಡಿದ್ದರೂ ಆಕಾಶಕಾಯಗಳು ಮಾನವನ ಒಳಿತು-ಕೆಡಕುಗಳನ್ನು ನಿರ್ಧರಿಸುತ್ತವೆಯೆಂಬ ಅವೈಜ್ಞಾನಿಕ ತಿಳುವಳಿಕೆಯನ್ನು ಹೋಗಲಾಡಿಸುವ ಪ್ರಯತ್ನವಾಗಿ ಈ ಪುಸ್ತಕ ಮೂಡುವಂತಿದ್ದರೂ ಕಾಕತಾಳೀಯವಾಗಿ ಸಂಭವಿಸಿದ ಘಟನೆಗಳೇ ಬಂಡವಾಳವಾಗಿರುವ ಜ್ಯೋತಿಷಶಾಸ್ತ್ರದ ಬಗ್ಗೆ ಆಳವಾದ ಅಧ್ಯಯನ ದೊಂದಿಗೆ ವಸ್ತುನಿಷ್ಠವಾದ ಉದಾಹರಣೆ ಸಹಿತ ನಿಜಸಂಗತಿಗಳನ್ನು ತಿಳಿಸಿದ್ದಾರೆ.*



## ಅಭಿವ್ಯಕ್ತಿ

*ಡಾ|| ಜಿ. ಶ್ರೀನಿವಾಸನ್*

**ಪುಟ : 52** **ಬೆಲೆ : ರೂ. 15**

**ಸೊಂದಲಗೆರೆ ಪ್ರಕಟಣಾಲಯ**, ನಂ. ಎಲ್. ಆರ್. 30, ನಂದಿನಿ ಲೇ ಔಟ್, ಬೆಂಗಳೂರು - 560 096

*ಒಳ್ಳೆಯ ವಿಚಾರ-ಅನುಭವಗಳನ್ನು ಪರಸ್ಪರ ಹಂಚಿಕೊಂಡಾಗ ಇಬ್ಬರ ವ್ಯಕ್ತಿತ್ವವೂ ವಿಕಾಸವಾಗುತ್ತದೆ. ಇಂಥ ಅನುಭವಗಳು ಬೇರೊಬ್ಬರಿಗೆ ಮಾರ್ಗದರ್ಶಿಯಾಗಿರಲೂ ಸಾಧ್ಯ. ತಮ್ಮ ಜೀವನದಲ್ಲಿ ಒದಗಿಬಂದ ರಸಮಯ ಸನ್ನಿವೇಶಗಳನ್ನು, ಸುವಿಚಾರಗಳನ್ನು ತಮ್ಮ ಚಿಂತನೆಯ ಒರೆಗೆ ಹಚ್ಚಿ ನಮ್ಮೊಂದಿಗೆ ಲೇಖಕರು ಹಂಚಿಕೊಂಡಿದ್ದಾರೆ. ಇವು ಲಘು ಪ್ರಬಂಧಗಳಾಗಿದ್ದು ಓದಿ ಸುಲಭವಾಗಿ ಮರೆಯುವಂಥವುಗಳಲ್ಲ.*

- ಇಂದಿರಾ ಕುಮಾರಿ

# ಮತ್ತೆ ವಿಸ್ಫೋಟಗೊಂಡಿರುವ ಪ್ಯಾಲಸ್ಟೈನ್ ಪ್ರಶ್ನೆ




ಸೀಯಾರ್ಕೆ

ಐವತ್ತು ವರ್ಷಗಳಿಗೂ ಮೇಲಾದರೂ ಪ್ಯಾಲಸ್ಟೈನ್ ಅರಬ್ಬರ ತಾಯ್ನಾಡಿನ ಸಮಸ್ಯೆ ಬಗೆಹರಿದಿಲ್ಲ. ಇದಕ್ಕೆ ಮೂಲ ಕಾರಣ ಇಸ್ರೇಲಿನ ಮೊಂಡುತನ ಒಂದು ಕಡೆಯಾದರೆ, ಅರಬ್ ರಾಷ್ಟ್ರಗಳ ಅನೈಕ್ಯತೆ ಇನ್ನೊಂದು ಕಡೆ. ಕಳೆದ ಕೆಲವು ದಿನಗಳಿಂದ ಇಸ್ರೇಲಿ ಪಡೆಗಳು ಮತ್ತು ಪ್ಯಾಲಸ್ತೀನಿಯನ್ ಅರಬ್ಬರ ನಡುವೆ ನಡೆದಿರುವ ಘರ್ಷಣೆಗಳಲ್ಲಿ ಸುಮಾರು ಇನ್ನೂರು ಜನ ಮಡಿದಿದ್ದಾರೆ. ಮಡಿದಿರುವವರಲ್ಲಿ ಹೆಚ್ಚಿನವರು ಪ್ಯಾಲಸ್ತೀನಿಯನ್ನರೆ. ಅರಬ್ ರಾಷ್ಟ್ರಗಳಲ್ಲಿ ಜನತೆ ಪ್ಯಾಲಸ್ತೀನಿಯನ್ನರ ಹೋರಾಟಕ್ಕೆ ಬೆಂಬಲವಾಗಿ ಪ್ರದರ್ಶನಗಳನ್ನು ನಡೆಸುತ್ತಿದ್ದರೂ ಅರಬ್ ರಾಷ್ಟ್ರಗಳ ಸರಕಾರಗಳು ಒಂದುಗೂಡಿ ಇಸ್ರೇಲಿನ ಮೇಲೆ ಒತ್ತಡ ತರುವುದರಲ್ಲಿ ವಿಫಲಗೊಂಡಿವೆ. ಇಸ್ರೇಲಿ ಪ್ರಧಾನಿ ಯಹುದ್ ಬರಾಕ್ ಮತ್ತು ಪ್ಯಾಲಸ್ತೀನಿಯನ್ನರ ನಾಯಕ ಯಾಸರ್ ಅರಾಫತ್‌ರ ನಡುವೆ ಘರ್ಷಣೆ ತಡೆದು ನಿಲ್ಲಿಸಲು ಒಪ್ಪಂದವಾಗಿದ್ದರೂ ಅದು ಕಾರ್ಯಗತವಾಗದೆ ಹೋಗಿದೆ. ತನ್ನ ಅಧಿಕಾರಾವಧಿಯ ಕೊನೆಯ ದಿನಗಳಲ್ಲಿ ಇಸ್ರೇಲ್ ಮತ್ತು ಪ್ಯಾಲಸ್ಟೈನ್ ಅರಬ್ಬರ ಮಧ್ಯೆ ದೃಢವಾದ ಒಂದು ಒಪ್ಪಂದ ಕುದುರಿಸಲು ಅಮೆರಿಕದ ಅಧ್ಯಕ್ಷ ಕ್ಲಿಂಟನ್ ನಡೆಸಿದ ಪ್ರಯತ್ನ ವಿಫಲಗೊಂಡಿದೆ. ಇಸ್ರೇಲಿನ ಹಟಮಾರಿತನದ ಧೋರಣೆಯೇ ಅದಕ್ಕೆ ಕಾರಣ. ಇಸ್ರೇಲಿನ ಆಡಳಿತಗಾರರು ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆಯ ನಾಯಕರೊಂದಿಗೆ ಮಾಡಿಕೊಂಡ ಯಾವ ಒಪ್ಪಂದವನ್ನೂ ಸಮರ್ಪಕವಾಗಿ ಕಾರ್ಯಗತಮಾಡಿಲ್ಲ. ಅಮೆರಿಕದ ಮಧ್ಯಸ್ತಿಕೆಯಿಂದ ೧೯೯೩ರಲ್ಲಿ ಪ್ಯಾಲಸ್ಟೈನ್ ಅರಬ್ಬರಿಗೆ ಸೀಮಿತ ಸ್ವಯಮಾಡಳಿತ ನೀಡುವ ಒಪ್ಪಂದವಾದರೂ ಅದನ್ನು ಇಸ್ರೇಲ್ ಸಮರ್ಪಕವಾಗಿ ಕಾರ್ಯಗತ ಮಾಡದೇ ಹೋಗಿರುವುದೇ ಇಂದಿನ ಪರಿಸ್ಥಿತಿಗೆ ಮೂಲ.

ಪಶ್ಚಿಮ ಏಷ್ಯಾದ ಇಸ್ರೇಲ್ ಮತ್ತು ಅರಬ್ ರಾಷ್ಟ್ರಗಳ ಮಧ್ಯೆ ನಡೆದ ಎರಡು ಯುದ್ಧಗಳಲ್ಲೂ ಪ್ಯಾಲಸ್ಟೈನ್ ಅರಬ್ಬರ ಪ್ರಶ್ನೆಯೇ ಮುಖ್ಯವಾದ್ದಾಗಿತ್ತು. ಈ ಯುದ್ಧಗಳಲ್ಲಿ ಇಸ್ರೇಲ್ ಆಕ್ರಮಿಸಿಕೊಂಡ ಕೆಲಭಾಗಗಳು ಇನ್ನೂ ಅದರ ವಶದಲ್ಲೇ ಇವೆ. ಎರಡು ಯುದ್ಧಗಳ ಕಾಲದಲ್ಲೂ ಐಕ್ಯತೆಯಿಂದ ಒಂದಾಗಿದ್ದ ಅರಬ್ ರಾಷ್ಟ್ರಗಳು ಕಾಲಕ್ರಮೇಣ ಅಮೆರಿಕದ ಒತ್ತಡಕ್ಕೆ ಮಣಿದು ಇಸ್ರೇಲಿನೊಂದಿಗೆ ಪ್ರತ್ಯೇಕ ಶಾಂತಿ ಒಪ್ಪಂದ ಮಾಡಿಕೊಂಡದ್ದೇ ಇಂದು ಅರಬ್ ರಾಷ್ಟ್ರಗಳಲ್ಲಿ ಪ್ಯಾಲಸ್ಟೈನ್ ವಿಚಾರದಲ್ಲಿ ಅಸಡ್ಡೆಗೆ ಕಾರಣ. ಸತತವಾಗಿ ಹೋರಾಟ ನಡೆಸುತ್ತ ಬಂದಿರುವ ಪ್ಯಾಲಸ್ಟೈನ್ ಅರಬ್ಬರು ತಮ್ಮ ತಾಯ್ನಾಡಿನ ಸ್ಥಾಪನೆಗಾಗಿ ಎಂಥ ತ್ಯಾಗಗಳಿಗಾದರೂ ಸಿದ್ಧ ಎಂಬುದನ್ನು ತೋರಿಸಿದ್ದಾರೆ. ಅದರಿಂದಾಗಿಯೇ ಇಸ್ರೇಲ್ ಪ್ಯಾಲಸ್ತೀನಿಯನ್ನರ ಹೋರಾಟವನ್ನು ಮಾನ್ಯಮಾಡಿ ಸ್ವಯಮಾಡಳಿತ ವ್ಯವಸ್ಥೆ ಸ್ಥಾಪಿಸಿರುವುದು. ಪ್ಯಾಲಸ್ಟೈನ್ ಅರಬ್ಬರ ಸ್ವಾತಂತ್ರ್ಯ ಸಮರಕ್ಕೆ ವಿಶ್ವಸಂಸ್ಥೆ ಹಾಗೂ ಅಲಿಪ್ತ ಚಳವಳಿ ಮನ್ನಣೆ ಬಹಳ ವರ್ಷಗಳ ಹಿಂದೆಯೇ ಲಭಿಸಿತು. ಇಸ್ರೇಲ್ ತನ್ನ ಧೋರಣೆಯನ್ನು ಬದಲಿಸಿ ಪ್ಯಾಲಸ್ಟೈನಿಗೆ ಸೇರಬೇಕಾದ ಪ್ರದೇಶಗಳನ್ನು ಬಿಟ್ಟುಕೊಟ್ಟು ಪ್ಯಾಲಸ್ಟೈನ್ ರಾಜ್ಯವನ್ನು ಮಾನ್ಯ ಮಾಡುವವರೆಗೆ ಹೋರಾಟ ಮುಂದುವರಿಯುವುದು ಖಚಿತ.

ವಿಶ್ವಸಂಸ್ಥೆಯ ಮಹಾಸಭೆಯು ೧೯೪೭ರಲ್ಲಿ ಪ್ಯಾಲಸ್ಟೈನ್ ಅರಬ್ಬರು ಮತ್ತು ಯೆಹೂದ್ಯರಿಗಾಗಿ ಪ್ರತ್ಯೇಕ ರಾಜ್ಯಗಳನ್ನು ನಿರ್ಮಿಸಲು ಮಾಡಿದ ಶಿಫಾರಸ್ಸು ಕಾರ್ಯಗತವಾಗಿದ್ದರೆ ಈ ಸಮಸ್ಯೆ ಇರುತ್ತಿರಲಿಲ್ಲ. ಅರಬ್ ರಾಷ್ಟ್ರಗಳಿಗೆ ಆಗ ಅದು ಸಮ್ಮತವಾಗಲಿಲ್ಲ. ಜನಗಳಲ್ಲಿ ಒಡಕುಂಟುಮಾಡಿ ವಿಷಬೀಜ ಬಿತ್ತುವುದರಲ್ಲಿ ನಿಷ್ಣಾತರಾಗಿದ್ದ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ೧೯೪೮ರಲ್ಲಿ ಇಸ್ರೇಲ್ ರಾಷ್ಟ್ರವನ್ನು ಸ್ಥಾಪನೆ ಮಾಡಿ ಆ ಪ್ರದೇಶದಿಂದ ಕಾಲ್ತೆಗೆದರು. ಸಹಸ್ರಾರು ಮಂದಿ ಪ್ಯಾಲಸ್ಟೈನ್ ಅರಬ್ಬರು ನಿರಾಶ್ರಿತರಾಗಿ ನೆರೆಯ ಅರಬ್ ದೇಶಗಳಿಗೆ ಹೋದರು. ಹೊಸದಾಗಿ ನಿರ್ಮಾಣಗೊಂಡಿದ್ದ ಇಸ್ರೇಲ್ ಮತ್ತು ಅರಬ್ ರಾಷ್ಟ್ರಗಳ ಮಧ್ಯೆ ಸಶಸ್ತ್ರ ಘರ್ಷಣೆಗಳಾದವು. ಈ ಯುದ್ಧದಲ್ಲಿ ಇಸ್ರೇಲ್ ಅರಬ್ ಪ್ರದೇಶಗಳನ್ನು ಆಕ್ರಮಿಸಿಕೊಂಡು ತನ್ನ ಸರಹದ್ದನ್ನು ವಿಸ್ತರಿಸಿಕೊಂಡಿತು. ಬೆಳೆಯುತ್ತಿದ್ದ ಅರಬ್ ರಾಷ್ಟ್ರೀಯತೆಯನ್ನು ಬಗ್ಗು ಬಡಿಯಲು, ಅರಬ್ ರಾಷ್ಟ್ರಗಳನ್ನು ನಿಯಂತ್ರಣದಲ್ಲಿರಿಸಿಕೊಳ್ಳಲು ಅಮೆರಿಕಾಗೆ ಇಸ್ರೇಲ್ ಒಳ್ಳೆಯ ನೆಲೆಯಾಯಿತು. ಅಮೆರಿಕ ಇಸ್ರೇಲಿಗೆ ಆಧುನಿಕ ಶಸ್ತ್ರಾಸ್ತ್ರಗಳನ್ನು, ಎಲ್ಲ ಬಗೆಯ ನೆರವನ್ನು ನೀಡಿ ಬೆಂಬಲಿಸಿತು. ತೈಲ ಸಂಪತ್ತಿನಿಂದ ಕೂಡಿರುವ ಮಧ್ಯಪ್ರಾಚ್ಯ ಪ್ರದೇಶದಲ್ಲಿ ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಅಮೆರಿಕ ಇಸ್ರೇಲನ್ನು ಉಪಯೋಗಿಸಿಕೊಂಡಿತು. ಈ ಸೆಣಸಾಟದಲ್ಲಿ ಸಂಕಷ್ಟಗಳಿಗೀಡಾದ್ದು ಪ್ಯಾಲಸ್ಟೈನ್ ಅರಬ್ಬರು.

ಇಸ್ರೇಲ್ ತಾನು ಆಕ್ರಮಿಸಿಕೊಂಡಿರುವ ಪ್ರದೇಶಗಳಲ್ಲಿ ಸಹಸ್ರಾರು ಯೆಹೂದ್ಯ ಕುಟುಂಬಗಳಿಗೆ ವಸತಿಗಳನ್ನು ನಿರ್ಮಿಸಿ ನೆಲೆಗೊಳಿಸಿದೆ. ಗಾಜಾ ಪಟ್ಟಿ ಮತ್ತು ವೆಸ್ಟ್ ಬ್ಯಾಂಕ್ ಪ್ರದೇಶದಲ್ಲಿ ನೆಲೆಗೊಳಿಸಿರುವ ಈ ಯೆಹೂದ್ಯ ಕುಟುಂಬಗಳನ್ನು ಸ್ಥಳಾಂತರಿಸಿ, ಪ್ಯಾಲಸ್ಟೈನ್‌ಗೆ ವಹಿಸಿಕೊಡುವುದು ಒಂದು ಕಡೆಯಾದರೆ, ವಿವಾದಾತ್ಮಕವಾದ ಇನ್ನೊಂದು ಪ್ರಶ್ನೆ ಜೆರೂಸಲೆಮ್ ನಗರಕ್ಕೆ ಸಂಬಂಧಿಸಿದ್ದು. ಈ ಜೆರೂಸಲೆಮ್ ನಗರ ಯೆಹೂದ್ಯರಿಗೂ, ಕ್ರಿಶ್ಚಿಯನ್ನರಿಗೂ, ಅರಬ್ ಮುಸಲ್ಮಾನರಿಗೂ ಪವಿತ್ರವಾದ ಯಾತ್ರಾಸ್ಥಳ. ಇಸ್ರೇಲ್ ಜೆರೂಸಲೆಮ್ ಅನ್ನು ತನ್ನ ರಾಜಧಾನಿ ಎಂದು ಘೋಷಿಸಿದೆ. ಪ್ಯಾಲಸ್ಟೈನ್ ಅರಬ್ಬರು ಅದು ತಮಗೆ ಸೇರಿದ ಪ್ರದೇಶವೆಂದು ಹೇಳುತ್ತಿದ್ದಾರೆ. ಇದೊಂದು ಬಗೆಹರಿಯದ ವಿವಾದ. ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆಯ ನಾಯಕ ಯಾಸರ್ ಅರಾಫತ್‌ರೊಂದಿಗೆ ಇಸ್ರೇಲಿನ ಪ್ರಧಾನಿ ಮಾಡಿಕೊಂಡಿರುವ ಒಪ್ಪಂದಕ್ಕೆ ಯೆಹೂದ್ಯವಾದಿಗಳ ತೀವ್ರವಾದ ವಿರೋಧವಿದೆ, ಹಾಗೆಯೇ ಪ್ಯಾಲಸ್ಟೈನ್ ಅರಬ್ಬರ ವಿವಿಧ ಹೋರಾಟ ತಂಡಗಳ ವಿರೋಧವೂ ಇದೆ. ಅದರಿಂದಾಗಿ ಎರಡೂ ಕಡೆ ಒಪ್ಪಂದಗಳು ಸರಿಯಾಗಿ ಕಾರ್ಯಗತವಾಗದೆ ಹೋಗಿವೆ. ಪ್ಯಾಲಸ್ಟೈನ್ ಅರಬ್ಬರ ಬೇಡಿಕೆಯನ್ನು ಮಾನ್ಯಮಾಡಿ, ಪ್ಯಾಲಸ್ಟೈನ್ ರಾಜ್ಯದ ಸ್ಥಾಪನೆಗೆ ಅನುವು ಮಾಡಿಕೊಡುವಂತೆ ಇಸ್ರೇಲಿನ ಮೇಲೆ ಒತ್ತಡ ತರುವುದು ಎಲ್ಲ ಪ್ರಜಾಪ್ರಭುತ್ವ ರಾಷ್ಟ್ರಗಳ ಕರ್ತವ್ಯವಾಗಿದೆ. ಅಮೆರಿಕದ ಮಧ್ಯಸ್ತಿಕೆಯಿಂದ ನಡೆಯುವ ತೇಪೆ ಕೆಲಸದಿಂದ ಪ್ರಯೋಜನವಿಲ್ಲ ಎಂಬುದು ಇಂದಿನ ವಿದ್ಯಮಾನಗಳಿಂದ ರುಜವಾತಾಗಿದೆ.

ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆ ಸ್ವಾತಂತ್ರ್ಯಕ್ಕಾಗಿ ನಡೆಸುತ್ತಿರುವ ಹೋರಾಟಕ್ಕೆ ಎಲ್ಲ ಪ್ರಜಾಪ್ರಭುತ್ವ ರಾಷ್ಟ್ರಗಳೂ ಬೆಂಬಲ ನೀಡಿವೆ. ವಿಶ್ವಸಂಸ್ಥೆಯಲ್ಲಿ ಈ ಸಂಸ್ಥೆಗೆ ಪ್ರಾತಿನಿಧ್ಯ ದೊರೆತದ್ದೂ ಕೂಡ ಈ ರಾಷ್ಟ್ರಗಳ ಒತ್ತಾಯದಿಂದ. ಅಲಿಪ್ತ ಚಳವಳಿ ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆಗೆ ಪೂರ್ಣ ಸದಸ್ಯತ್ವ ನೀಡಿ ಮಾನ್ಯಮಾಡಿತು. ಪ್ಯಾಲಸ್ಟೈನ್ ಜನತೆಯ ಹೋರಾಟಕ್ಕೆ ಎಲ್ಲ ರೀತಿಯಲ್ಲು ಬೆಂಬಲ ನೀಡಿದ್ದಲ್ಲದೆ ಅಂತರರಾಷ್ಟ್ರೀಯ ವೇದಿಕೆಗಳಲ್ಲಿ ಅವರ ಬೇಡಿಕೆಯನ್ನು ಎತ್ತಿಹಿಡಿಯಿತು. ಭಾರತದ ಜನತೆ ಹಾಗೂ ಸರಕಾರ ಪ್ಯಾಲಸ್ಟೈನ್ ಅರಬ್ಬರ ಹೋರಾಟಕ್ಕೆ ಸತತವಾದ ಬೆಂಬಲ ನೀಡಿದೆ. ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆಯ ನಾಯಕ ಯಾಸರ್ ಅರಾಫತ್‌ಗೆ ಯಾವತ್ತೂ ರಾಷ್ಟ್ರವೊಂದರ ಅಧಿಪತಿಗೆ ನೀಡುವ ಗೌರವವನ್ನು ನೀಡಿದೆ. ಭಾರತದಲ್ಲಿರುವ ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆಯ ಪ್ರತಿನಿಧಿಗೆ ರಾಯಭಾರಿಗಳಿಗೆ ನೀಡುವ ಗೌರವವನ್ನು ನೀಡಿದೆ. ಆದರೆ ಈಚೆಗೆ ಅಧಿಕಾರದಲ್ಲಿರುವ ಭಾರತೀಯ ಜನತಾ ಪಕ್ಷದ ನೇತೃತ್ವದಲ್ಲಿರುವ ಸರಕಾರ ಪ್ಯಾಲಸ್ಟೈನ್ ಅರಬ್ಬರಿಗೆ ಬೆಂಬಲ ಸೂಚಿಸುವುದಕ್ಕೆ ಹಿಂದೇಟು ಹಾಕುತ್ತಿರುವುದು ವಿಷಾದಕರ. ಪ್ರಾಯಶಃ ಇಸ್ರೇಲಿನೊಂದಿಗೆ ಗೃಹ ಸಚಿವ ಅಡ್ವಾನಿ ಬೆಸೆದಿರುವ ಹೊಸ ಸಂಬಂಧ ಇದಕ್ಕೆ ಕಾರಣವಿರಬಹುದು. ಪ್ಯಾಲಸ್ಟೈನ್ ಜನತೆಯ ಮೇಲೆ ಈಚಿನ ದಿನಗಳಲ್ಲಿ ಇಸ್ರೇಲ್ ನಡೆಸಿರುವ ದೌರ್ಜನ್ಯವನ್ನು ಭಾರತ ಸರಕಾರ ಅಧಿಕೃತವಾಗಿ ಖಂಡಿಸಿಲ್ಲ, ಹಾಗೆಯೇ ಪ್ಯಾಲಸ್ಟೈನ್ ಜನತೆಗೆ ಬೆಂಬಲವನ್ನೂ ಸೂಚಿಸಿಲ್ಲ. ಭಾರತ ಸರಕಾರದ ಈ ಮೌನವನ್ನು ಅರಬ್ ರಾಷ್ಟ್ರಗಳೂ ಗಮನಿಸಿವೆ. ಇಷ್ಟರವರೆಗೆ ಪಕ್ಷ ಭೇದವಿಲ್ಲದೆ ಎಲ್ಲ ರಾಜಕೀಯ ಪಕ್ಷಗಳ ಸಮ್ಮತಿ ಪಡೆದಿದ್ದ ನೀತಿಯನ್ನು ವಾಜಪೇಯಿ ಸರಕಾರ ಏಕಾಏಕಿಯಾಗಿ ಬದಲಿಸಿರುವುದು ಖಂಡನೀಯ. ಇದು ವಿದೇಶಾಂಗ ನೀತಿಯಲ್ಲಿ ಸರಕಾರ ಹೆಚ್ಚು ಹೆಚ್ಚಾಗಿ ಅಮೆರಿಕ ಪರವಾದ ಧೋರಣೆ ಅನುಸರಿಸುತ್ತಿರುವುದಕ್ಕೆ ಇನ್ನೊಂದು ನಿದರ್ಶನ. ○○

# ಯೋಗ ಪ್ರವೇಶ - ೧೭

ಜಿ. ರಾಮಕೃಷ್ಣ

ಧನುರಾಸನದಲ್ಲಿ ಎರಡು ಸಂಪ್ರದಾಯಗಳಿವೆ. ಮೂಲತಃ ದು ಭುಜಂಗಾಸನ ಮತ್ತು ಶಲಭಾಸನಗಳ ಮಿಶ್ರಣ. ಆ ರಡೂ ಆಸನಗಳಿಂದ ಲಭಿಸುವ ಉಪಯೋಗವು ಸ್ವಲ್ಪ ಕಡಿಮೆ ಟ್ಟದಲ್ಲಿ ಧನುರಾಸನದಿಂದಲೂ ಲಭಿಸುತ್ತದೆ. ಹೊಟ್ಟೆಯ ಾಗದಲ್ಲಿ ಶಲಭಾಸನದಲ್ಲಿರುವಷ್ಟು ಒತ್ತಡವು ಈ ಆಸನದಿಂದ ುಂಟಾಗುವುದಿಲ್ಲ, ಏಕೆಂದರೆ, ಪೂರ್ಣ ಉಚ್ಛ್ವಾಸದಿಂದ ಕೂಡ ವಪೆಯು ಕರುಳಿನ ಭಾಗದ ಮೇಲೆ ಶಲಭಾಸನದಲ್ಲಿ ತರುವಷ್ಟು ಒತ್ತಡವನ್ನು ತರುವುದಿಲ್ಲ. ಹಿಂಭಾಗದ ಮಾಂಸಖಂಡಗಳ ದೃಷ್ಟಿಯಿಂದ ನೋಡಿದರೆ ಭುಜಂಗಾಸನವು ನೀಡುವಷ್ಟು ವ್ಯಾಯಾಮ ಸೌಖ್ಯವನ್ನು ಧನುರಾಸನವು ನೀಡುವುದಿಲ್ಲ, ಭುಜಂಗಾಸನದಲ್ಲಿ ಆ ಹಿಂಭಾಗದ ಸ್ನಾಯುಗಳೇ ಕ್ರಿಯಾಶೀಲ ಅಂಗಗಳು; ಆದರೆ ಧನುರಾಸನದಲ್ಲಿ ಕೈ-ಕಾಲುಗಳು ಆ ್ಥಾನವನ್ನು ಪಡೆಯುತ್ತವೆ. ಭುಜಂಗಾಸನದಲ್ಲಿ ಬೆನ್ನುಹುರಿಯ ಆಕುಂಚನ ಮತ್ತು ಸಡಿಲತೆ ಸ್ಪಷ್ಟವಾಗಿ ಗುರುತಿಸಲ್ಪಡುತ್ತವೆ. ಧನುರಾಸನದಲ್ಲಿ ಆ ಲಕ್ಷಣವಿಲ್ಲ. - ಆದರೆ ಭುಜಂಗಾಸನ ಮತ್ತು ಶಲಭಾಸನಗಳಲ್ಲಿ ಇಲ್ಲದ ಒಂದು ವೈಶಿಷ್ಟ್ಯ ಧನುರಾಸನದಲ್ಲಿದೆ. ಗುದನಾಳದ ಎರಡೂ ಕಡೆಯ ಸ್ನಾಯುಗಳು ಹಾಗೂ ಪೃಷ್ಠದ ಮೂಳೆ ಕೀಲುಗಳನ್ನು ಹಿಗ್ಗಿಸುವ ಹೊಟ್ಟೆಯ ಮಾಂಸಖಂಡಗಳು ಈ ಆಸನದಲ್ಲಿ ವಿಶೇಷವಾಗಿ ಚಾಚಲ್ಪಡುತ್ತವೆ. ಎದೆಯ ಭಾಗ



ವಜ್ರಾಸನ



ಧನುರಾಸನ

ಮತ್ತು ತೊಡೆಗಳು ಏಕಕಾಲದಲ್ಲಿ ಹಿಂದಕ್ಕೆ ಎತ್ತಲ್ಪಡುವುದೇ ಇದಕ್ಕೆ ಾರಣ.

ಈ ಆಸನದ ಎರಡು ಸಂಪ್ರದಾಯಗಳನ್ನು ಠಪ್ರದೀಪಿಕೆ ಮತ್ತು ಘೇರಂಡ ಸಂಹಿತೆ ದಾಖಲಿಸಿವೆ. ಠಪ್ರದೀಪಿಕೆಯ ಸೂಚನೆ ಹೀಗಿದೆ: ಹೊಟ್ಟೆಯ ಮೇಲೆ ಮಲಗಿ ಕಾಲುಗಳ ಹೆಬ್ಬೆರಳುಗಳನ್ನು ಕೈಗಳಿಂದ ಹಿಡಿದು ಅವನ್ನು ಕಿವಿಗಳವರೆಗೆ ಎಳೆದುತಂದರೆ ಬಿಲ್ಲಿನ ರೂಪದಲ್ಲಿ ಶರೀರವು ಬಗ್ಗಿರುತ್ತದೆ.

(ಪಾದಾಂಗುಷ್ಠೌ ತು ಪಾಣಿಭ್ಯಾಂ ಗೃಹೀತ್ವಾ ಶ್ರವಣಾವಧಿ। ಧನುರಾಕರ್ಷಣಂ ಕುರ್ಯಾತ್ ಧನುರಾಸನಮುಚ್ಯತೇ॥ ಹ.ಪ್ರ. ೧. ೨೫). "ಪಾದಾಂಗುಷ್ಠೌ" ಮತ್ತು "ಪಾಣಿಭ್ಯಾಂ" ಎಂಬಲ್ಲಿ ದ್ವಿವಚನ ಪ್ರಯೋಗವಿರುವುದರಿಂದ ಎರಡೂ ಕಾಲುಗಳ ಹೆಬ್ಬೆಟ್ಟುಗಳನ್ನು ಕಿವಿಗಳ ಬಳಿಗೆ ತರಬೇಕೆಂಬುದು ಸ್ಪಷ್ಟವಿದೆ. ಇದಕ್ಕೆ ಸ್ವಲ್ಪ ಭಿನ್ನವಾದ್ದು ಘೇರಂಡ ಸಂಹಿತೆಯ ಸೂಚನೆ: ಹೊಟ್ಟೆಯ ಮೇಲೆ ಮಲಗಿ ಕಾಲುಗಳನ್ನು ಕಡ್ಡಿಗಳಂತೆ ನೀಡಬೇಕು. ಕಾಲುಗಳನ್ನು ಮಡಿಚಿ ಅವನ್ನು ಕೈಗಳಿಂದ ಹಿಡಿಯಬೇಕು. ಆಮೇಲೆ ಶರೀರದ ಮುಂಭಾಗ ಹಾಗೂ ಹಿಂಭಾಗಗಳನ್ನು ಮೇಲಕ್ಕೆತ್ತಿ ಧನುಸ್ಸಿನ ಆಕಾರವನ್ನು ಹೊಂದಬೇಕು (ಪ್ರಸಾರ್ಯ ಪಾದೌ ಭುವಿ ದಂಡರೂಪೌ ಕರೌ ಚ ಪೃಷ್ಠೇ ಧೃತಪಾದಯುಗ್ಮಮ್। ಕೃತ್ವಾ ಧನುರ್ವತ್ ಪರಿವರ್ತಿತಾಂಗಂ ನಿಗದ್ಯತೇ ವೈ ಧನುರಾಸನಂ ತತ್ ॥ (೨.೧೮).

ಆಸನವನ್ನು ಮಾಡುವಾಗಿನ ಘಟ್ಟಗಳನ್ನು ಗಮನಿಸಬಹುದು. ಮೊದಲು ಅಂಗಾತ ಮಲಗಿ ಕೈಗಳನ್ನು ತೊಡೆಯ ಪಕ್ಕಗಳಲ್ಲಿ ಇರಿಸಬೇಕು; ಆಗ ಗಲ್ಲವು ನೆಲದ ಮೇಲೆ ಊರಿರುತ್ತದೆ. ಆಮೇಲೆ ಕಾಲುಗಳನ್ನು ಪೃಷ್ಠದತ್ತ ಬಾಗಿಸುವುದು, ಹಿಮ್ಮಡಿಗಳನ್ನು ಕೈಗಳಿಂದ ಹಿಡಿಯುವುದು (ಕಾಲಿನ ಹೆಬ್ಬೆರಳುಗಳನ್ನಲ್ಲ ಎಂಬುದನ್ನು ಗಮನಿಸಿ). ಈಗ ನಿಧಾನವಾಗಿ ಕಾಲುಗಳನ್ನು ಮೇಲಕ್ಕೆತ್ತಬೇಕು. ಕೈಗಳನ್ನು ಬಿಡಬಾರದು. ತೊಡೆಗಳೂ ನೆಲದಿಂದ ಸ್ವಲ್ಪ ಮೇಲೇಳುತ್ತವೆ. ಆಮೇಲೆ ತಲೆ ಮತ್ತು ಎದೆಯ ಭಾಗವನ್ನು ಮೇಲಕ್ಕೆತ್ತಿ, ಹೊಟ್ಟೆಯ ಮೇಲೆ ಒತ್ತಡವು ತಾನೇತಾನಾಗಿ ರಚನೆಯಾಗುತ್ತದೆ. ವಾಪಸ್ಸಾಗುವಾಗ ಮೊದಲು ಎದೆ, ತಲೆ, ತೊಡೆ ಮತ್ತು ಕಾಲುಗಳನ್ನು ನೆಲಕ್ಕೆ ತಾಗಿಸಿ ಆಮೇಲೆ ಕೈಗಳನ್ನು ಬಿಟ್ಟು ಯಥಾಸ್ಥಿತಿಗೆ ಮರಳಬಹುದು.

ಪ್ರಾರಂಭದಲ್ಲಿ ಬೇಕಾದರೆ ಎರಡು ಮಂಡಿಗಳನ್ನು ಸ್ವಲ್ಪ ದೂರದಲ್ಲಿ ಇರಿಸಿಕೊಳ್ಳಬಹುದು; ಕ್ರಮೇಣ ಅವು ಒಟ್ಟಿಗೆ ಬರಬೇಕು, ಬಗ್ಗಬೇಕು. ತಲೆಯನ್ನು ಎಷ್ಟು ಸಾಧ್ಯವೋ ಅಷ್ಟು ಹಿಂದಕ್ಕೆ ಬಗ್ಗಿಸಿ ಕಣ್ಣುಗಳಿಂದ ಹಿಂಭಾಗವನ್ನು ವೀಕ್ಷಿಸುವ ಪ್ರಯತ್ನ ಮಾಡಬಹುದು. ಸಹಜವಾಗಿಯೇ ಈ ಆಸನದಲ್ಲಿ ಸ್ವಲ್ಪ ಬಿರುಸಿನ ಚಲನೆ ಇರುತ್ತದೆ. ಆದಾಗ್ಯೂ ಅದನ್ನು ಸಾಧ್ಯವಾದಷ್ಟು ನಿಧಾನಗತಿಯಲ್ಲಿ ಮಾಡಲು ಯತ್ನಿಸಬೇಕು. ಬೆನ್ನೆಲುಬು ಭಾಗದಲ್ಲಿ ಚಾಚುವಿಕೆಯು ಸಾಧ್ಯವಿಲ್ಲದಂತೆ ನೋವಿದ್ದರೆ ಈ ಆಸನವನ್ನು ಮಾಡಬಾರದು. ಪಿತ್ತ ವ್ಯತ್ಯಯ ಇರುವವರಿಗೆ ಈ ಆಸನ ಒಳ್ಳೆಯದು. ಮಲಬದ್ಧತೆಯ ನಿವಾರಣೆಗೂ ಸಹಕಾರಿ. ಸಾಮಾನ್ಯವಾಗಿ ಅರ್ಧ ನಿಮಿಷದಷ್ಟು ಕಾಲ ಸ್ಥಿರವಾಗಿ ಈ ಆಸನದಲ್ಲಿರಲು ಸಾಧ್ಯವಾದರೆ ಸಾಕೆನಿಸುತ್ತದೆ. ಆಸನಾವಸ್ಥೆಯಲ್ಲಿ ಉಸಿರಾಟವು ಯಥಾಪ್ರಕಾರ ಸಾವಕಾಶವಾಗಿ ನಡೆಯುತ್ತಿರಬೇಕು. ಶ್ವಾಸಕೋಶಗಳಿಗೆ ತೊಂದರೆಯಾಗದಂತೆ ಉಸಿರು ಬಿಗಿಹಿಡಿದರೂ ತಪ್ಪಿಲ್ಲ.

ಧನುರಾಸನದ ನಂತರ ಸುಪ್ತ-ವಜ್ರಾಸನವನ್ನು ಮಾಡುವುದು ಒಂದು ಪದ್ಧತಿ. ಕೆಲವರು ಇದನ್ನು ಹಲಾಸನದ ನಂತರವೇ ಮಾಡಬೇಕೆಂಬ ಸೂಚನೆ ನೀಡುತ್ತಾರೆ. ಇಲ್ಲಿ ವಜ್ರಾಸನ ಮತ್ತು ಸುಪ್ತ-ವಜ್ರಾಸನಗಳೆರಡೂ ಮಿಶ್ರಣ ಹೊಂದಿವೆ. 'ವಜ್ರ' ಎಂಬುದು ಯೋಗಶಾಸ್ತ್ರ ಗ್ರಂಥಗಳಲ್ಲಿ ಕಿಬ್ಬೊಟ್ಟೆಯನ್ನು ಸೂಚಿಸುವುದಿಲ್ಲ; ಅದಕ್ಕೆ ಲಿಂಗ ಅಥವಾ ಯೋನಿ ಎಂಬ ಅರ್ಥವಿದೆ. ಆದರೆ ವಜ್ರಾಸನ ಮತ್ತು ಸುಪ್ತ-ವಜ್ರಾಸನಗಳಲ್ಲಿ ನಿಜಕ್ಕೂ ವ್ಯಾಯಾಮಸೌಖ್ಯವು ದೊರಕುವುದು ಕಿಬ್ಬೊಟ್ಟೆಗೆ (ಇದನ್ನು 'ವಸ್ತಿ ಕುಹರ' ಎಂದೂ ಕರೆಯುತ್ತಾರೆ) ಎಂಬ ಕಾರಣದಿಂದ ಇಲ್ಲಿ 'ವಜ್ರ' ಎಂಬುದನ್ನು ಕಿಬ್ಬೊಟ್ಟೆ ಎಂಬರ್ಥದಲ್ಲಿ ಗ್ರಹಿಸಬೇಕಾಗಿದೆ. ಈ ಆಸನದಿಂದ ಯೋಗಶಾಸ್ತ್ರದಲ್ಲಿ ಅಧಿಕೃತವಾಗಿ ಯಾವುದನ್ನು 'ವಜ್ರ' ಎನ್ನುತ್ತಾರೋ ಅದರ ಮೇಲೂ



ಸುಪ್ತ - ವಜ್ರಾಸನ

ಪರಿಣಾಮವಿರುತ್ತದೆಯಾದ್ದರಿಂದ 'ವಜ್ರಾಸನ' ಎಂಬುದು ಅನ್ವರ್ಥವಾಗಿದೆ.

ವಜ್ರಾಸನವನ್ನು ಕುರಿತಂತೆ ಘೇರಂಡ ಸಂಹಿತೆಯಲ್ಲಿ ನಿರ್ದೇಶನವು ಹೀಗಿದೆ: ಜಂಘಾಭ್ಯಾಂ ವಜ್ರವತ್ಕೃತ್ವಾ ಗುದಪಾರ್ಶ್ವೇ ಪದಾವುಭೌ। ವಜ್ರಾಸನಂ ಭವೇದೇತತ್ ಯೋಗಿನಾಂ ಸಿದ್ಧಿದಾಯಕಮ್॥ (೨.೧೨). ಅಂದರೆ, ಕಾಲುಗಳನ್ನು ಮಂಡಿಯ ಬಳಿ ಮಡಿಸಿ, ಎರಡು ಹಿಮ್ಮಡಿಗಳನ್ನೂ ಪೃಷ್ಠದ ಎರಡು ಪಾರ್ಶ್ವಗಳಲ್ಲಿಟ್ಟು ಕುಳಿತುಕೊಳ್ಳುವುದು ಎಂದರ್ಥ. ಕೈಗಳನ್ನು ಎರಡು ಮಂಡಿಗಳ ಮೇಲೆ ಇರಿಸಿಕೊಳ್ಳಬಹುದು. ಇದು



ಧನುರಾಸನ

ವ್ಯಾಯಾಮಕ್ಕಾಗಿ ಒಂದು ಆಸನ ಎನ್ನುವುದಕ್ಕಿಂತ ಏಕಾಗ್ರತೆಯನ್ನು ಸಾಧಿಸಿಕೊಳ್ಳಲು ಧ್ಯಾನಕ್ಕೆ ಕುಳಿತುಕೊಳ್ಳುವ ಒಂದು ವಿಧಾನ ಎನ್ನುವುದು ಹೆಚ್ಚು ಸೂಕ್ತ. 'ಸಮಕಾಯ ಶಿರೋಗ್ರೀವ' ಎಂಬ ನಿಯಮವನ್ನು ಅನ್ವಯಿಸಿ ನೆಟ್ಟಗೆ ಕುಳಿತುಕೊಳ್ಳುವುದು ಅವಶ್ಯಕ. ಹೀಗೆ ಕುಳಿತುಕೊಂಡಾಗ ಪಾದಗಳು ಮೂಲಾಧಾರವಾಗಿರುತ್ತವೆ, ಹಿಮ್ಮಡಿಗಳು ಪೃಷ್ಠದ ಕೆಳಗಿರುವುದಕ್ಕಿಂತಲೂ ಅದನ್ನು ಬಳಸಿ ಹೊರಗಿರುತ್ತವೆ. ಹಿಮ್ಮಡಿಯ ಮೇಲೆ ಕುಳಿತುಕೊಳ್ಳಬಾರದು. ತೊಡೆಯ ಹಾಗೂ ಮೀನಖಂಡದ ಸ್ನಾಯುಗಳಿಗೆ ಶಕ್ತಿ ಕುದುರುವಂತಹ ಪ್ರಕ್ರಿಯೆ ಇದು. ಮೂಲವ್ಯಾಧಿ ಇರುವವರಿಗೆ ಇದು ನಿಷಿದ್ಧ.

ಹೀಗೆ ವಜ್ರಾಸನದಲ್ಲಿರುವಾಗ ನಿಧಾನವಾಗಿ ಬೆನ್ನಮೇಲೆ ಮಲಗಿದಂತೆ ಹಿಂದಕ್ಕೆ ಪೂರ್ಣವಾಗಿ ಬಾಗುವುದು

(೫೦ನೇ ಪುಟದಲ್ಲಿ ಮುಂದುವರೆದಿದೆ)

# ಗ್ರಹಗಳನ್ನು ನೋಡುವ ಅವಕಾಶ

ರಾತ್ರಿಯ ಆಕಾಶದ ಸೊಬಗನ್ನು ವೀಕ್ಷಿಸಲು ಡಿಸೆಂಬರ್ ಅತಿ ಪ್ರಶಸ್ತವಾದ ತಿಂಗಳು. ಶುಭ್ರವಾದ ನೀಲಿ ಬಣ್ಣದ ಆಕಾಶ ಒಂದು ಮುಖ್ಯ ಅಂಶ; ರಾತ್ರಿಯ ಅವಧಿ ಗರಿಷ್ಠ ಎಂಬುದು ಇನ್ನೊಂದು ಅಂಶ. ಬೆಂಗಳೂರಿನ (ಅಥವಾ ಕರ್ನಾಟಕದ) ಅಕ್ಷಾಂಶಗಳಿಗೆ ಎರಡನೆಯ ಅಂಶ ಮಹತ್ತ್ವ ಎನ್ನಿಸಲಾರದು. ಆದರೆ ಭಾರತದ ಉತ್ತರ ಭಾಗದಲ್ಲಿರುವವರಿಗೆ ರಾತ್ರಿಯ ಅವಧಿಯ ಹೆಚ್ಚಳ ಸ್ಪಷ್ಟವಾಗಿ ಗೋಚರಿಸುತ್ತದೆ. ಡಿಸೆಂಬರ್ ೨೧ರಂದು ಭೂಮಿಯು ಕಕ್ಷೆಯಲ್ಲೊಂದು ಮುಖ್ಯ ಹಂತವನ್ನು ದಾಟುತ್ತದೆ. ತತ್ಪರಿಣಾಮವಾಗಿ ಸೂರ್ಯ ದಕ್ಷಿಣದಂಚನ್ನು ಮುಟ್ಟಿ ಉತ್ತರ ದಿಕ್ಕಿಗೆ ಹಿಂದಿರುಗುತ್ತದೆ. ಈ ''ಉತ್ತರಾಯಣ''ದ ಕಾರಣವೇ ದಿನದ ಅವಧಿ ಕನಿಷ್ಠ, ರಾತ್ರಿಯ ಅವಧಿ ಗರಿಷ್ಠ.

ಶುಭ್ರ ಆಕಾಶದಲ್ಲಿ ಕಾಣುವ ಪ್ರಕಾಶಮಾನವಾದ ನಕ್ಷತ್ರ ಪುಂಜಗಳಲ್ಲಿ ಪೆಗಸಸ್ (ನಕುಲ)ದ ಚೌಕಾಕಾರವನ್ನು ಸುಲಭವಾಗಿ ಗುರುತಿಸಬಹುದು. ಉತ್ತರದಲ್ಲಿ ಕಾಸಿಯೋಪಿಯಾ (ಕುಂತಿ), ಪರ್ಸಿಯುಸ್ (ಅರ್ಜುನ) ಇವುಗಳನ್ನು ಗುರುತಿಸಬಹುದು. ದಕ್ಷಿಣದಲ್ಲಿ ಕಾಣುವ ಪ್ರಕಾಶಮಾನವಾದ ನಕ್ಷತ್ರ ಮೀನಾಕ್ಷಿ (ಫಾಮಲ್ ಹೌಟ್). ಇದು ದಕ್ಷಿಣ ಮೀನು (ಪೈಸಸ್ ಆಸ್ಟ್ರನಿಸ್) ಎಂಬ ಪುಂಜಕ್ಕೆ ಸೇರಿದೆ. ಇನ್ನೊಂದು ಕ್ಷೀಣಪುಂಜ ಸೆಟಸ್ (ತಿಮಿಂಗಲ).

ಪೂರ್ವದಿಕ್ಕಿನಲ್ಲಿ ಪ್ರಕಾಶಮಾನವಾದ ಪುಂಜಗಳು ಉದಯಿಸುತ್ತಿರುತ್ತವೆ. ವೃಷಭವನ್ನು ಗುರುತಿಸಲು ಕಷ್ಟಪಡಬೇಕಿಲ್ಲ. ಫಳಫಳನೆ ಹೊಳೆಯುವ ಗುರು ಮತ್ತು ಶನಿ ಈ ಎರಡೂ ಗ್ರಹಗಳು ವೃಷಭ ರಾಶಿಯ ರೋಹಿಣಿ (ಕೆಂಪುಬಣ್ಣದ್ದು) ಮತ್ತು ಕೃತ್ತಿಕಾ ನಕ್ಷತ್ರಗುಚ್ಛದೊಡನೆ ತ್ರಿಕೋಣವನ್ನು ರಚಿಸುತ್ತದೆ. ಕೃತ್ತಿಕಾ, ಗುರು ಮತ್ತು ರೋಹಿಣಿ ತ್ರಿಕೋಣದ ಒಂದು ಬಾಹುವಿನಲ್ಲಿದ್ದರೆ, ಶನಿ, ಕೃತ್ತಿಕಾ ಇನ್ನೊಂದು ಬಾಹುವನ್ನು ರಚಿಸುತ್ತವೆ. ಇದಕ್ಕೆ ಸ್ವಲ್ಪ ಉತ್ತರದಲ್ಲಿ ಹೊಳೆಯುವ ನಕ್ಷತ್ರ ಕಪೆಲ್ಲಾ (ಬ್ರಹ್ಮ ಹೃದಯ). ಪಂಚಕೋಣಾಕೃತಿಯ ನಕ್ಷತ್ರಪುಂಜ ಆರಿಗಾ (ವಿಜಯಸಾರಥಿ)ಗೆ ಇದು ಸೇರಿದೆ.

ಪಶ್ಚಿಮದಲ್ಲಿ ಪ್ರಕಾಶ ಮಾನವಾದ ಪುಂಜಗಳಿಲ್ಲ. ಶುಕ್ರಗ್ರಹವೊಂದೇ ಪ್ರಜ್ವಲಿಸುತ್ತಿರುತ್ತದೆ. ಇದರ ಆಸುಪಾಸಿನಲ್ಲಿ ಮಕರ ಹಾಗೂ ಕುಂಭರಾಶಿಗಳ ನಕ್ಷತ್ರಗಳನ್ನು ಗುರುತಿಸಲು ಇದು ಒಳ್ಳೆಯ ಅವಕಾಶ. ತಿಂಗಳ ಆರಂಭದ ದಿನಗಳಲ್ಲಿ ಪಶ್ಚಿಮದಲ್ಲಿ ಕಾಣುವ ಚಂದ್ರ ಪುನಃ ತಿಂಗಳ ಕೊನೆಗೆ ಪಶ್ಚಿಮಕ್ಕೆ ಹಿಂದಿರುಗುತ್ತದೆ. ೨೯ರಂದು ಶುಕ್ರಗ್ರಹದ ಸಮೀಪವೇ ಚಂದ್ರ ಕಾಣುವ ದೃಶ್ಯ, ಛಾಯಾಗ್ರಾಹಕರಿಗೊಂದು ಅಪೂರ್ವ ಅವಕಾಶ.

ಡಿಸೆಂಬರ್ ೯ ಮತ್ತು ೧೦ರಂದು ಗುರು, ಶನಿಗಳ ಸಮೀಪವೇ ಕಾಣುವ ಚಂದ್ರ, ಛಾಯಾಗ್ರಾಹಕರಿಗೆ ಇನ್ನೊಂದು ಸುವರ್ಣಾವಕಾಶ ಒದಗಿಸುತ್ತದೆ. ಹುಣ್ಣಿಮೆ (೧೧ರಂದು)ಯಂದು ಚಂದ್ರನ ಸಮೀಪ ಕಾಣುವ ನಕ್ಷತ್ರ ಮೃಗಶಿರಾ. ಇದು ಒರೈಯನ್ ನಕ್ಷತ್ರ ಪುಂಜಕ್ಕೆ ಸೇರಿದೆ. ಸಂಜೆ ಸೂರ್ಯಾಸ್ತವಾಗುವಾಗ ಇದು ಪೂರ್ವದ ಅಂಚಿನಲ್ಲಿರುತ್ತದೆ. ಒಂದೆರಡು ಗಂಟೆಗಳ ನಂತರ ಇದನ್ನು ಸುಲಭವಾಗಿ ಗುರುತಿಸಬಹುದು.




ಮಂಗಳ ಗ್ರಹವನ್ನು ಬೆಳಗಿನ ಝಾವ ಗುರುತಿಸಲು ಪ್ರಯತ್ನಿಸಬಹುದು. ಕನ್ಯಾರಾಶಿಯನ್ನು ಗುರುತಿಸಲು ಇದು ಒಳ್ಳೆಯ ಅವಕಾಶ. ಸೂರ್ಯೋದಯಕ್ಕೆ ಒಂದೆರಡು ಗಂಟೆ ಮುಂಚೆ ಉದಯಿಸುವ ಇದರ ದಿನಂಪ್ರತಿ ಚಲನೆಯನ್ನು ಸಮೀಪದ ಚಿತ್ರಾ ನಕ್ಷತ್ರದಿಂದ ಗುರುತಿಸಬಹುದು. ೧೧ರಂದು ಎರಡರ ನಡುವಿನ ಅಂತರ ಕನಿಷ್ಠ ಇರುತ್ತದೆ. ಆಸುಪಾಸಿನಲ್ಲಿ ಬೇರೆ ಯಾವುದೇ ಪ್ರಕಾಶಮಾನವಾದ ನಕ್ಷತ್ರ ಇಲ್ಲ. ಆದ್ದರಿಂದ ಕೆಂಪು ಮಂಗಳ ಹಾಗೂ ನೀಲಿ ನಕ್ಷತ್ರ ಚಿತ್ರಾ, ಎರಡರ ಬಣ್ಣ ವ್ಯತ್ಯಾಸ, ಚಲನೆ ಎರಡನ್ನೂ ಸ್ಪಷ್ಟವಾಗಿ ಗುರುತಿಸಬಹುದು. ೨೦ರಂದು ಚಂದ್ರ ಇವುಗಳ ನಡುವೆ ಕಾಣುತ್ತದೆ.




*ಡಿಸೆಂಬರ್ ತಿಂಗಳಲ್ಲಿ ಸೂರ್ಯಾಸ್ತವಾಗುತ್ತಿರುವಾಗ ಪೂರ್ವ ದಿಕ್ಕಿನಲ್ಲಿ ಕಾಣುವ ನೋಟ*

ಬರಿಗಣ್ಣಿಗೆ ಕಾಣದ ಯುರೇನಸ್ ಗ್ರಹವನ್ನು ದುರ್ಬೀನಿನಿಂದ ಪತ್ತೆ ಮಾಡಲು ಶುಕ್ರಗ್ರಹವನ್ನು ಬಳಸಬಹುದು. ೨೩ರಂದು ಈ ಎರಡೂ ಗ್ರಹಗಳು ದುರ್ಬೀನಿನ ವ್ಯಾಪ್ತಿಯೊಳಗೆ ನಿಲುಕುವಷ್ಟು ಸಮೀಪ ಇರುತ್ತವೆ. ೨೯ರಂದು ಚಂದ್ರ, ಶುಕ್ರ, ಯುರೇನಸ್ ಮೂರನ್ನೂ ದುರ್ಬೀನಿನಲ್ಲಿ ಒಟ್ಟಿಗೇ ನೋಡಬಹುದು. ಇದೇ ರೀತಿ ೧೧ರಂದು ಶುಕ್ರ ನೆಪ್ಚೂನನ್ನು ಹಾದು ಹೋಗುತ್ತದೆ. ಆದರೆ ನೆಪ್ಚೂನ್ ಕ್ಷೀಣವಾದ ಕಾಯ; ಅಲ್ಲದೆ ಅಂದು ಹುಣ್ಣಿಮೆಯೂ ಆದ್ದರಿಂದ ಈ ಸಂಗಮದ ಸಹಾಯದಿಂದ ನೆಪ್ಚೂನನ್ನು ಗುರುತಿಸುವುದು ಕಷ್ಟವಾಗಬಹುದು.

೨೫ರಂದು ಅಮವಾಸ್ಯೆ, ಪಾರ್ಶ್ವ ಸೂರ್ಯಗ್ರಹಣದ ದರ್ಶನ ಅಮೆರಿಕ ಖಂಡಕ್ಕೆ ಮಾತ್ರ. ೧೩ರಂದು ಜೆಮಿನಿಡ್ಸ್ ಎಂಬ ಉಲ್ಕಾವೃಷ್ಟಿ ಗರಿಷ್ಠ ಮುಟ್ಟುವುದು. ಆದರೆ ಅಂದು ಚಂದ್ರನ ಬೆಳಕೂ ಹೆಚ್ಚಾಗಿರುವುದರಿಂದ ಗಂಟೆಗೆ ೧೨೦ ಉಲ್ಕೆಗಳನ್ನು ನೋಡುವ ಬದಲು ೫೦-೬೦ ಉಲ್ಕೆಗಳನ್ನು ಮಾತ್ರ ನೋಡಬಹುದು. ಡಿಸೆಂಬರ್ ೨೨ರಂದು ಉರ್ಸಿಡ್ಸ್ ಎಂಬ ಇನ್ನೊಂದು ಉಲ್ಕಾವೃಷ್ಟಿ ಗರಿಷ್ಠವನ್ನು ಮುಟ್ಟುತ್ತದೆ. ಧ್ರುವನಕ್ಷತ್ರದ ದಿಕ್ಕಿನಿಂದಲೇ ಬರುವ ಈ ಉಲ್ಕೆಗಳು ಗಂಟೆಗೆ ೫೦ ಕಾಣಬಹುದಾದರೂ ಮಧ್ಯಬಿಂದು ದಿಗಂತದ ಅಂಚಿನಲ್ಲೇ ಇರುವುದರಿಂದ ಗಂಟೆಗೆ ೧೦-೧೫ ಮಾತ್ರ ಕಾಣಬಹುದು.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಬೆಂಗಳೂರು - ೫೬೦ ೦೦೧

# ನೀರಿನ ರಾಜಕೀಯ

ಡಾ॥ ವೀರೇಶ ಬಡಿಗೇರ

ತಂತ್ರಜ್ಞಾನ ಪ್ರಧಾನವಾದ ಆಧುನಿಕತೆಯಲ್ಲಿ ಅಧಿಕಾರ ಮತ್ತು ಹಿಂಸೆಗಳೇ ಬಹುಮುಖ್ಯವಾದಂಥವು. ಬಂಡವಾಳಶಾಹಿ ಅಧಿಕಾರಸ್ಥ ಜೀವವಿರೋಧಿ ಸರಕಾರಗಳು ಪ್ರಗತಿಯನ್ನು ತಮ್ಮ ಪ್ರಮುಖ ಅಸ್ತ್ರವನ್ನಾಗಿ ಮಾಡಿಕೊಳ್ಳುತ್ತಿವೆ. ಕಂಪ್ಯೂಟರ್ ಜಾಲದ ಮೂಲಕ ಇಡೀ ಜಗತ್ತನ್ನೇ ತನ್ನ ಹದ್ದುಬಸ್ತಿನಲ್ಲಿಟ್ಟುಕೊಳ್ಳಲು ಹವಣಿಸುತ್ತಿರುವ ಅಮೆರಿಕದ ಅಧ್ಯಕ್ಷ ಬಿಲ್ ಕ್ಲಿಂಟನ್‌ರನ್ನು ರತ್ನಗಂಬಳಿ ಹಾಸಿ ಕರೆಯುವ ಮೂಲಕ ರಾಜ್ಯ ಮತ್ತು ಕೇಂದ್ರ ಸರಕಾರಗಳು ತಮ್ಮ ಜೀವವಿರೋಧಿ ಕುತರ್ಕಗಳನ್ನು ಬೆಳೆಸಿಕೊಳ್ಳುತ್ತಿವೆ. ಬೆಂಗಳೂರನ್ನು ಸಿಂಗಪೂರವನ್ನಾಗಿಸುವ, ಹೈದರಾಬಾದನ್ನು ಸೈಬರಾಬಾದನ್ನಾಗಿ ಪರಿವರ್ತಿಸುವ ಹುನ್ನಾರಗಳು ಅಂತಿಮವಾಗಿ ಬಂಡವಾಳಶಾಹಿಗಳ ಬಲಿಯುವಿಕೆಗೆ ಅವಕಾಶ ಮಾಡಿ ಕೊಡುತ್ತಿವೆ. ಇದರಿಂದ ಜನಸಾಮಾನ್ಯರಿಗಂತೂ ಖಂಡಿತ ಲಾಭವಿಲ್ಲ. ಸೂಕ್ಷ್ಮವಾಗಿ ಅವಲೋಕಿಸಿದಾಗ ಆಧುನಿಕ ಮನುಷ್ಯಕೇಂದ್ರಿತ ಚಿಂತನೆಯೊಂದು ತನಗೆ ಅನ್ಯವಾದದ್ದನ್ನು ಅಸ್ಪೃಶ್ಯಗೊಳಿಸುವ ಹುನ್ನಾರ ನಡೆಸುತ್ತಿರುವುದು ಸ್ಪಷ್ಟವಾಗುತ್ತದೆ. ಸೈಬರಾಬಾದ್‌ಗಳು ನಾಳೆ ಸೈಫರಾಬಾದ್ (ಸೊನ್ನೆನಗರ)ಗಳಾಗುವ ವಾಸ್ತವಿಕತೆ ಇವರಿಗೆ ಬೇಕಿಲ್ಲ.

ಇಂದು ವಿಜ್ಞಾನ-ತಂತ್ರಜ್ಞಾನಗಳೇ ಪೌರನೀತಿಯಾಗುತ್ತಿವೆ. ವಿಜ್ಞಾನವೇ ಪೌರನೀತಿಯಾದಾಗ ವೈಜ್ಞಾನಿಕವಾದುದಕ್ಕೇ ಅಲ್ಲಿ ಜಾಗ. ವಿಜ್ಞಾನವೇ ಅಧಿಕಾರದ ವ್ಯಾಕರಣ. ವಿಜ್ಞಾನಬಾಹಿರವಾದದ್ದು ಇಲ್ಲಿ ವಿದ್ರೋಹವಾಗಿ ಕಾಣಿಸುತ್ತದೆ. ಆಗ ಸಹಜವಾಗಿ ಸ್ಥಳೀಯತೆಗೆ ಪೆಟ್ಟುಬೀಳುತ್ತದೆ. ಪ್ರಭುತ್ವವನ್ನು ಬೃಹತ್ ಯಂತ್ರವನ್ನಾಗಿ ಮಾರ್ಪಡಿಸುವ ವಿಜ್ಞಾನದ ಈ ಕೇಂದ್ರೀಕೃತ ಚಲನೆ ನಿರ್ಭಾವುಕವಾದದ್ದು. ಕಾಲ-ದೇಶ, ಜನ-ಜಾತಿ, ಸ್ಥಳ ಮತ್ತು ಭೌಗೋಳಿಕ ಭಿನ್ನತೆಗಳನ್ನು, ಅದರ ವಿಶಿಷ್ಟತೆಗಳನ್ನು ಪರಿಗಣಿಸುವುದಿಲ್ಲ. ಎಲ್ಲವನ್ನು ಸೂತ್ರೀಕರಿಸುತ್ತದೆ.

ಪ್ರಗತಿ ಮತ್ತು ವಿಕಾಸದ ಪರಿಕಲ್ಪನೆಗಳು ಆಧುನೀಕರಣ ಮತ್ತು ಅಭಿವೃದ್ಧಿಯ ಧೋರಣೆಗಳಲ್ಲಿ ಬಳಕೆಯಾಗುತ್ತಿವೆ. ಈ ಪರಿಕಲ್ಪನೆ ಇಟ್ಟುಕೊಂಡೇ ಇಷ್ಟವಿಲ್ಲದ ಸಂಸ್ಕೃತಿಗಳ ಮೇಲೂ ಪ್ರಭುತ್ವವು ಅಭಿವೃದ್ಧಿಯ ಮರಣಶಾಸನವನ್ನು ಹೇರುತ್ತಿದೆ. ಆ ಮೂಲಕ ಅದನ್ನೊಂದು ರಾಜಕೀಯ ಮತ್ತು ಸಾಮಾಜಿಕ ದರ್ಶನವನ್ನಾಗಿ ಬಿಂಬಿಸುತ್ತದೆ. ವೈಜ್ಞಾನಿಕ ಪ್ರಗತಿಯ ಹೆಸರಿನಲ್ಲಿ ಅಕ್ರಮವಾಗಿ ಕೆಳಸಮುದಾಯಗಳನ್ನು, ಹಿಂದುಳಿದ ಪ್ರದೇಶಗಳನ್ನು , ಪ್ರಯೋಗಶೀಲತೆಗೆ ಅಳವಡಿಸುವ ಮೂಲಕ ಆ ಆಕ್ರಮಣವನ್ನು ವೈಜ್ಞಾನಿಕ ಕೈಗಾರಿಕಾ ತತ್ವಗಳ ರೂಪದಲ್ಲಿ ಸಮುದಾಯ, ಸಮಾಜಗಳ ಮೇಲೆ ವಿಸ್ತರಿಸಿಕೊಳ್ಳುತ್ತದೆ. ಮೂಲತಃ ಇಲ್ಲಿ ಒಂದು ಇನ್ನೊಂದಾಗಿ ರೂಪಾಂತರಗೊಳ್ಳುತ್ತದೆ. ಉದಾಹರಣೆಗೆ, ದೊಡ್ಡ ನೀರಾವರಿಯ ಹೆಸರಿನಲ್ಲಿ ಕಟ್ಟುವ ಅಣೆಕಟ್ಟುಗಳು, ಆರ್ಥಿಕ ಮುನ್ನಡೆಗಾಗಿ, ವ್ಯಾಪಾರದ ಸರಳತೆಗಾಗಿ ಸ್ಥಾಪಿಸುವ ಹಡಗು ಬಂದರುಗಳು (ಸೀಬರ್ಡ್ ನೌಕಾನೆಲೆ) ಪ್ರಗತಿಯ ಹೆಸರಿನಲ್ಲಿ ಅಲ್ಲಿನ ಮೂಲನಿವಾಸಿಗಳ ಸ್ಥಳಗಳನ್ನು ಆಕ್ರಮಿಸಿ ಸ್ಥಳಾಂತರಿಸುವ ಮೂಲಕ ಅಲ್ಲಿನ ಸಂಸ್ಕೃತಿಯನ್ನೇ ವಿಚ್ಛಿದ್ರಗೊಳಿಸಲಾಗುತ್ತಿದೆ. ಇದಕ್ಕೆ ಪರಿಹಾರ ಕಾರ್ಯಗಳು, ಪುನರ್ವಸತಿ ಯೋಜನೆಗಳು, ಮಾನದಂಡಗಳಾದರೂ ಅದು ಪೂರ್ವಸ್ಥಿತಿಯನ್ನು ಪುನಃ ಪ್ರತಿಷ್ಠಾಪಿಸಲಾರದು.

ಹೀಗೆ ಸ್ವಾತಂತ್ರ್ಯ ಬಂದ ನಂತರ ಬೃಹತ್ ನೀರಾವರಿ ಯೋಜನೆಗಳಿಗೆ ಹಲವಾರು ಕೋಟಿ ರೂಪಾಯಿಗಳ ಬಂಡವಾಳ ಹೂಡಲಾಗಿದ್ದರೂ ನಿರೀಕ್ಷಿತ ಅಭಿವೃದ್ಧಿಯಾಗಲಿಲ್ಲ. ಇದನ್ನು ಯಾವ ಕ್ಷೇತ್ರಕ್ಕಾದರೂ ಅನ್ವಯಿಸಬಹುದು. ಇಲ್ಲಿ ಅಧಿಕಾರ ಮತ್ತು ತಂತ್ರಜ್ಞಾನಗಳು ಕೂಡಿ ಹೊಸ ನೀರಾವರಿ ರಾಜಕಾರಣವನ್ನು ಸೃಷ್ಟಿಮಾಡಿವೆ. ಕಾರ್ಲ್ ಎ. ವಿಟ್‌ಫೊಗೆಲ್ ಎನ್ನುವ ವಿದ್ವಾಂಸ ತನ್ನ ''ಓರಿಯಂಟಲ್ ಡೆಸ್ಪಾಟಿಸಮ್'' ಕೃತಿಯಲ್ಲಿ ಇಂಥ ಕಾರಣವನ್ನು ''ಹೈಡ್ರೋ ಪಾಲಿಟಿಕ್ಸ್'' ಎಂದು ಕರೆಯುತ್ತಾನೆ.

ಗೋಲ್ಡ್‌ಸ್ಮಿತ್ ಮತ್ತು ಹಿಲ್ಡ್ ಯಾರ್ಡ್ ಅವರು ತಮ್ಮ ''ಲಾರ್ಜ್ ಡ್ಯಾಮ್ಸ್'' ಪುಸ್ತಕದಲ್ಲಿ ಹೇಳಿದ ಮಾತೊಂದು ಗಮನಾರ್ಹವಾದುದು: ''...... ಜನಸಮೂಹಕ್ಕೆ ಈ ನೀರಾವರಿ ಅಣೆಕಟ್ಟುಗಳ ನಿರ್ಮಾಣಕಾಲದಲ್ಲಿ ನೀರು ಏರುವ ಮಾಹಿತಿಯನ್ನೇನೂ ತಿಳಿಸಲಾಗುತ್ತಿರಲಿಲ್ಲ. ಇನ್ನೂ ಕೆಲವರಿಗೆ ಅಂಥ ಮಾಹಿತಿಯನ್ನೇನೋ ಕೊಡಲಾಗುತ್ತಿತ್ತು. ಆದರೆ ಅವರು ಸ್ಥಳಾಂತರಗೊಳ್ಳಲು ಸಹಾಯವೇನೂ ಸಿಗುತ್ತಿರಲಿಲ್ಲ..... ಇಲ್ಲೆಲ್ಲ ಬಳಸಿದ ತಂತ್ರಗಳೆಂದರೆ ದೀರ್ಘವಾದ ಪೊಲೀಸ್ ವಿಚಾರಣೆ, ಸೈನಿಕ ಒತ್ತಡ ಮತ್ತು ಬುಲ್ಡೋಜರ್‌ಗಳಿಂದ ಸೃಷ್ಟಿಸಲಾದ ಭೀತಿ. ಇವುಗಳ ಬಳಕೆಯ ಮೂಲಕ ರಕ್ತಪಾತವಿಲ್ಲದೆ ಯೋಜನೆಗಳನ್ನು ಕಾರ್ಯಗತ ಗೊಳಿಸುವುದೇ ಅಲ್ಲಿ ಮಹತ್ವದ ಯಶಸ್ಸೆಂದು ತಿಳಿಯಲಾಯಿತು.''

ಮೇಲಿನ ಮಾತುಗಳಿಗೆ ಕೃಷ್ಣಾ ಕೊಳ್ಳದ ಇತ್ತೀಚಿನ ಘಟನೆಗಳು ಒಳ್ಳೆ ನಿದರ್ಶನಗಳು. ೧೯೯೬-೯೭ರಲ್ಲಿ ಬಾಗಲಕೋಟೆ ಮತ್ತು ಬೀಳಗಿ ತಾಲ್ಲೂಕುಗಳ ಮುಳುಗಡೆ ಹಳ್ಳಿಗಳಲ್ಲಿ ರಾತ್ರೋರಾತ್ರಿ ನೀರು ನುಗ್ಗಿದಾಗ ಎಚ್ಚೆತ್ತ ಜನ ಪ್ರಾಣಭಯದಿಂದ ಕೈಗೆ ಸಿಕ್ಕಷ್ಟು ತಮ್ಮ ಚರಾಸ್ತಿಗಳನ್ನು ತೆಗೆದುಕೊಂಡು ಎದೆ ಎತ್ತರದ ನೀರಿನಲ್ಲಿ ಪಾರಾಗಿ ಬಂದದ್ದುಂಟು. ಈ ಘಟನೆಯಲ್ಲಿ ಸತ್ತು ಬದುಕಿ ಬಂದವರಲ್ಲಿ ನಮ್ಮ ಕುಟುಂಬದ ಸದಸ್ಯರು ಇದ್ದರು. ಎಷ್ಟೋ ಜನ ಪಾರಾಗಲು ಆಗದೆ, ಮಾಳಿಗೆ ಏರಿ ಕುಳಿತಿದ್ದಿದೆ. ಸಾಕುಪ್ರಾಣಿಗಳು ನೀರಿನಲ್ಲಿ ತೇಲಿಹೋಗುತ್ತಿದ್ದುದನ್ನು ನಿಸ್ಸಹಾಯಕರಾಗಿ ನೋಡುತ್ತಾ ಕುಳಿತ ಚಿತ್ರಗಳು ಎದೆ ಸೀಳುವಂತಿವೆ.

ಹೀಗೆ ಹಿಂಸೆ ಮೂಲವಾದ ಪ್ರಗತಿಯಲ್ಲಿ ಸ್ಥಳಾಂತರ ಪ್ರಕ್ರಿಯೆ ಭಾವನಿರಪೇಕ್ಷವಾದದ್ದು. ಒಂದು ಸ್ಥಳವನ್ನು ನೀರಿನಲ್ಲಿ ಮುಳುಗಿಸುವ ಅಥವಾ ಒಕ್ಕಲೆಬ್ಬಿಸುವ ರಾಜಕಾರಣಿಗಳಿಗಾಗಲಿ ತಂತ್ರಜ್ಞರಿಗಾಗಲೀ ಅಲ್ಲಿಯ ಸನಾತನ ಸಂಸ್ಕೃತಿಯ ಬೇರುಗಳು ನಾಶವಾಗುತ್ತಿವೆ ಎನ್ನುವ ಅರಿವು ಇರಲಾರದು. ಯಾಕೆಂದರೆ ಭೂಮಿ ಅಥವಾ ಬದುಕು ಎನ್ನವುದು ಸಾಂಪ್ರದಾಯಿಕ ಜನವರ್ಗಕ್ಕೆ ಕೊಳ್ಳುವ-ಮಾರುವ ವ್ಯಾಪಾರಿ ಸರಕಲ್ಲ. ವ್ಯವಸ್ಥಿತ ಬದುಕು ಮತ್ತು ಭೂಮಿಯ ಸಂಬಂಧಗಳನ್ನು ಪ್ರಭುತ್ವವು ಬೇಕಾದಂತೆ ಛಿದ್ರಗೊಳಿಸಿ ಹೊಂದಿಸುವ ಪರಿಯನ್ನು ಅವರು ತಾಳಿಕೊಳ್ಳರು. ಭೂಮಿ ಮತ್ತು ಬದುಕಿನೊಂದಿಗಿನ ಭಾವನಾತ್ಮಕ ಸಂಬಂಧವೇ ಅವರ ಉಸಿರು. ಅದಕ್ಕೆ ಅವರು ಎಂಥ ತ್ಯಾಗಕ್ಕೂ ಸಿದ್ಧರು.

ಸಮೂಹ ಹತ್ಯೆಯ ಇಂದಿನ ಅಭಿವೃದ್ಧಿ ಮಾರ್ಗಗಳು ಇಷ್ಟಕ್ಕೆ ನಿಲ್ಲದೇ ವಿಜ್ಞಾನಿ-ತಂತ್ರಜ್ಞ ಮೊದಲಾದ ಅನಿವಾಸಿ ಭಾರತೀಯರನ್ನು ಕರೆದು ಹೊಸ ಉದ್ಯಮಕ್ಕೆ ಅವಕಾಶ ನೀಡುತ್ತಿವೆ. ಪ್ರಗತಿಯ ಹೆಸರಿನಲ್ಲಿ ತಂತ್ರಜ್ಞಾನದ ಪಾರ್ಕುಗಳನ್ನು, ವಿಜ್ಞಾನದ ನಗರಗಳನ್ನು ಪ್ರಭುತ್ವವು ಪ್ರತಿಷ್ಠಾಪಿಸುತ್ತಿದೆ. ಇದರಿಂದ ಮೂಲ ನಿವಾಸಿಗಳಾದ ರೈತಾಪಿ ಮತ್ತು ಶ್ರಮಿಕ ವರ್ಗಗಳು ತಮ್ಮ ಜಾಗದಲ್ಲಿಯೇ ತಾವು ಅನಿವಾಸಿಗಳಾಗುವ, ಪರಕೀಯರಾಗುವ ವ್ಯತಿರಿಕ್ತ ಪರಿಸ್ಥಿತಿ ನಿರ್ಮಿತಿಗೊಂಡಿದೆ.

ಅಣುಸ್ಥಾವರಗಳು ಹಾಗೂ ಅಣೆಕಟ್ಟುಗಳು ಮೂಲತಃ ಜನಸಮೂಹದ ಮೇಲೆ ನಡೆಸುವ ಪ್ರಯೋಗಗಳು. ಪರಿಣಾಮಗಳ ಸರಿಯಾದ ಅಂದಾಜು ಇರದೆ ಬರೀ ಲಾಭದಾಸೆಯಿಂದ ರೂಪಗೊಳ್ಳುವ ಪರಿಸರ ವಿರೋಧಿ, ಜೀವವಿರೋಧಿಯಾದ ಈ ಕಾರ್ಯಯೋಜನೆಗಳು ಹಡೆಯುವ ಪರಿಣಾಮಗಳು ಅಮಾನವೀಯವಾದವು. ಗೋಲ್ಡ್‌ಸ್ಮಿತ್ ಮತ್ತು ಹಿಲ್ಡ್ ಯಾರ್ಡ್ ಹೇಳುವಂತೆ ''ಮಾದರಿಗಳ ಅನುಸರಣೆಯ ರೋಗ''. ಅಂದರೆ ಕಿರಿಯ ಮಾದರಿಯೊಂದನ್ನು ವಿಸ್ತರಿಸಿ ಅದನ್ನು ಬೃಹತ್ ಮಾದರಿಗಳ ಯೋಜಿಸುವಿಕೆಗೆ ಬಳಸುವುದು. ಸಣ್ಣ ಅಣೆಕಟ್ಟುಗಳಿಗನುಸರಿಸುವ ತಂತ್ರಜ್ಞಾನದ ಕ್ರಮವನ್ನು ಬೃಹತ್ ಅಣೆಕಟ್ಟುಗಳಿಗೆ ಬಳಸುವುದೂ ಹಲವಾರು ಬೃಹತ್ ಅಣೆಕಟ್ಟುಗಳು ವಿಫಲವಾಗಿರುವುದಕ್ಕೆ ಕಾರಣ. ಬೃಹತ್ ಬಂಡವಾಳ ಹೂಡಿಕೆಯ ಈ ತಂತ್ರಜ್ಞಾನಗಳು ನಿರ್ವಹಣೆಯ ಅನನುಭವದಿಂದ ವಿಫಲಗೊಂಡರೆ ಸಹಸ್ರಾರು ಜೀವಗಳು, ಕೋಟ್ಯಂತರ ರೂಪಾಯಿಗಳು ನಷ್ಟವಾಗುತ್ತವೆಂಬುದು ಸ್ಪಷ್ಟ.

ಇದಕ್ಕೆ ಕಣ್ಮುಂದಿರುವ ಆಲಮಟ್ಟಿಯಂತಹ ಬೃಹತ್ ನೀರಾವರಿ ಯೋಜನೆಗಳು, ಸೀಬರ್ಡ್ ನೌಕಾನೆಲೆ, ಕೊಜೆಂಟ್ರಿಕ್ಸ್ ವಿದ್ಯುತ್ ಯೋಜನೆಯಂತಹ ಯೋಜನೆಗಳು ವಿಫಲತೆಯ ನಿದರ್ಶನಗಳು. ರಾಜಕೀಯವಾಗಿ ಈ ವಿಫಲತೆಯು ಮುಂದುವರಿದರೆ ನಿರಾಶ್ರಿತರ ಶಿಬಿರದಲ್ಲಿ ಬದುಕಿರುವವರಿಗೆ ನಿಧಾನವಾಗಿ ಸಾವು ಆವರಿಸುತ್ತಿರುತ್ತದೆ. ಅದರಲ್ಲೂ ವಯಸ್ಸಾದವರಂತೂ ಸ್ಥಾನಪಲ್ಲಟದ ಕಾರಣಕ್ಕೆ ಎದೆ ಒಡಕೊಂಡು ಸಾಯುತ್ತಾರೆ. ಇಂಥ ಮನಮಿಡಿಯುವ ಹಲವಾರು ಘಟನೆಗಳು ಆಲಮಟ್ಟಿ ಅಣೆಕಟ್ಟೆಯ ಸಂದರ್ಭದಲ್ಲಿ ನಡೆದಿದೆ. ಹೊಸ ಆವರಣಕ್ಕೆ ಹೊಂದಿಕೊಳ್ಳದ ಹಿರಿಯರು ಮನೆಬಿಟ್ಟು ಬರದೆ ತಲೆತಲಾಂತರದಿಂದ ಬದುಕಿಬಂದ ಮನೆಯಲ್ಲಿಯೇ ತಲೆ ಕೊಟ್ಟ ಉದಾಹರಣೆಗಳಿವೆ. ಮಾಳಿಗೆ ಏರಿ ಉಪವಾಸದಿಂದ ತಮ್ಮ ಸಾಕುಪ್ರಾಣಿಗಳೊಂದಿಗೆ ಬದುಕಿ ಸತ್ತ ಕಥೆಗಳಿವೆ.

*''ಇಂದು ವಿಜ್ಞಾನ ತಂತ್ರಜ್ಞಾನಗಳು ಆಧುನಿಕ ಮನುಷ್ಯನ ಅತ್ಯುನ್ನತ ಮೌಲ್ಯಗಳಾಗಿ ರೂಢಿಗೊಳ್ಳುತ್ತಿವೆ. ಅಲ್ಲದೆ ಸತ್ಯದ ಪರಮೋಚ್ಚ ಸ್ಥಿತಿಯೆಂದೂ ವಸ್ತುನಿಷ್ಠ ಅಧ್ಯಯನ ಪದ್ಧತಿಯೆಂದೂ ಇವನ್ನು ಬಿಂಬಿಸಲಾಗುತ್ತಿದೆ. ಇದರ ಫಲಿತಗಳಾಗಿ ವೈಜ್ಞಾನಿಕ ಪದ್ಧತಿಯನ್ನೇ ಆಧರಿಸಿದ ಸಮಾಜಕಲ್ಪನೆ, ಪ್ರಗತಿಯ ಹೆಸರಿನಲ್ಲಿ ಹಿಂದುಳಿದಿವೆ ಎಂದು ಹೇಳಿಕೊಳ್ಳುವ ಸಮುದಾಯ, ಸಂಸ್ಕೃತಿಗಳ ಮೇಲೆ ಸಾಮಾಜಿಕ ಸುಧಾರಣೆಯ ಅಸ್ತ್ರಗಳನ್ನು ಬಳಸಿ ಅವನ್ನು ನಾಶಗೊಳಿಸುವ ಪ್ರವೃತ್ತಿ ಬೆಳೆಯುತ್ತಿದೆ.'' ಈ ಅಭಿಪ್ರಾಯದ ಮಂಡನೆ ಇಲ್ಲಿದೆ. ಇದಕ್ಕೆ ನಿಮ್ಮ ಪ್ರತಿಕ್ರಿಯೆ ಏನು?*

ಈ ಮಧ್ಯೆ ಹಾಗೂ ಹೀಗೂ ಬದುಕುಳಿದವರಲ್ಲಿ ಮೊದಲಿಗಿದ್ದ ಮಾನವೀಯ ಸಂಬಂಧಗಳು ಮರೆಯಾಗಿ ಸ್ವಾರ್ಥ ಮತ್ತು ಅಪನಂಬಿಕೆಯ ನೆಲೆಗಳು ಪ್ರಧಾನವಾಗುತ್ತಿವೆ. ಕಲೆತಲಾಂತರದಿಂದ ಆರಾಧಿಸಿ ಅನುಭವಿಸಿಕೊಂಡು ಬಂದ ಭೂ ಸಂಬಂಧದ ನಷ್ಟಗಳನ್ನು ಅದರ ಛಿದ್ರತೆಗಳನ್ನು ಯಾವ ಸರಕಾರಿ ಪರಿಹಾರಗಳು ಸರಿಗಟ್ಟಲಾರವು. ಈವರೆಗಿನ ಯಾವ ಯೋಜನೆಗಳೂ ಸಂಸ್ಕೃತಿಪಲ್ಲಟದ ಸಮಸ್ಯೆಯನ್ನು ಬಗೆಹರಿಸಿಲ್ಲ.

ಭೂಮಿ ಮತ್ತು ಜನಬದುಕಿನ ನಡುವಿನ ಕರುಳಬಳ್ಳಿ ಸಂಬಂಧವನ್ನು ಮಾರುಕಟ್ಟೆ ಅಥವಾ ಸರಕಾರಗಳು ಕೊಡುವ ಹಣಕಾಸಿನ ನೆರವು ಸರಿತೂಗಿಸಲಾರದು. ಬದುಕು ಮತ್ತು ಭೂಮಿಯ ಮಧ್ಯದ ಪೋಷಕ ಸಂಬಂಧವನ್ನು ಇವು ಗ್ರಹಿಸಲಾರವು. ಪ್ರಭುತ್ವಕ್ಕೆ ಪರಿಹಾರ ಕೊಟ್ಟುಬಿಟ್ಟರೆ ಅದರ ಕೆಲಸ ಮುಗಿಯಿತು. ತಂತ್ರಜ್ಞಾನಕ್ಕೆ ಈ ಭೂಮಿ ಅಭಿವೃದ್ಧಿಯ ರಂಗ. ರೈತಾಪಿ ಕೂಲಿಕಾರ್ಮಿಕರ ಯಾವ ಸೂಕ್ಷ್ಮತೆಗಳನ್ನೂ ಮಾರುಕಟ್ಟೆ ಅರಿಯದು.

ನಿರಾಶ್ರಿತ ಡೇರೆಗಳಲ್ಲಿ ಅಲೆಯುವಾಗ ಅಲ್ಲಿನ ಮುಖ್ಯಸ್ಥನೊಬ್ಬ ಹೇಳಿದ್ದು ಕರುಳು ಹಿಂಡುತ್ತದೆ : ''ನೋಡ್ರಿ, ನಮ್ಮ ಸಂಬಂಧ ಏನಿದ್ದರೂ ಈ ಭೂಮಿ ಜೊತೆಗೆ ಹಿರಿಯರಿಂದ ಬಂದದ್ದು. ಬ್ಯಾರೀಕಾಲ ಇಲ್ಲಿಯೇ ಬದುಕಿ ಬಾಳಿ ಮಣ್ಣಾದ ನಮ್ಮವರ ಕಥೆಗಳು ಈ ನೆಲದೊಡಲದೊಳಗಿವೆ. ಇಲ್ಲಿಯ ಪ್ರತಿಯೊಂದು ಮಣ್ಣು-ಮುಸಿ, ಗಿಡ-ಮರ, ಹುಲ್ಲು-ಹುಪ್ಪಡಿ, ದನ-ಕರ, ದಾರಿ ಬಟ್ಟೆಗಳಲ್ಲಿ ನಮ್ಮ ಬದುಕು ಹುದುಗೈತಿ. ಇಲ್ಲಿ ನಡೆಯುವ, ನಡೆಯಬೇಕಾದ ಸಂಗತಿಗಳು ನಮಗೆ ತಿಳಿದಿರುತ್ತವೆ. ಅವು ನಮ್ಮ ನೆನಪಲ್ಲಿ ಗಟ್ಟಿಯಾಗಿವೆ ಮತ್ತು ಬದುಕಿ ಬಾಳುತ್ತಿವೆ. ನಾವು ಹಾಕಿದ್ದನ್ನು ಆ ಭೂತಾಯಿ ನಮಗೇ ಕೊಡುತ್ತಾಳೆ. ನಮ್ಮ ನೋವು-ಬ್ಯಾನಿ, ಆಸರಕಿ ಬ್ಯಾಸರಕಿಗಳಿಗೆ ಔಷಧಗಳು, ಪರಿಹಾರಗಳು ಇಲ್ಲೇ ಸಿಗುತ್ತವೆ. ಇಲ್ಲಿರುವ ಎಲ್ಲವೂ ನಮಗೆ ಪರಿಚಯವಿದೆ. ಯಾವ ನೆಲಕ್ಕೆ ಎಷ್ಟು ಗೊಬ್ಬರ, ಎಷ್ಟು ಬೀಜ ಹಾಕಬೇಕು ಯಾವ ಮಣ್ಣನ್ನು ಹೇಗೆ ಹದಗೊಳಿಸಬೇಕೆನ್ನುವ ಲೆಕ್ಕ ನಮಗೆ ಗೊತ್ತಿದೆ. ಆ ಕಾರಣದಿಂದಲೇ ಸುತ್ತಲಿನ ದೇವರುಗಳು, ಭೂಮಿತಾಯಿ, ಪಂಚಭೂತಗಳು ನಮ್ಮ ಬದುಕಿಗೆ ಸಹಕರಿಸುತ್ತವೆ. ಹೀಂಗ ಬಾಳ ನಾಜೂಕಾದ ಸಂಬಂಧ ಹೊಂದಿರುವ ಈ ಜಾಗಾನ ಬಿಟ್ಟ ಬ್ಯಾರೆ ಕಡಿಗಿ ಹ್ವಾದರ ನಿರಾನಕಪ್ಪಿ ನೆಲ್ದಾಗ ಒಗದಾಂಗ ಆಕ್ಕೈತಿ, ಬ್ಯಾರ‍್ಯಾದವ್ರು ಮೂಲಾಜದಾಗ ಇರಾಕ ಮನಸು ಬರೂದಿಲ್ಲ, ನಾವು ಇದ್ದು ಸತ್ತಾಂಗ ಆಗೇವಿ'' ಎನ್ನುವ ಯಜಮಾನ ಸಿದ್ದಪ್ಪಜ್ಜ ಮತ್ತು ಮಹಾಲಿಂಗಪ್ಪಜ್ಜರ ಮಾತುಗಳು ಪರಿಸ್ಥಿತಿಯ ಚರಮಗೀತೆಯನ್ನು ಸಾರಿ ಹೇಳುತ್ತವೆ.

ಪ್ರಗತಿಗೆ ಪರಂಪರೆ ಬಗ್ಗೆ ಪವಿತ್ರತೆ ಎನ್ನುವುದು ಇರುವುದಿಲ್ಲ. ಇಲ್ಲಿ ವ್ಯಕ್ತಿಯ ಅನುಭವ ಒಂದು ಸಮುದಾಯದ, ಆ ಭೌಗೋಳಿಕ ಪರಿಸರದ, ಒಟ್ಟು ಫಲಿತವಾಗಿ ಹೊರಹೊಮ್ಮಿದೆ. ಒಂದು ಸಂಸ್ಕೃತಿಯ ಒಡಲ ಉರಿ ಅದಾಗಿದೆ. ಅದಕ್ಕೆ ನಂಬಿಕೆ, ನೆನಪುಗಳಿಗಿಂತ ಹೆಚ್ಚಿನದು ಪವಿತ್ರತೆ. ಪ್ರಗತಿಯೆಂಬುದು ಪವಿತ್ರ ಸ್ಮೃತಿಗಳ ಆ ನೆನಪುಗಳನ್ನು ವಿಸ್ಮೃತಿಗೊಳಿಸುವುದು. ಅದಕ್ಕೆ ಈ ಹಳೆಕಥೆ ಬೇಕಿಲ್ಲ. ಹೀಗೆ ಉಪೇಕ್ಷೆಯ ಮೂಲಕ ಸಂಸ್ಕೃತಿಯ ಬಹು ಆಯಾಮಗಳನ್ನು ಅದರ ಸಾಂಸ್ಕೃತಿಕ ಚಹರೆಗಳನ್ನು ನುಂಗಿಬಿಡುವ ತಂತ್ರಜ್ಞಾನ ಜೀವವಿರೋಧಿ ಅಲ್ಲದೆ ಮತ್ತೇನು? ತನ್ನ ಕಾರ್ಯತಂತ್ರಗಳನ್ನು ವಿಸ್ತರಿಸುವಲ್ಲಿ ತೊಡರುಗಾಲು ಆಗುವ ಜನಸಮುದಾಯಗಳನ್ನು ನಿಗ್ರಹಿಸುವ ಮೂಲಕ ಆ ಭೂ ಪ್ರದೇಶವನ್ನು ತನ್ನ ವಶಕ್ಕೆ ತೆಗೆದುಕೊಳ್ಳುತ್ತದೆ. ಇತ್ತೀಚೆಗೆ ಪಶ್ಚಿಮ ಘಟ್ಟಗಳಲ್ಲಿ ಕೊಜೆಂಟ್ರಿಕ್ಸ್ ಮತ್ತು ಸೀಬರ್ಡ್ ನೌಕಾನೆಲೆಗಳನ್ನು ಸ್ಥಾಪಿಸುವ ಸಂದರ್ಭಗಳಲ್ಲಿ ಅಲ್ಲಿನ ಆದಿವಾಸಿಗಳನ್ನು, ಬುಡಕಟ್ಟು ಜನವರ್ಗಗಳನ್ನು ಹೊರಗಟ್ಟಿದ್ದು ಹಸಿಹಸಿಯಾಗಿಯೇ ಇದೆ.

ಸಮೂಹ ಹತ್ಯೆಯ ಭಾಗವಾಗಿ ಮೂಡಿಬರುತ್ತಿರುವ ಪುನರ್ವಸತಿಯಂತಹ ನಾಟಕೀಯ ಯೋಜನೆಗಳು ಸೃಷ್ಟಿಸುವ ನಿಧಾನವಾದ ಸಾಂಸ್ಕೃತಿಕ ವಿಸ್ಮೃತಿ, ಜನಾಂಗದ ವಿನಾಶಕಾರಿ ಪ್ರವೃತ್ತಿಗಳು ಕೋಲಾಹಲಕಾರಿಯಾದಂಥವು. ಈ ಕೋಲಾಹಲದ ವಿರುದ್ಧ ಹಲವಾರು ಬಾರಿ ನಡೆದ, ನಡೆಯುತ್ತಿರುವ ಸಂಘಟಿತ ಚಳವಳಿಗಳೂ ಕೂಡ ಅಧಿಕಾರದ ಎದುರು ಸೋತು ಸುಣ್ಣವಾದದ್ದೆ ಹೆಚ್ಚು. ಒಂದು ಹಂತದವರೆಗೂ ಕೆಲವೊಂದು ಚಳುವಳಿಗಳು ತಮ್ಮ ತೀವ್ರ ಸ್ವರೂಪದ ಪ್ರತಿಭಟನೆಯಿಂದ ಅಧಿಕಾರದ ಎದೆಯಲ್ಲಿ ನಡುಕ ಹುಟ್ಟಿಸಿ ಯೋಜನೆಗಳಿಗೆ ಬಿಸಿ ತಟ್ಟಿಸಿದರೂ ಅದು ಫಲಪ್ರದವಾದದ್ದು ಬಹಳ ಕಡಿಮೆಯೇ ಎಂದು ಹೇಳಬೇಕು. ತಾತ್ಕಾಲಿಕ ಪರಿಹಾರಗಳು ಆ ಚಳುವಳಿಗಳ ಬಿಸಿಯನ್ನು ತಣ್ಣಗೆ ಮಾಡಿದ್ದುಂಟು. ಸರಕಾರ ನೀಡುವ ತಾತ್ಕಾಲಿಕ ಪರಿಹಾರಗಳಾಗಲಿ, ಚಳುವಳಿಗಳ ತತ್ವಗಳಾಗಲಿ ಪರಂಪರಾಗತವಾಗಿ ಬದುಕಿದ ಭೂಮಿಯನ್ನು ಬಿಟ್ಟು ಅಪರಿಚಿತ ಭಾಗಕ್ಕೆ ರವಾನೆಯಾಗುವ, ಅಲ್ಲಿ ಅನಾಥ ಪ್ರಜ್ಞೆಯಿಂದ ಸಾಯದೆ ಬದುಕುವವರ ನೋವಿಗೆ ಉತ್ತರವಾಗಲಾರವು. ತನ್ನ ಅಸ್ತಿತ್ವದ ಪ್ರಶ್ನೆಯೊಂದಿಗೆ ಮನುಷ್ಯ ದಿನದಿಂದ ದಿನಕ್ಕೆ ತ್ವರಿತಗತಿಯಲ್ಲಿ ಉತ್ತರಿಸುತ್ತಿರುವ ಅಭಿವೃದ್ಧಿ ಪಥದಲ್ಲಿ ತಾನೆಲ್ಲಿ ನಿಂತುಕೊಳ್ಳಬೇಕೆನ್ನುವ ಸಂದಿಗ್ಧತೆಯನ್ನು ಒಂದೆಡೆ ಎದುರಿಸಬೇಕಾಗಿದೆ. ಮತ್ತೊಂದೆಡೆ ಕಿರಿದಾಗುತ್ತಿರುವ ಸಂಪನ್ಮೂಲ ಸಂಗ್ರಹದಲ್ಲಿ ತನ್ನ ಪಾಲಿಗಾಗಿ ಗುದ್ದಾಡಬೇಕಾದ ಅನಿವಾರ್ಯತೆ ಎದುರಾಗುತ್ತಿದೆ. ವರ್ತಮಾನ ಮತ್ತು ಭವಿಷ್ಯದ ಮಧ್ಯದ ಈ ಗುದ್ದಾಟ ಪ್ರಭುತ್ವ ಶಕ್ತಿಗೊಂದು ಹೊಸ ಭದ್ರತೆಯನ್ನು ಒದಗಿಸಿದೆ.

ಅಧಿಕಾರದಿಂದ ಹೊರಗಿದ್ದಾಗ ಸರಕಾರದ ಇಂಥ ಯೋಜನೆಗಳ ಬಗೆಗೆ, ಅವುಗಳ ವಿಫಲತೆಗಳ ಬಗ್ಗೆ, ಕೂಗಿ ಕೂಗಿ ಭಾಷಣ ಮಾಡುವ, ಪುಸ್ತಕ ಬರೆಯುವ, ಸಭೆಯಿಂದ ಹೊರ ನಡೆಯುವ ವಿರೋಧ ಪಕ್ಷದ ಮಂದಿ ಅಧಿಕಾರಕ್ಕೆ ಬಂದೊಡನೆ ಏನೂ ಆಗಿಲ್ಲವೆಂಬಂತೆ ಪ್ರತಿಷ್ಠೆಯ, ಸ್ವಾರ್ಥತೆಯ, ಅಸಹಾಯಕತೆಯ ಸೆರಗಿನಲ್ಲಿ ಇವನ್ನೆಲ್ಲವನ್ನು ಮುಚ್ಚಿಕೊಂಡುಬಿಡುತ್ತಾರೆ. ಆಗ ಅವರಿಗೆ ಜನರ ಕೂಗು, ಅವರ ಅನಾಥ ಸ್ಥಿತಿ ಕಾಣುವುದೇ ಇಲ್ಲ. ಮಠಾಧೀಶರು, ಮುಖರಹಿತ ರಾಜಕಾರಣಿಗಳು ಕೃಷ್ಣೆಯ ಕಮಂಡಲ ಹಿಡಿದು ಕರಸೇವೆ, ಉಪವಾಸ ಸತ್ಯಾಗ್ರಹದ ಮೂಲಕ ನಾಟಕೀಯ ಹೈಡ್ರೋಪಾಲಿಟಿಕ್ಸ್‌ನ್ನು ಮಾಡಿದ್ದು ಇತ್ತೀಚಿನ ಒಂದು ಅವಿಸ್ಮರಣೀಯ ಘಟನೆ.

ಪೌರ್ವಾತ್ಯ ಸಾಮ್ರಾಜ್ಯಶಾಹಿ ಅಥವಾ ಜಮೀನ್ದಾರಿಯ ಹಿಂಸೆಗಳು ಎಷ್ಟೇ ಅಮಾನವೀಯವಾದರೂ ಮೂರ್ತವಾದಂಥವು. ಅದು ಸ್ಥಳೀಯವೂ ಆಗಿದ್ದರಿಂದ ಅನ್ಯರನ್ನು ಹಿಂಸಿಸಿದಾಗಲೂ ಅದರ ಹಿಂದಿನ ಮಾನವೀಯತೆಯ ಮತ್ತೊಂದು ಮುಖ ನಿರಾಕರಣೆಯಾಗುವುದಿಲ್ಲ. ಅಂದರೆ ಇಲ್ಲಿನ ಅಮಾನವೀಯತೆಯಲ್ಲೂ ಒಂದು ಮಾನವೀಯ ಗುಣವಿತ್ತು. ಅಂಗಚ್ಛೇದ, ಶಿರಚ್ಛೇದ, ಬರೆ, ಚಾಟಿ ಏಟು, ಬಹಿಷ್ಕಾರಗಳಂತಹ ಯಾವುದೇ ಶಿಕ್ಷೆಯಾಗಿರಲಿ ಅದಕ್ಕೊಂದು ಧಾರ್ಮಿಕ ವಿಧಿ ಅಥವಾ ಸಾರ್ವತ್ರಿಕ ಪ್ರದರ್ಶನದ ಸ್ವರೂಪವಿತ್ತು. ಆದರೆ ಪಾಶ್ಚಿಮಾತ್ಯ ಏಕಾಧಿಪತ್ಯದ ಹಿಂಸೆಗಳು ವ್ಯಕ್ತಿ ನಿರಪೇಕ್ಷವಾದವು. ಇಂದು ವಿಜ್ಞಾನ-ತಂತ್ರಜ್ಞಾನ, ಇದರ ಅವಲಂಬಿಯಾದ ಪ್ರಭುತ್ವ, ಅದರ ಅಭಿವೃದ್ಧಿ ಚಟುವಟಿಕೆಗಳಲ್ಲಿ ಅಡಗಿರುವ ಜೀವಹಿಂಸೆ, ಭಯಾನಕತೆ, ಬಲಾತ್ಕಾರ, ಭೀಕರವಾದದ್ದು. ಅಮೂರ್ತವೂ, ನಿರ್ಲಿಪ್ತವೂ ಆದ ಹೊಸ ಹಿಂಸೆಯಿಂದಾಗಿ ಮನುಷ್ಯ ಮತ್ತಷ್ಟು ದುರ್ಬಲನಾಗುತ್ತಿದ್ದಾನೆ.

ಅಭಿವೃದ್ಧಿಯ ಹೆಸರಿನಲ್ಲಿ ಮನುಷ್ಯರ ಮೇಲೆ ನೋವನ್ನು ಹೇರುವುದು, ಆ ನೋವನ್ನೇ ತನ್ನ ಸಂಶೋಧನೆಯ ಪ್ರಗತಿಯ ಫಲಿತಾಂಶವನ್ನಾಗಿಸಿಕೊಳ್ಳುವುದು ಸಮರ್ಥನೀಯವೇ? ಇಂಥ ಜೀವ ಹಿಂಸಾತ್ಮಕ ಪ್ರಯೋಗಗಳಲ್ಲಿ ನೋವಿನ ಬಗ್ಗೆ, ನೋವನ್ನು ಅನುಭವಿಸುವವರ ಬಗ್ಗೆ ತಿರಸ್ಕಾರವಿದೆ, ನಿರ್ಲಕ್ಷ್ಯವಿದೆ. ಜೀವ-ಜೀವಿಗಳನ್ನು ವಿಚ್ಛಿದ್ರಗೊಳಿಸಿರುವ, ಬದುಕಿಗೆ ಭದ್ರತೆಯನ್ನು ಕೊಡಲು ಸೋಲುತ್ತಿರುವ ವಿಜ್ಞಾನ-ತಂತ್ರಜ್ಞಾನದ ಆವಿಷ್ಕಾರಗಳು ಕೇವಲ ಸಾಮಾಜಿಕ ಜೀವಶಾಸ್ತ್ರದ ಜಡ ಪರಿಭಾಷೆಗಳನ್ನು ನಮಗೆ ದಕ್ಕಿಸಿಕೊಡುತ್ತಿವೆ. ಜೀವನದರ್ಶನವಾಗಬೇಕಾದ ಹೊಸ ಅಭಿವೃದ್ಧಿಯ ಆವಿಷ್ಕಾರಗಳು ಜೀವವಿರೋಧಿಯಾಗುತ್ತಿವೆ. ಜೀವ-ಜೀವಿಗಳೊಂದಿಗಿನ ಅದರ ಎಲ್ಲ ಸಂಬಂಧಗಳು ಶಿಥಿಲವಾಗಿ, ಮನುಷ್ಯನ ಎಲ್ಲ ಆಪ್ತ ಮತ್ತು ಅನನ್ಯತೆಯ ಬಗಲುಗಳನ್ನು ಕಳೆದುಕೊಂಡು ಮೌಲ್ಯ ನಿರಪೇಕ್ಷವಾದ, ತಾರ್ಕಿಕ ಯಜಮಾನಿಕೆಯ, ಛಿದ್ರ ವ್ಯಕ್ತಿತ್ವವುಳ್ಳ ದರ್ಶನವಾಗಿ ಮಾರ್ಪಟ್ಟಿದೆ.

ಡಾ॥ ವೀರೇಶ ಬಡಿಗೇರ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩೨೭೬

# ದಲಿತ ಮಹಿಳೆ: ಬದಲಾವಣೆಯ ಹಾದಿಯಲ್ಲಿ

ದೇವಿಕಾ ಡಿ. ನಗರಕರ

ಮಾನವ ವಿಕಾಸದ ಚರಿತ್ರೆಯನ್ನು ಗಮನಿಸಿದರೆ ಹೆಣ್ಣು-ಗಂಡಿನ ನಡುವೆ ಅನೇಕ ಸಂಘರ್ಷಗಳು ನಡೆದಿರುವುದು ಕಾಣುತ್ತದೆ. ನಾಗರಿಕ ಸಮಾಜ ರೂಢಿಗೆ ಬರುವ ಪೂರ್ವದಲ್ಲಿ ಮಹಿಳೆಯ ಮೇಲೆ ಯಾವ ಕಟ್ಟುಪಾಡುಗಳೂ ಇರಲಿಲ್ಲ; ಗಂಡಿಗೂ ಯಾವ ವಿಶೇಷವಾದ ಹಕ್ಕು, ಅಧಿಕಾರಗಳೂ ಇರಲಿಲ್ಲ. ಸ್ವತಃ ಶ್ರಮಪಟ್ಟು ಆಹಾರ ಸಂಗ್ರಹಣೆ ಮಾಡಿ ಬದುಕಬೇಕಾದ ಆ ಕಾಲದಲ್ಲಿ ಪುರುಷನಂತೆ ಮಹಿಳೆಯೂ ಬೇಟೆ, ಕ್ರೀಡೆ, ವಿನೋದಗಳಲ್ಲಿ ಭಾಗಿಯಾಗುತ್ತಿದ್ದಳು. ಮುಂದೆ ವ್ಯವಸಾಯ ಪದ್ಧತಿ ಶೋಧಿತವಾದಾಗಲೂ ಕುಟುಂಬದಲ್ಲಿ, ಸಮಾಜದಲ್ಲಿ, ಮಹಿಳೆಯ ಸ್ಥಾನಮಾನಗಳು ಸಾಕಷ್ಟು ಉನ್ನತವಾಗಿದ್ದವು. ಆದರೆ ಕಾಲಕ್ರಮೇಣ ಖಾಸಗಿ ಆಸ್ತಿ ಹಾಗೂ ಅದರ ಒಡೆತನಗಳ ಕಲ್ಪನೆ ಬೆಳೆದಂತೆ ಪುರುಷನು ಮಹಿಳೆಯ ಮೇಲೆ ನಿಯಂತ್ರಣ ಸಾಧಿಸಿದಂತೆ ತೋರುತ್ತದೆ. ಮಹಾಮೇಧಾವಿ ಆಗಸ್ಟ್ ಬೆಬೆಲ್ ''ಮಹಿಳೆ : ಭೂತ, ವರ್ತಮಾನ ಮತ್ತು ಭವಿಷ್ಯ'' ಎಂಬ ತನ್ನ ಕೃತಿಯಲ್ಲಿ ಹೇಳಿರುವಂತೆ ಮಹಿಳೆ ಬಂಧನಕ್ಕೊಳಗಾದ ಪ್ರಪಂಚದ ಮೊದಲ ಮಾನವಜೀವಿ. ಪುರುಷ ಗುಲಾಮ ಅಸ್ತಿತ್ವಕ್ಕೆ ಬರುವುದಕ್ಕಿಂತ ಮುಂಚೆಯೇ ಅವಳು ಗುಲಾಮಗಿರಿಗೆ ಬಲಿಯಾಗಿದ್ದಳು !

ಒಟ್ಟು ಜನಸಂಖ್ಯೆಯಲ್ಲಿ ಪ್ರತಿಶತ ಐವತ್ತರಷ್ಟು ಮಹಿಳೆಯರಿದ್ದರೂ ಬಹುಪಾಲು ಪ್ರದೇಶಗಳಲ್ಲಿ ಅವಳನ್ನು ಗುಲಾಮಳಂತೆ ನಡೆಸಿಕೊಳ್ಳಲಾಗಿದೆ. ಮಹಿಳೆಯೂ ಸಮಾಜ ಜೀವಿಯಾದುದರಿಂದ ಕಾಲದಿಂದ ಕಾಲಕ್ಕೆ ಬದುಕಿನಲ್ಲಿ ಉಂಟಾದ ಬದಲಾವಣೆಗಳು ಅವಳ ವ್ಯಕ್ತಿತ್ವದ ಮೇಲೆ ಗಂಭೀರ ಪರಿಣಾಮವನ್ನುಂಟು ಮಾಡಿದವು. ದೈಹಿಕ ಸಾಮರ್ಥ್ಯ, ಬುದ್ಧಿಮತ್ತೆ, ಚಿಂತನಶೀಲತೆಗಳಲ್ಲಿ ಪುರುಷನಿಗಿಂತ ಮಹಿಳೆ ಏನೇನೂ ಕಡಿಮೆಯಲ್ಲವೆಂಬುದು ಸಾಬೀತಾಗಿದೆ. ಆದರೆ ಒಂದು ಮಾತು ನಿಜ; ಮಹಿಳೆಯನ್ನು ಸಾರ್ವಜನಿಕ ಜೀವನದಲ್ಲಿ ಪುರುಷನಿಗೆ ಸಮಾನವಾಗಿ ಪ್ರೋತ್ಸಾಹಿಸಿದ ಸಮಾಜವಾದಿ ರಾಷ್ಟ್ರಗಳಲ್ಲಿ ಮಾತ್ರ ಇಂತಹ ಸರ್ವತೋಮುಖ ಅಭಿವೃದ್ಧಿ ಸಾಧಿಸಲು ಸಾಧ್ಯವಾಗಿದೆ. ಸೋವಿಯತ್ ರಾಷ್ಟ್ರ, ಚೀನಾ, ವಿಯಟ್ನಾಂ, ಕ್ಯೂಬಾಗಳಲ್ಲಿ ಮಹಿಳೆ ಸಾಧಿಸಿರುವ ಅದ್ಭುತ ಯಶಸ್ಸು ಆ ದೇಶಗಳ ಮುನ್ನಡೆಗೆ ಕಾರಣವಾಯಿತು. ಬಂಡವಾಳಶಾಹಿ ರಾಷ್ಟ್ರಗಳಲ್ಲಿ ಆಕೆಯನ್ನು ಪುರುಷನ ನಂತರದ ಸ್ಥಾನದಲ್ಲಿಟ್ಟು, ಭೋಗದ ವಸ್ತುವಾಗಿ ನಡೆಸಿಕೊಳ್ಳಲಾಗುತ್ತದೆ. ವಿಶ್ವಸುಂದರಿ ಸ್ಪರ್ಧೆಗಳನ್ನು ನಡೆಸುವವರು ಬಂಡವಾಳಶಾಹಿಗಳೇ !

**ಭಾರತದಲ್ಲಿ ಮಹಿಳೆ**

ಇಂದಿಗೂ ಬುಡಕಟ್ಟು ಜನಾಂಗಗಳಲ್ಲಿ ಮಾತೃಪ್ರಧಾನ ಕುಟುಂಬಗಳಿವೆ. ಬೇರೆಡೆಗಳಲ್ಲೂ ಹಾಗಿದ್ದುದು ಕಾಲಾಂತರದಲ್ಲಿ ತಿರುವು ಮುರುವು ಆಗಿ ಪಿತೃಪ್ರಧಾನ ವ್ಯವಸ್ಥೆ ಸಮಾಜದಲ್ಲಿ ನೆಲೆಯೂರಿ ಮಹಿಳೆ ಪ್ರಪಾತಕ್ಕೆ ತಳ್ಳಲ್ಪಟ್ಟಳು. ಸಾಮಾಜಿಕ ನಿಯಮಗಳನ್ನು ಜಾತಿ ವ್ಯವಸ್ಥೆಯ ಮೇಲೆ ವ್ಯಾಖ್ಯಾನಗೊಳಿಸಿದ ಮನು ಮಹಿಳೆಗೆ ಸ್ವತಂತ್ರ ಅಸ್ತಿತ್ವವನ್ನು ನಿರಾಕರಿಸಿದ. ನಮ್ಮ ಇತಿಹಾಸ ಕಾವ್ಯಗಳಾದ ರಾಮಾಯಣ ಮತ್ತು ಮಹಾಭಾರತ ಗ್ರಂಥಗಳಲ್ಲಿ ನಾವು ಮಹಿಳೆಯನ್ನು ಹೇಗೆ ನಡೆಸಿಕೊಂಡಿದ್ದೇವೆ ಎಂಬುದಕ್ಕೆ ಪ್ರತ್ಯಕ್ಷ ಸಾಕ್ಷಿಗಳಾಗಿ ಕೆಲವು ರೋಚಕ ಪ್ರಸಂಗಗಳಿವೆ. ಸಮಾಜದಲ್ಲಿ ಜಾತಿ ವ್ಯವಸ್ಥೆ ಜಾರಿಗೆ ಬಂದಮೇಲೆ ಮಹಿಳೆಯ ಮೇಲಿನ ಕಟ್ಟುಪಾಡುಗಳು ಇನ್ನಷ್ಟು ಬಿಗಿಗೊಂಡವು. ಆಕೆಗೆ ಶಿಕ್ಷಣವನ್ನು ನಿರಾಕರಿಸಲಾಯಿತು. ಆಸ್ತಿಯ ಹಕ್ಕು, ತಾಯ್ತನದ ಹಕ್ಕು, ಎಲ್ಲವೂ ಪುರುಷನ ಅಧೀನಕ್ಕೊಳಪಟ್ಟು ಮಹಿಳೆ ಸಂಪೂರ್ಣವಾಗಿ ಪುರುಷಾವಲಂಬಿಯಾದಳು.

**ದಲಿತ ಮಹಿಳೆ**

ದಲಿತ ಮಹಿಳೆಯ ಬದಲಾವಣೆಯ ದಾರಿ ಕಂಡುಕೊಳ್ಳಬೇಕಾದರೆ ದಲಿತ ಮಹಿಳೆಯನ್ನು ಸುತ್ತುವರೆದಿರುವ ಸಮಸ್ಯೆಗಳನ್ನು ಅರಿಯಬೇಕಾಗುವುದು. ಈ ದೇಶದಲ್ಲಿ ಆರ್ಥಿಕವಾಗಿ ಹಿಂದುಳಿದವರೆಲ್ಲರೂ ದಲಿತರೆ. ಆದರೆ ಜಾತಿಯಿಂದ ಹಿಂದುಳಿದವರೆಲ್ಲರೂ, ಆರ್ಥಿಕವಾಗಿ ಅಷ್ಟೇ ಅಲ್ಲ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ತೀರ ಉಪೇಕ್ಷೆಗೆ ಒಳಗಾದವರು. ಹೀಗಾಗಿ ದಲಿತರ ಸಮಸ್ಯೆಯನ್ನು ನೋಡಿದಾಗ ಜಾತಿಯಿಂದ ಹಿಂದುಳಿದವರೇ ನಾನಾ ರೀತಿಯ ಸಮಸ್ಯೆಗಳಿಗೆ ಒಳಗಾಗುತ್ತಿದ್ದಾರೆಂಬುದು ಹೆಚ್ಚು ಸ್ಪಷ್ಟವಾಗುತ್ತದೆ.

ದಲಿತ ಮಹಿಳೆ ದಲಿತರ ಎಲ್ಲಾ ಸಮಸ್ಯೆಗಳಿಗೆ ವಾರಸುದಾರಳು. ಜಾತಿವ್ಯವಸ್ಥೆಯೆಂಬುದು ಮಾನವ ಸಂಬಂಧಗಳಿಗೆ ತಡೆ ಗೋಡೆಯನ್ನು ನಿರ್ಮಿಸಿದುದರ ಪರಿಣಾಮವಾಗಿ ಇಡೀ ಸಾಮಾಜಿಕ ವ್ಯವಸ್ಥೆಯು ಕುಸಿದುಹೋಯಿತು. ಮೇಲುಜಾತಿಯ ಜನಗಳು ಸ್ವಜಾತಿಯ ಮಹಿಳೆಯನ್ನು ಬಂಧಿಯಾಗಿಸಿಕೊಂಡುದಷ್ಟೇ ಅಲ್ಲ, ತಮ್ಮ ಹೆಚ್ಚಿನ ತೆವಲುಗಳಿಗೆ ಕೆಳಜಾತಿಯ ಹೆಣ್ಣು ಮಕ್ಕಳನ್ನು ಬಲಿಪಶುವಾಗಿಸಿದರು. ಇಂದಿಗೂ ಆಚರಣೆಯಲ್ಲಿ ಬೆಳೆದುಕೊಂಡು ಬಂದಿರುವ ದೇವದಾಸಿ ಪದ್ಧತಿ, ಬೆತ್ತಲೆ ಸೇವೆ, ಓಕುಳಿಯಾಟ, ಮುಂತಾದ ಆಚರಣೆಗಳಿಗೆ ಧಾರ್ಮಿಕ ಹಿನ್ನೆಲೆ ಇದ್ದಿರಬಹುದಾದರೂ ಇವೆಲ್ಲವುಗಳನ್ನು ಮೇಲುಜಾತಿಯ ಗಂಡಸರು ತಮ್ಮ ಲೈಂಗಿಕಾಸಕ್ತಿಗೆ ಹೊಂದಿಸಿಕೊಂಡರು. ದೇವದಾಸಿ ಪದ್ಧತಿಯಲ್ಲಿ ದೇವರಿಗೆ ತಾನು ದಾಸಿಯೆನಿಸಿಕೊಂಡು ಅಡಲಿಗೆ ಹೊತ್ತು ಭಿಕ್ಷೆಬೇಡಿ ಬದುಕುವುದು ರೂಢಿಯಲ್ಲಿರಬಹುದು. ಆದರೆ ಹೆಣ್ಣಿನ ವಿಷಯದಲ್ಲಿ ಇದು ಎಷ್ಟೊಂದು ಅಮಾನುಷ ಪದ್ಧತಿಯಾಗಿ ಮಾರ್ಪಟ್ಟಿದೆಯೆಂದರೆ ದೇವದಾಸಿ ಪದ್ಧತಿಯನ್ನು ಕೆಳಜಾತಿ ಹೆಣ್ಣು ಮಕ್ಕಳಿಗೆ ಕಡ್ಡಾಯ ಮಾಡಲ್ಪಟ್ಟಿತು. ಇದರಿಂದ ಆ ಹೆಣ್ಣು ಮದುವೆಯಾಗುವಂತಿರಲಿಲ್ಲ, ಅಷ್ಟೇ ಅಲ್ಲ, ಇಚ್ಛಿಸಿದ ಗಂಡಸರಿಗೆಲ್ಲ ಚಕಾರ ಎತ್ತದೆ ಮೈಯೊಪ್ಪಿಸಬೇಕು. ಇಂತಹ ಅಮಾನುಷ ಲೈಂಗಿಕ ಆಕ್ರಮಣಕ್ಕೆ ಸಿಕ್ಕು ಎಳೆಹರೆಯದ ದಲಿತ ಹೆಣ್ಣುಗಳು ಹಲವಾರು ಲೈಂಗಿಕ ವ್ಯಾಧಿಗಳಿಗೆ ತುತ್ತಾಗಿ ಸಾವನ್ನಪ್ಪುತ್ತಿದ್ದಾರೆ. ಇತಿಹಾಸ ಪ್ರಸಿದ್ಧವಾದ ಬಿಜಾಪುರ ಜಿಲ್ಲೆಯಲ್ಲಿಯೇ ಹದಿನಾಲ್ಕು ಸಾವಿರ ವೇಶ್ಯೆಯರಿದ್ದಾರೆಂದರೆ ಇದು ಒಂದು ಇತಿಹಾಸವೆ ! ಹೆಣ್ಣನ್ನು ತಮ್ಮ ಲೈಂಗಿಕ ಸುಖಕ್ಕೆ ಧಾರಾಳವಾಗಿ ಬಳಸಿಕೊಳ್ಳುತ್ತಿದ್ದ ಮೇಲುಜಾತಿ ಗಂಡಸರು ಮುಂದೆ ಒದಗುತ್ತಿದ್ದ ಯಾವುದೇ ಪರಿಣಾಮಗಳಿಗೆ ಜವಾಬ್ದಾರಿ ಹೊರುತ್ತಿರಲಿಲ್ಲ. ದೇವದಾಸಿಯರಲ್ಲಿ ಹುಟ್ಟುವ ಸಂತತಿಯೆಲ್ಲ ತಂದೆಯಿಲ್ಲದೆ ತಬ್ಬಲಿಯಾಗುತ್ತಿತ್ತು. ಪಿತೃಪ್ರಧಾನತೆಯನ್ನು ಒಪ್ಪಿಕೊಂಡ ಸಮಾಜದಲ್ಲಿ ಹೀಗೆ ತಂದೆಯಿಲ್ಲದ ಮಕ್ಕಳನ್ನು ಹೀನಾಯವಾಗಿ ನೋಡಲಾಗುತ್ತಿತ್ತು. ಮೊದಲೇ ಗಂಡಿನ ಆಶ್ರಯವಿಲ್ಲದೆ ಬದುಕುವುದು ಕಷ್ಟವಾಗಿರುವ ಪರಿಸ್ಥಿತಿಯಲ್ಲಿ ದಲಿತ ಮಹಿಳೆ ಆರ್ಥಿಕವಾಗಿ ಅಭದ್ರಳಾಗಿ, ಅನಕ್ಷರಸ್ಥಳಾಗಿ ತನ್ನ ಕುಟುಂಬದ ಸಮಸ್ತ ಜವಾಬ್ದಾರಿಯನ್ನು ಹೊರಬೇಕಾಗುತ್ತದೆ.

ಉತ್ತರ ಕರ್ನಾಟಕದ ಕೆಲವು ಭಾಗಗಳಲ್ಲಿ ಹನುಮಂತ ದೇವರಿಗೆ ಓಕುಳಿಯಾಟದ ಸೇವೆ ಮಾಡುವುದು ರೂಢಿಯಲ್ಲಿದೆ. ಕೆಳಜಾತಿಯ ಹೆಣ್ಣು ಮಕ್ಕಳನ್ನು ದೇವಸ್ಥಾನದ ಅಂಗಳದಲ್ಲಿ ನಿಲ್ಲಿಸಿ ಮೇಲುಜಾತಿಯ ಗಂಡಸರು ಸುತ್ತುಕಡೆಯಿಂದ ಓಕುಳಿಗೊಚ್ಚುತ್ತಾರೆ. ಓಕುಳಿಯ ನೀರಿನಿಂದ ಮೈಯೆಲ್ಲ ತೊಯ್ದು ಉಟ್ಟಬಟ್ಟೆ ಮೈಗಂಟಿ ಇಡಿಯಾಗಿ ದೇಹ ಉಬ್ಬುತಗ್ಗುಗಳಲ್ಲಿ ಹೊರಕಾಣುವುದನ್ನು ನೋಡಿ ಸುತ್ತಣ ಜನ ಹರ್ಷೋದ್ಗಾರ ಮಾಡುತ್ತಾರೆ. ಓಕುಳಿ ಚೆಲ್ಲಿದ ಜನಗಳಿಗೆ ನೆಪಕ್ಕೆ ಹುಣಸೆಬರಲಿನಿಂದ ಹೊಡೆಯುವುದರಲ್ಲಿ

---

(೪೫ನೇ ಪುಟದಿಂದ) *ಯೋಗಪ್ರವೇಶ.....*

ಸುಪ್ತ-ವಜ್ರಾಸನ ಎನಿಸಿಕೊಳ್ಳುತ್ತದೆ. ಮುಂಡದ ಭಾರವು ಕೈಗಳ ಮೇಲಿರುವಂತೆ ಮಾಡಿಕೊಂಡು ಹಿಂದಕ್ಕೆ ಬಾಗುವುದು ಸುಲಭ. ಹಾಗೆ ಮಾಡದೆ ಮಲಗಹೋದರೆ ವಜ್ರಾಸನಕ್ಕಾಗಿ ಮಡಿಸಿರುವ ಕಾಲುಗಳು ಹಾಗೆ ಉಳಿಯದೆಹೋಗುವ ಸಂಭವವಿರುತ್ತದೆ. ಮೊಣಕೈಗಳ ಮೇಲೆ ಭಾರ ಊರಿ ಬೆನ್ನ ಮೇಲೆ ಮಲಗುವುದು ಒಳ್ಳೆಯ ವಿಧಾನ. ಇದನ್ನು ಮಾಡಹೋದಾಗ ಪ್ರಾರಂಭಕ್ಕೆ ಮುಂಡವು ಬಗ್ಗಿದಂತಿರುವುದು, ಪೂರ್ಣವಾಗಿ ಬೆನ್ನ ಮೇಲೆ ಮಲಗಲಾಗದಿರುವುದು, ಮಂಡಿಗಳು ಮೇಲಕ್ಕೇಳುವಂತಾಗುವುದು, ಎಲ್ಲಾ ಅನುಭವಕ್ಕೆ ಬರಬಹುದು. ಕ್ರಮೇಣ ಸ್ನಾಯುಗಳು ಸಡಿಲಗೊಂಡಾಗ ಸ್ವಸ್ಥವಾಗಿ ಬೆನ್ನ ಮೇಲೆ ಮಲಗಬಹುದು, ಮಡಿಚಿದ ಕಾಲುಗಳನ್ನು ಹಾಗೆಯೇ ಇರಿಸಿಕೊಂಡಿರಬಹುದು, ಮುಂಡವು ನೆಲಕ್ಕೆ ಸಮಾನಾಂತರವಾಗಿರುವಂತೆ ಮಾಡಬಹುದು. ಕೈಗಳನ್ನು ಮಡಿಚಿ ತಲೆಯ ಕೆಳಕ್ಕಿಟ್ಟುಕೊಳ್ಳುವುದರಿಂದ ಇದಕ್ಕೆ ಅನುವಾಗುತ್ತದೆ. ಕಣ್ಣು ಮುಚ್ಚಲು ಅಡ್ಡಿಯಿಲ್ಲ. ವಜ್ರಾಸನಕ್ಕೆ ಹಿಂದಿರುಗುವಾಗ ಮೊದಲು ಕೈಗಳನ್ನು ತೆಗೆದು, ಮೊಣಕೈಗಳ ಸಹಾಯದಿಂದ ನಿಧಾನವಾಗಿ ಮೇಲೇಳಬೇಕು. ಈ ಆಸನಕ್ಕೆ ಎರಡು ಅಥವಾ ಮೂರು ನಿಮಿಷದ ಅವಧಿ ಸಾಕು. ಸುಪ್ತ-ವಜ್ರಾಸನ ಸಹ ಮಲಬದ್ಧತೆಯ ನಿವಾರಣೆಗೆ ಸಹಕಾರಿಯಾದುದು. ○○

ಹೆಣ್ಣು ಮಕ್ಕಳು ಸಮಾಧಾನ ಕಾಣಬೇಕು ! ಈ ಕಾರ್ಯಕ್ಕಾಗಿ ದಲಿತ ಹೆಣ್ಣು ಮಕ್ಕಳಿಗೆ ಇಂತಿಷ್ಟು ಎಂದು ಧನಸಹಾಯ ಮಾಡಲಾಗುತ್ತದೆ. ಊರ ಬೇರೆ ಹೆಣ್ಣು ಮಕ್ಕಳಲ್ಲಿ ಅವರವರ ಗಂಡಂದಿರ ಜೊತೆ ಮಾನವಾಗಿ ಬದುಕುತ್ತಿರುವಾಗ ದಲಿತ ಹೆಣ್ಣು ಮಕ್ಕಳು ಮೌನವಾಗಿ ಈ ಯಾತನೆಯನ್ನು ಅನುಭವಿಸುತ್ತಾರೆ !

ಅನಾದಿಕಾಲದಿಂದಲೂ ಉಗ್ರದೇವತೆಗಳಿಗೆ ಕುರಿ ಕೋಳಿಗಳನ್ನು ಬಲಿಕೊಡುವ ಪದ್ಧತಿ ನಮ್ಮಲ್ಲಿದೆ. ಆನೆ ಕುದುರೆಗಳ ಬಲಿ ಯಾರೂ ಕೊಟ್ಟಿಲ್ಲ, ಕೊಡುವುದೂ ಇಲ್ಲ. ತೀರ ಹಿಂದುಳಿದ ಅಸಹಾಯಕ ಹೆಣ್ಣು ಮಕ್ಕಳೇ ಕುರಿ-ಕೋಳಿಗಳಾಗಿದ್ದಾರೆ. ಇವರ ನೋವಿಗೆ ಕೊನೆಯಿಲ್ಲವೇ ? ಮಹಿಳಾ ಜಾಗೃತಿಯ ಬಗ್ಗೆ, ಸಮಾನತೆಯ ಹಕ್ಕು ಸೌಲಭ್ಯಗಳ ಬಗ್ಗೆ ಭಾಷಣ ಬಿಗಿಯುತ್ತಿದ್ದರೂ, ಕಾಯ್ದೆ ಪಾಸು ಮಾಡುತ್ತಿದ್ದರೂ, ಲೇಖನ ಬರೆಯುತ್ತಿದ್ದರೂ, ನಗರ ಪ್ರದೇಶದಲ್ಲಿ ವಾಸಿಸುವ ಸುಶಿಕ್ಷಿತ ದಲಿತ ಮಹಿಳೆ ಸಹ ದೌರ್ಜನ್ಯಕ್ಕೆ ಒಳಗಾಗುತ್ತಿದ್ದಾಳೆ. ವರ್ಷದಿಂದ ವರ್ಷಕ್ಕೆ ದೌರ್ಜನ್ಯದ ಪ್ರಕರಣಗಳ ಸಂಖ್ಯೆ ಹೆಚ್ಚುತ್ತಲೇ ನಡೆದಿದೆ. ಇನ್ನು ಅತ್ಯಾಚಾರ, ಲೈಂಗಿಕ ಕಿರುಕುಳಗಳ ಸಂಖ್ಯೆಗೇನೂ ಮಿತಿಯಿಲ್ಲ. ಇದಕ್ಕೆ ಕಾರಣ ಸ್ತ್ರೀಯ ಅಸಹಾಯಕತೆ; ಅಥವಾ ಗಂಡಸರ ಮೋಹಕ ಮಾತಿಗೆ ಮರುಳಾಗಿ ಈ ರೀತಿ ಬಲಿಪಶುವಾಗುತ್ತಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಬರುವ ಶರಣೆ ರೇವಮ್ಮ ಬಹಳ ಮಾರ್ಮಿಕವಾದ ಮಾತೊಂದನ್ನು ಹೇಳಿದ್ದಾಳೆ :

''ಶಕ್ತಿಯುಳ್ಳಡೆ ಸಂಹಾರವ ಮಾಡುವದು, ಶಕ್ತಿಯಿಲ್ಲದಿದ್ದರೆ ಕಣ್ಣು ಕರ್ಣವ ಮುಚ್ಚಿಕೊಂಡು ಶಿವಮಂತ್ರವ ಜಪಿಸುವುದು'' ಎನ್ನುತ್ತಾಳೆ. ಕಣ್ಣು ಕಿವಿ ಮುಚ್ಚಿಕೊಂಡು ಶಿವಮಂತ್ರ ಜಪಿಸುವ ಕಾಲ ಇದಲ್ಲ; ಇಂದಿನ ದಲಿತ ಮಹಿಳೆ ಕಾಳಿ, ದುರ್ಗಿಯರಂತೆ ಶಕ್ತಿ ದೇವತೆಯಾದಾಗ ಮಾತ್ರ ಅವಳು ಸಮಾಜದಲ್ಲಿ ಸ್ವತಂತ್ರವಾಗಿ ಬದುಕಲು ಸಾಧ್ಯವಿದೆ.

ಇನ್ನೊಂದು ವಿಷಾದದ ಸಂಗತಿ ಎಂದರೆ ಸುಶಿಕ್ಷಿತ ದಲಿತ ಮಹಿಳೆ ತಾನೊಬ್ಬಳು ಸುಶಿಕ್ಷಿತಳಾದ ಮಾತ್ರಕ್ಕೆ ಅಥವಾ ಸಮಾಜದಲ್ಲಿ ಒಂದು ಗಣ್ಯಸ್ಥಾನವನ್ನು ಪಡೆದ ಮಾತ್ರಕ್ಕೆ ತನ್ನ ಜವಾಬ್ದಾರಿ ಮುಗಿಯಲಿಲ್ಲ ಎಂಬುದನ್ನು ಅರಿಯುತ್ತಿಲ್ಲ. ತನ್ನಂತೆ ಇರುವ ಇತರ ದಲಿತ ಮಹಿಳೆಯರ ಸಮಸ್ಯೆಗಳನ್ನು ಅರಿತುಕೊಂಡು ಅವರ ಕಷ್ಟಸುಖದಲ್ಲಿ ಭಾಗಿಯಾದರೆ ಮಾತ್ರ ಅವಳ ಬಾಳು ಸಾರ್ಥಕವಾಗುತ್ತದೆ.

ಈ ಮಹಿಳಾ ಹೋರಾಟ ಕೇವಲ ಪುರುಷರ ವಿರುದ್ಧದ ಹೋರಾಟವಾಗಿರದೆ ಸಮಾಜದ ಶೋಷಣಾತ್ಮಕ ವ್ಯವಸ್ಥೆಯ ವಿರುದ್ಧದ ಹೋರಾಟವಾಗಬೇಕು. ಎಲ್ಲೋ ಅಲ್ಲೊಂದು ಇಲ್ಲೊಂದು ಸ್ತ್ರೀ ಪರ ಹೋರಾಟದ ಮಹಿಳಾ ಸಂಘಟನೆಗಳು ಇದ್ದರೂ ಸಹ, ಅವು ಮೇಲ್ಜಾತಿಯವರಿಗೆ ಮಾತ್ರ ಮೀಸಲಾಗಿವೆ. ಅತ್ಯಂತ ಶ್ರೀಮಂತ ವರ್ಗದ ಮತ್ತು ಮಧ್ಯಮ ವರ್ಗದ ಮಹಿಳಾ ಮಣಿಗಳ 'ಟೈಂ ಪಾಸ್' ಸಲುವಾಗಿ ಇಂತಹ ಕೆಲವು ಸಂಘಗಳು ತಲೆ ಎತ್ತಿವೆ ಎಂದರೆ ಆಶ್ಚರ್ಯಪಡಬೇಕಾಗಿಲ್ಲ. ಸಾಮಾಜಿಕವಾಗಿ ಕಡೆಗಣಿಸಲ್ಪಟ್ಟ ಅತ್ಯಂತ ಕೆಳವರ್ಗದ ಮಹಿಳೆಯರ ಬಗ್ಗೆ ಇವರು ಮಾಡಿದ ಸಾಧನೆ ಶೂನ್ಯವೆಂದೇ ತೋರುತ್ತದೆ.

*ಬೆತ್ತಲೆ ಸೇವೆಯು ದಲಿತ ಮಹಿಳೆಯರ ನಡುವಿನ ಮತ್ತೊಂದು ಅಮಾನುಷ ಆಚರಣೆಯಾಗಿದೆ. ಹೆಣ್ಣಿನ ಅಂಗಾಂಗಗಳ ಸವಿ ನೋಡುವ ಇಚ್ಛೆಯಿಂದ ಮೇಲುಜಾತಿಯ ಜನಾಂಗಗಳಿಂದ ನಿರ್ದೇಶಿತವಾಗಿರುವ ಈ ಪದ್ಧತಿ ಇಂದಿಗೂ ಚಲಾವಣೆಯಲ್ಲಿದೆ. ಶಿವಮೊಗ್ಗೆಯ ಚಂದ್ರಗುತ್ತಿ ಹಾಗೂ ಗುಲ್ಬರ್ಗಾ ಜಿಲ್ಲೆಯ ಕೆಲವು ಹಳ್ಳಿಗಳಲ್ಲಿ ಬೆತ್ತಲೆ ಸೇವೆ, ಉಚಿಗಿ ಉಡುವುದರ (ಬಟ್ಟೆಗೆ ಬದಲಾಗಿ ಮರದ ತೊಪ್ಪಲನ್ನು ಧರಿಸುವುದು) ಮೂಲಕ ದೇವರಿಗೆ ಹರಕೆ ಸಲ್ಲಿಸುವ ಪದ್ಧತಿ ಇದೆ. ಇದೆಲ್ಲ ದೇವರು ಮತ್ತು ಧರ್ಮದ ಹೆಸರಿನಲ್ಲಿ ನಡೆಯುವುದರಿಂದ ಅನಕ್ಷರಸ್ಥ ಮಹಿಳೆ ಇದರ ಮರ್ಮವನ್ನು ಗುರುತಿಸಲಾರಳು. ಅಷ್ಟೇ ಅಲ್ಲ, ಇದಕ್ಕೆ ಮೌನವಾಗಿ ಒಪ್ಪಿ ಅನುಸರಣೆ ಮಾಡುವುದನ್ನು ಬಿಟ್ಟರೆ ಅವಳಿಗೆ ಬೇರೆ ದಾರಿಯೇ ತೋಚದ ಸ್ಥಿತಿಯಲ್ಲಿದ್ದಾಳೆ.*

ದಲಿತ ಮಹಿಳೆಯರ ಅಭಿವೃದ್ಧಿಗಾಗಿ ಸರಕಾರ ಕೆಲವೊಂದು ಯೋಜನೆಗಳನ್ನು ಹಾಕಿಕೊಂಡಿದ್ದರೂ ಆ ಯೋಜನೆಗಳ ಲಾಭವನ್ನು ಪಡೆದುಕೊಂಡವರು ಎಷ್ಟು ಜನ? ಅಲ್ಲದೆ ಆ ಯೋಜನೆಗಳು ಅವರ ಮನೆ ಬಾಗಿಲು ತಲುಪಿವೆಯೋ ?

ನಮ್ಮಲ್ಲಿ ಮಹಿಳಾ ಸಂಘಗಳು ಇವೆ. ಆದರೆ ಸಂಘಟನೆ ಎಲ್ಲಿದೆ? ದಲಿತ ಮತ್ತು ರೈತ ಮಹಿಳೆಯರನ್ನೊಳಗೊಂಡಂತೆ ೧೯೮೬ರಲ್ಲಿ ಮಹಾರಾಷ್ಟ್ರದ ಚಾಂದ್‌ವಾಡದಲ್ಲಿ ಮಹಿಳಾ ಚಳುವಳಿ ನಡೆಯಿತು. ೧೯೮೯ರ ಹೊತ್ತಿಗೆ ಈ ಮಹಿಳಾ ಸಂಘಟನೆಯು ಉನ್ನತಿಯ ಹಂತ ತಲುಪಿತು. ಹಳ್ಳಿಯ ಸಾರಾಯಿ ಅಂಗಡಿಗಳ ವಿರುದ್ಧ ಆಂದೋಲನ ಕೈಗೊಂಡದ್ದಲ್ಲದೆ ಮಹಿಳೆಯ ಆಸ್ತಿಯ ಹಕ್ಕು ಮತ್ತು ಮತೀಯವಾದದ ಬಗ್ಗೆ ಹೆಚ್ಚು ಗಮನ ಹರಿಸಿದ್ದಿತು. ಹಲವಾರು ಕಾರಣಗಳಿಂದ ಈ ಸಂಘಟನೆಯ ಕಾರ್ಯಗಳು ಈಗ ಸ್ಥಗಿತಗೊಂಡಿವೆ. ಹೀಗೆ ಬೇರೆ ಕಡೆಯೂ ಆಗಿರಲಿಕ್ಕೆ ಸಾಕು.

ದಲಿತ ಮಹಿಳೆಯರು ಎಂದರೆ ಇನ್ನೊಬ್ಬರ ದೈಹಿಕ ತೃಷೆಯನ್ನು ಹಿಂಗಿಸುವುದಕ್ಕಾಗಿಯೇ ಹುಟ್ಟಿಬಂದವರು ಎಂಬ ಹೀನ ಪರಿಕಲ್ಪನೆ ನಮ್ಮ ಸಮಾಜದಲ್ಲಿದೆ. ಅದಕ್ಕೆ ಇಂದಿನ ದಲಿತ ಮಹಿಳೆ ಸುಶಿಕ್ಷಿತಳೇ ಇರಲಿ ಅಶಿಕ್ಷಿತಳೇ ಇರಲಿ ನೈತಿಕತೆಯನ್ನೇ ಒಂದು ಸವಾಲಾಗಿ ಸ್ವೀಕರಿಸಬೇಕಾಗಿದೆ. ಇಂದಿನ ದಲಿತ ಮಹಿಳೆ ಜಾಗ್ರತಳಾಗಿ ದಲಿತ ಸಂಘಗಳನ್ನು ಕಟ್ಟಿಕೊಂಡರೆ ಹೆಚ್ಚು ಅರ್ಥಪೂರ್ಣ. ಒಬ್ಬ ಸವರ್ಣೀಯನು ಪಂಚತಾರಾ ಹೊಟೇಲಿನಲ್ಲಿ ಕುಳಿತು ದಲಿತರ ಬಗ್ಗೆ ಕಾವ್ಯ ಬರೆಯುವದಕ್ಕೂ ಒಬ್ಬ ದಲಿತನೇ ದಲಿತರ ಕುರಿತು ಕಾವ್ಯ ಬರೆಯುವದಕ್ಕೂ ಅಂತರವಿದೆ. ಆದ್ದರಿಂದ ಇಂದಿನ ದಲಿತ ಮಹಿಳೆ ಸ್ವಪರಿವರ್ತನೆಯಾದಾಗ ಮಾತ್ರ ಜಗತ್ತು ಪರಿವರ್ತನೆಯಾಗಲು ಸಾಧ್ಯವಿದೆ.

ದಲಿತ ಮಹಿಳೆ ತಾನು ಬದಲಾವಣೆಯ ಹಾದಿ ಕಾಣಬೇಕಾದರೆ ಮೊದಲು ತನ್ನನ್ನು ಸುತ್ತುವರಿದಿರುವ ಅಜ್ಞಾನದಿಂದ ಬಿಡುಗಡೆ ಪಡೆಯಬೇಕು. ಶಿಕ್ಷಣವೊಂದೇ ಆಕೆಯ ಬಹುಪಾಲು ಸಮಸ್ಯೆಗಳಿಗೆ ಉತ್ತರವಾಗಬಲ್ಲುದು. ಆದರೆ ಇದು ಅಷ್ಟಕ್ಕೇ ನಿಲ್ಲುವುದಿಲ್ಲ. ಶಿಕ್ಷಣ ಪಡೆದುಕೊಂಡ ಮಹಿಳೆ ತನ್ನ ಸ್ಥಿತಿಯನ್ನು ಅರಿಯಲು ಮತ್ತು ವ್ಯವಸ್ಥೆ ತನ್ನ ಮೇಲೆ ಹೇರಿದ ಕಟ್ಟುಪಾಡುಗಳನ್ನು ಸಡಿಲಿಸಲು ಸಮರ್ಥಳಾಗುತ್ತಾಳೆ. ಆದರೆ ಮುಂದೆ ಆಕೆಯು ತನ್ನ ಸಾಮರ್ಥ್ಯವನ್ನು ಪ್ರಕಟಪಡಿಸಲು ಅಗತ್ಯವಾದ ಅವಕಾಶಗಳು ಲಭ್ಯವಾಗಬೇಕು. ದಲಿತರಲ್ಲಿ ಮೀಸಲಾತಿಯ ಲಾಭವೆಲ್ಲ ಮುಕ್ಕಾಲುಪಾಲು ಪುರುಷರಿಗೇ ದಕ್ಕಿದೆ. ಸಮಾಜದಲ್ಲಿ ಪುರುಷನಿಗೆ ದೊರೆಯುವುದಕ್ಕೆ ಸಮನಾದ ಅವಕಾಶಗಳು ಲಭ್ಯವಾದಾಗ ಮಾತ್ರ ಮಹಿಳೆ ಬದಲಾವಣೆಯ ಹಾದಿಯಲ್ಲಿ ಹೆಜ್ಜೆ ಇಡಲು ಸಾಧ್ಯವಿದೆ.

ದೇವಿಕಾ ಡಿ. ನಗರಕರ
ಶಿವಾನಂದ ಮಹಾವಿದ್ಯಾಲಯ, ಕಾಗವಾಡ

ಸುದ್ದಿ-ಚಿತ್ರ



### ಪುಸ್ತಕ ಬಿಡುಗಡೆ

ನವೆಂಬರ್ ೪ರ ಶನಿವಾರ, ಬೆಂಗಳೂರು ಬಸವನಗುಡಿಯ ನ್ಯಾಷನಲ್ ಕಾಲೇಜಿನ ಡಾ|| ಎಚ್. ಎನ್. ಸಭಾಂಗಣದಲ್ಲಿ ಪುಸ್ತಕ ಬಿಡುಗಡೆ ಸಮಾರಂಭ ನಡೆಯಿತು. ನವಕರ್ನಾಟಕ ಪ್ರಕಟಿಸಿರುವ ಡಾ|| ಎಸ್. ಬಾಲಚಂದ್ರ ರಾವ್ ಅವರ 'ಫಲಜ್ಯೋತಿಷ ನಂಬುವಿರಾ ?' ಮತ್ತು 'ಅಸ್ಟ್ರಾಲಜಿ ಬಿಲೀವ್ ಇಟ್ ಆರ್ ನಾಟ್ ?'- ಈ ಎರಡು ಕೃತಿಗಳನ್ನು ಶ್ರೀ ವೀರಭದ್ರ ಚನ್ನಮಲ್ಲ ಮಹಾಸ್ವಾಮಿಗಳು ಬಿಡುಗಡೆ ಮಾಡಿದರು. ಪ್ರೊ|| ಬಿ. ವಿ. ವೀರಭದ್ರಪ್ಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಡಾ|| ಜೆ. ಶ್ರೀನಿವಾಸ ಮೂರ್ತಿಯವರು ಕೃತಿಗಳ ಪರಿಚಯ ಮಾಡಿಸಿದರು. ಲೇಖಕ ಡಾ|| ಎಸ್. ಬಾಲಚಂದ್ರ ರಾವ್ ಈ ಕೃತಿಗಳ ರಚನೆಯ ಹಿನ್ನೆಲೆಯನ್ನು ವಿವರಿಸಿದರು.

# ಜೋಕಿಮ್ ಅರುತಮ್

ಮ್ಯಾಗ್‌ಸೆಸೆ ಫೌಂಡೇಷನ್‌ನ ಪ್ರಶಸ್ತಿಗೆ ಆಯ್ಕೆಯಾದ ವ್ಯಕ್ತಿ ಶ್ರೀ ಜೋಕಿಮ್ ಅರುತಮ್ ಅವರನ್ನು ಪತ್ತೆ ಹಚ್ಚಲು ಆರು ತಿಂಗಳುಗಳ ಕಾಲ ಹಿಡಿಯಿತು. ಜನರ ಮಧ್ಯೆ ಸೇರಿಹೋದ ಈತನನ್ನು ಅಷ್ಟು ಸುಲಭವಾಗಿ ಗುರುತು ಹಿಡಿಯಲು ಆಗುವುದಿಲ್ಲ. ಈತ ಈಗಲೂ ಮುಂಬೈ ಕೊಳಚೆ ಪ್ರದೇಶ 'ಚೀತಾಕ್ಯಾಂಪ್' ನ ನಿವಾಸಿ. ಇವರ ಜೀವನ ಸಾಹಸಮಯವಾದದ್ದು ಮತ್ತು ಬದ್ಧತೆಯಿಂದ ಕೂಡಿದ್ದು. ಏನನ್ನಾದರೂ ಸಾಧಿಸಬೇಕೆಂಬ ಕಾತುರ, ತವಕ, ದೃಢ ಮನಸ್ಸು ಇದ್ದಲ್ಲಿ ಆ ಕಾರ್ಯ ಸಾಧಿಸಲು ಉನ್ನತ ಪದವಿಗಳ ಅಗತ್ಯವಿಲ್ಲ ಎಂಬ ಅಂಶವನ್ನು ನಿರೂಪಿಸಿದ್ದಾರೆ ಪ್ರೌಢಶಾಲೆಯ ವಿದ್ಯಾಭ್ಯಾಸವನ್ನೂ ಸಹ ಪೂರ್ತಿ ಮಾಡದಿರುವ ಶ್ರೀ ಜೋಕಿಮ್ ಅರುತಮ್.

ತಮಿಳುನಾಡಿನಿಂದ ಕೆ. ಜಿ. ಎಫ್. ಗೆ ಬಂದು ನೆಲೆಸಿದ ಕುಟುಂಬಗಳಲ್ಲಿ ಇವರ ತಂದೆಯವರದೂ ಒಂದು. ಸುಖವಾಗಿದ್ದ ಆ ಕುಟುಂಬ ಜೋಕಿಮ್ ಅರುತಮ್‌ಗೆ ವಯಸ್ಸು ಬರುವ ವೇಳೆಗೆ ಎಲ್ಲವನ್ನೂ ಕಳೆದುಕೊಂಡು ಕಡು ಬಡತನದಲ್ಲಿ ನರಳುತ್ತಿತ್ತು. ೧೫ ವಯಸ್ಸಿನ ಜೋಕಿಮ್‌ಗೆ ವಿಪರೀತ ನಿರಾಸೆ. ಆ ವಯಸ್ಸಿನಲ್ಲಿ ಮನೆಬಿಟ್ಟು ಓಡಿಹೋಗಿ ಜೀವನೋಪಾಯಕ್ಕಾಗಿ ಅನೇಕ ಕಡೆ ಅಲೆದಾಡು ವವರ ಸಂಖ್ಯೆ ಸಾಕಾದಷ್ಟಿರುವ ಈ ದೇಶದಲ್ಲಿ, ಜೋಕಿಮ್ ಮಾಡಿದ್ದೂ ಅದೇ ಕೆಲಸ. ಕೆ. ಜಿ. ಎಫ್. ನಿಂದ ಬೆಂಗಳೂರು ನಗರಕ್ಕೆ ಓಡಿಬಂದು ನಂತರ ಮುಂಬೈ ರೈಲು ಹತ್ತಿ ಸೇರಿದ್ದು ಚೆಂಬೂರಿನಲ್ಲಿನ ಭಯಂಕರ ಕೊಳಚೆ ಪ್ರದೇಶವೊಂದನ್ನು.



*ಮುಂಬೈ ಬೀದಿ ಮಕ್ಕಳೊಡನೆ ಜೋಕಿಮ್ ಅರುತಮ್*

ಯಾವ ಕೆಲಸವೂ ಸಿಗದಿದ್ದರೂ ನಿರಾಶನಾಗದೆ, ಆ ಕೊಳಚೆ ಪ್ರದೇಶದ ನಿವಾಸಿಗಳೊಂದಿಗೆ ಸ್ನೇಹದಿಂದ ವರ್ತಿಸುತ್ತಾ, ಹಾಗೆ ಸ್ನೇಹಿತರಾದವರ ಒಂದು ಗುಂಪನ್ನು ಕೂಡಿಸಿದ. ಅವರೆಲ್ಲಾ ಅಲ್ಲಿ ಒಂದೆಡೆ ಸೇರಿ ಕೈಗಳಿಗೆ ಸಿಕ್ಕಿದ ಡಾಲ್ಡಾ ಡಬ್ಬಗಳನ್ನೂ, ಅಲ್ಯುಮಿನಿಯಂ ಪಾತ್ರೆಗಳನ್ನೂ, ಚಮಚೆಗಳನ್ನೂ ಉಪಕರಣ ಗಳನ್ನಾಗಿ ಮಾಡಿಕೊಂಡು ತಾವು ಕೇಳಿದ್ದ ಹಾಡುಗಳನ್ನು ಹಾಡುವುದು ಪ್ರತಿನಿತ್ಯದ ಕೆಲಸವಾಯಿತು. ಈ ರೀತಿ ಅವರೊಡನೆ ಸುಮಧುರ ಬಾಂಧವ್ಯ ಬೆಳೆಸಿಕೊಂಡ ಜೋಕಿಮ್, ಆ ಕೊಳಚೆ ಪ್ರದೇಶದಲ್ಲಿ ಎಲ್ಲರಿಗೂ ಬೇಕಾದ ವ್ಯಕ್ತಿಯಾದರೂ ಅವನ ಹೆಸರನ್ನು ಸರಿಯಾಗಿ ಉಚ್ಚರಿಸಲು ಅವರಿಗೆ ಬರುತ್ತಿರಲಿಲ್ಲವಾಗಿ 'ಜೋಕಿನ್' ಎಂದು ಕರೆಯಲ್ಪಟ್ಟ. ತನ್ನಲ್ಲಿದ್ದ ಸಂಘಟನಾ ಸಾಮರ್ಥ್ಯದಿಂದ ಕೊಳಚೆ ಪ್ರದೇಶದ ನಿವಾಸಿಗಳ ಮಕ್ಕಳಿಗಾಗಿ ಅಲ್ಲಿ ಒಂದು ಸಣ್ಣ ಶಾಲೆ ಪ್ರಾರಂಭಿಸಿ ಎಬಿಸಿಡಿ ಕಲಿಸಲು ಪ್ರಾರಂಭಿಸಿದ.

ತನ್ನಂತೆ ಬಡವರಾಗಿ ಕೊಳಚೆ ಪ್ರದೇಶಗಳಲ್ಲಿ ವಾಸಿಸುವವರ ಬಗ್ಗೆ ಜನ ಏಕೆ ಕೀಳು ದೃಷ್ಟಿಯಿಂದ ನೋಡುತ್ತಾರೆ ಎಂದು ಅರ್ಥವಾಗದೆ ಮನಸ್ಸಿಗೆ ಕಷ್ಟವಾಗುತ್ತಿತ್ತು. ಅಲ್ಲಿ ವಾಸಿಸುತ್ತಿದ್ದವರನ್ನು ಬೀದಿಯ ನಾಯಿಗಳಿಗಿಂತಲೂ ಕೀಳಾಗಿ ಕಾಣುತ್ತಿದ್ದುದು ನುಂಗಲಾರದ ತುತ್ತಾಯಿತು. ನಗರಪಾಲಿಕೆ ಆ ಪ್ರದೇಶವನ್ನು ಸ್ವಚ್ಛ ಮಾಡುವ ಮಾತೇ ಇರಲಿಲ್ಲ. ಒಂದು ದಿನ ಜೋಕಿನ್ ಒಂದಷ್ಟು ಹಳೆಯ ದಿನಪತ್ರಿಕೆಗಳನ್ನು ಕೊಂಡು ತಂದು, ಅದರಲ್ಲಿ ಅಲ್ಲಿ ಸೇರಿದ್ದ ಕಸ ಕಡ್ಡಿ ಇತ್ಯಾದಿಯನ್ನು ಕಟ್ಟಿಕೊಂಡು ಬರುವಂತೆ ಸಣ್ಣ ಹುಡುಗರಿಗೆ ಹೇಳಿದ. ಅವರನ್ನು ಪಿಕ್‌ನಿಕ್‌ಗೆ ಕರೆದೊಯ್ಯುವುದಾಗಿ ಹೇಳಿದ್ದರಿಂದ ಜೋಕಿನ್ ಹೇಳಿದ ಕೆಲಸವನ್ನು ಖುಷಿಯಿಂದ ಮಾಡಿದರು ಮಕ್ಕಳು. ಕಸ-ಕಡ್ಡಿ ಬಳಿದುಕೊಂಡು, ಕಾಗದದಲ್ಲಿ ಕಟ್ಟಿ ಅವನೊಡನೆ ಹೊರಟರು ಆಡುತ್ತಾ-ಹಾಡುತ್ತಾ. ಮುನಿಸಿಪಾಲಿಟಿ ಕಛೇರಿಯ ಬಳಿಗೆ ಅವರೆಲ್ಲರನ್ನೂ ಕರೆತಂದು ತಾವು ತಂದಿದ್ದ ಕಸಕಡ್ಡಿ ರಾಶಿ ಹಾಕಿಸಿದ.

ಮೂರನೆಯ ದಿವಸ ಬೆಳಿಗ್ಗೆ ಪೊಲೀಸ್ ಕಾನ್‌ಸ್ಟೇಬಲ್ ಜೋಕಿಮ್‌ನನ್ನು ಹುಡುಕಿಕೊಂಡು ಬಂದು "ಏಕೆ ಈ ರೀತಿ ಮಾಡಿದೆ?" ಎಂದು ಗದರಿದಾಗ ನನಗೆ ಇನ್ನಾವ ದಾರಿ ಇತ್ತು, ನೀವು ನಮ್ಮ ಇರುವಿಕೆಯನ್ನೇ ಗುರುತಿಸುತ್ತಿಲ್ಲ, ಇನ್ನು ನಮ್ಮ ಮಾತು ಕೇಳುವುದೆಲ್ಲಿ ಬಂತು? ನಮ್ಮ ಕೊಳಚೆ ಪ್ರದೇಶವನ್ನು ಶುಭ್ರಪಡಿಸಿ ಎಂದೇನೂ ನಾವು ಮುನಿಸಿಪಾಲಿಟಿಯವರನ್ನು ಕೇಳುವುದಿಲ್ಲ. ಇಲ್ಲಿರುವ ಕಸ-ಕಡ್ಡಿ ಕೊಳೆತು ನಾರುವ ವಸ್ತುಗಳನ್ನು ಕೊಂಡೊಯ್ಯಿರಿ, ಅದು ಮುನಿಸಿಪಾಲಿಟಿಯ ಕರ್ತವ್ಯ ಎಂದನಂತೆ. ಇದರ ಬಗ್ಗೆ ಸಾಕಷ್ಟು ತರ್ಕ-ವಿತರ್ಕ ನಡೆಯಿತಾದರೂ, ಜೋಕಿಮ್‌ನ ದಿಟ್ಟತನದ ಕಾರ್ಯದಿಂದ ಕೊಳಚೆ ಪ್ರದೇಶದ ನಿವಾಸಿಗಳು ಮುನಿಸಿಪಾಲಿಟಿಯ ಅಧಿಕಾರಿಗಳ ಮೇಲೆ ತಿರುಗಿ ಬಿದ್ದು ಜಯ ಗಳಿಸಿದ್ದರು.

ಹೀಗೆಯೇ ಒಂದರ ನಂತರ ಮತ್ತೊಂದು ಕಾರ್ಯಕ್ರಮ ಕೈಗೆತ್ತಿಕೊಂಡು ಯಶಸ್ಸು ಗಳಿಸಿದರು. ಮುಂಬೈ ನಗರದಲ್ಲಿನ ಎಲ್ಲಾ ಕೊಳಚೆ ಪ್ರದೇಶಗಳ ನಿವಾಸಿಗಳ ಸಂಸ್ಥೆಯನ್ನು ಸ್ಥಾಪಿಸಿದ ಜೋಕಿಮ್. ಈ ಸಂಸ್ಥೆ ಬೇರೆಯವರಿಂದ ಯಾವ ರೀತಿಯ ಆರ್ಥಿಕ ಸಹಾಯವನ್ನೂ ಅಪೇಕ್ಷಿಸದ ಸ್ವಯಂ-ಸೇವಾ ಸಂಸ್ಥೆಯಾಗಿ ಬೆಳೆಯಿತು. ಬೇರೆ 'ಸರ್ಕಾರೇತರ' ಸಂಸ್ಥೆಗಳಿಗೂ ಜೋಕಿಮ್ ಸಂಸ್ಥೆಗೂ ಇದೇ ಮುಖ್ಯವಾದ ವ್ಯತ್ಯಾಸ. ಕಾಲಕ್ರಮೇಣ ಅದು ರಾಷ್ಟ್ರೀಯ ಮಹಾಮಂಡಲವಾಯಿತು. ಫೆಡರೇಷನ್‌ನ ಮಹಿಳಾ ವಿಭಾಗ ಕೊಳಚೆ ಪ್ರದೇಶದ ನಿವಾಸಿಗಳು ತಮ್ಮ ಕಷ್ಟಾರ್ಜಿತ ಹಣದಲ್ಲಿ ಸ್ವಲ್ಪ ಭಾಗ ಉಳಿತಾಯ ಮಾಡುವ ಕಾರ್ಯ ರೂಪಿಸಲು ಸಹಾಯ ಮಾಡಿತು. ಈ ಉಳಿತಾಯದಿಂದ ನಿವಾಸಿಗಳಿಗೆ ಔಷಧೋಪಚಾರಕ್ಕೆ, ಮಕ್ಕಳ ಬಟ್ಟೆ ಬರೆ, ಶಾಲಾ ಶುಲ್ಕ ಇತ್ಯಾದಿಗಳಿಗೆ ಸಾಲ ಕೊಡುವ ಕಾರ್ಯಕ್ರಮ ರೂಪಿಸಿಕೊಂಡಿತು. ಅರ್ಧಗಂಟೆಯಲ್ಲಿ ಗೊತ್ತಾದ ದಿನ, ಗೊತ್ತಾದ ವೇಳೆಯಲ್ಲಿ ಸಾಲದ ವಿಲೇವಾರಿಯಾಗಿಬಿಡುತ್ತಿತ್ತು. ಹಾಗೆ ಉಳಿತಾಯವಾದ ಹಣದ ಮೊತ್ತವನ್ನು ಯಾವ ರೀತಿಯ ಸೆಕ್ಯೂರಿಟಿ, ಷ್ಯೂರಿಟಿ ಇಲ್ಲದೆ ಸಾಲ ನೀಡುತ್ತಿತ್ತು; ಅವರು ಸಾಲವನ್ನು ನಿರ್ಧರಿಸಲಾಗಿರುವ ಕಂತುಗಳಲ್ಲಿ ತೀರಿಸಿಬಿಡು ತ್ತಾರೆಂಬ ನಂಬಿಕೆಯಿಂದ. ಅಲ್ಲಿನ ನಿವಾಸಿಗಳಿಗೆ ತಮ್ಮನ್ನು ನಂಬಿ ಹಣ ಸಾಲ ಕೊಡುವ ಒಂದು ಪದ್ಧತಿ ಪ್ರಾರಂಭವಾಗಿದೆ ಎಂಬ ಅಂಶ ಅರಿವಾಯಿತು. ಇದರೊಂದಿಗೆ ತಾವು ಪಡೆದ ಸಾಲವನ್ನು ತೀರಿಸುವ ಜವಾಬ್ದಾರಿಯ ಅರಿವೂ ಆಯಿತು.

ಇಂದು ಆ ಮಹಾಮಂಡಲ ಒಂದು ಮಾದರಿಯ ಸಂಸ್ಥೆಯಾಗಿ ಬೆಳೆದಿದೆ. ದಕ್ಷಿಣ ಆಫ್ರಿಕಾ, ಕಾಂಬೋಡಿಯಾ, ಥಾಯ್‌ಲ್ಯಾಂಡ್ ಮತ್ತು ವಿಯಟ್ನಾಂ ದೇಶಗಳು ಮಾತ್ರವಲ್ಲದೆ ವಿಶ್ವಸಂಸ್ಥೆ ಮತ್ತು ವಿಶ್ವ ಬ್ಯಾಂಕ್ ಸಹ ತಮ್ಮ ಯೋಜನೆಗಳನ್ನು, ಪುನರ್ವಸತಿ ಯೋಜನೆಗಳನ್ನು ರೂಪಿಸುವ ಸಲುವಾಗಿ ಶ್ರೀ ಜೋಕಿಮ್ ಅರುತಮ್ ಅವರ ಸಹಾಯ ಅಪೇಕ್ಷಿಸಿದೆ ಎಂದರೆ ಅದೆಂತಹ ಅದ್ಭುತ ಸಾಧನೆ! ವಿಶ್ವ ಬ್ಯಾಂಕ್ ಆಸಕ್ತಿ ಅನುಮಾನ ವನ್ನು ಕೆರಳಿಸುತ್ತದೆ. ಇಂದು ಆತ ತನ್ನ ಸ್ನೇಹಿತರೊಂದಿಗೆ ನಗರಗಳಲ್ಲಿರುವ ಬಡವರನ್ನು ಯಾವ ರೀತಿ ಕಾಣಬೇಕೆಂಬುದನ್ನು ಕಲಿಸುವ ಸಲುವಾಗಿ ವಿಶ್ವದ ಎಲ್ಲಾ ಕಡೆ ಪರ್ಯಟನ ಮಾಡುವ ಸಾಮರ್ಥ್ಯ ಗಳಿಸಿಕೊಂಡಿದ್ದಾರೆ. ಇಷ್ಟಾದರೂ ದೇಶೀಯ ಮಾಧ್ಯಮಗಳಿಗೆ ಇವರ ಅದ್ಭುತ ಸಾಧನೆ ಗಮನಕ್ಕೆ ಬಂದಿಲ್ಲ.

ವಿಶಾಲ ಮುಂಬೈನ ರಸ್ತೆಗಳಲ್ಲಿ ವಾಸಿಸುತ್ತಿರುವ ೨೧೦೦೦ ಕುಟುಂಬಗಳಿಗೆ ಪುನರ್ವಸತಿ ಕಲ್ಪಿಸುವುದು ಅಂತಹ ಕಷ್ಟಸಾಧ್ಯವಾದ ಕೆಲಸವೇನೂ ಅಲ್ಲ. ಸರಕಾರ ಸ್ವಲ್ಪ ಭೂಮಿಯನ್ನು ನೀಡಿದಲ್ಲಿ ಅವರುಗಳೇ ಮನೆಗಳನ್ನು ಕಟ್ಟಿಕೊಳ್ಳುವ ಸಾಧ್ಯತೆ ಇದೆ. ಸರಕಾರ ಮನಸ್ಸು ಮಾಡಿದಲ್ಲಿ ಮುಂಬೈನಲ್ಲಿರುವ ಎಲ್ಲಾ ಕೊಳಚೆ ಪ್ರದೇಶಗಳ ನಿವಾಸಿಗಳಿಗೆ ಮತ್ತು ರಸ್ತೆಗಳಲ್ಲಿ ವಾಸಿಸುತ್ತಿರುವ ಎಲ್ಲರಿಗೆ ಪುನರ್ವಸತಿ ನೀಡಬಹುದು ಎಂಬುದು ಶ್ರೀ ಜೋಕಿಮ್ ಅರುತಮ್ ಅವರ ಅಭಿಪ್ರಾಯ. ಅವರುಗಳಿಗೂ ಗೌರವದಿಂದ ಜೀವಿಸಬೇಕೆಂಬ ಆಸೆ ಬೆಟ್ಟದಷ್ಟಿದೆ. ಒಂದು ವರ್ಷದೊಳಗಾಗಿ ಈ ಕಾರ್ಯ ಸಾಧಿಸಲು ಸಾಧ್ಯವಿದೆ; ಇದು ಕಾರ್ಯಗತವಾದಲ್ಲಿ ಮುಂಬೈ ನಗರ ಚೊಕ್ಕಟವಾಗಿರುತ್ತದೆ ಎಂಬ ದೃಢವಿಶ್ವಾಸ ಅವರದು. ಉದಾಹರಣೆಯಾಗಿ, ರೈಲ್ವೇ ಟ್ರ್ಯಾಕ್‌ಗಳ ಬಳಿ ವಾಸಿಸುತ್ತಿದ್ದ ಮೂರು ಸಾವಿರ ಕುಟುಂಬಗಳಿಗೆ ಮೂರು ತಿಂಗಳ ಅವಧಿಯಲ್ಲಿ ಪುನರ್ವಸತಿ ಕಲ್ಪಿಸಿಕೊಡಲಾಗಿದೆ. 'ಧಾರಾವಿ' ಎಂಬ ಒಂದು ಕೊಳಚೆ ಪ್ರದೇಶದಲ್ಲೇ ೧೬ ಜನ ಎಂ. ಬಿ. ಬಿ. ಎಸ್. ಪಟ್ಟಧಾರಿಗಳೂ ೨೪ ಜನ ಇಂಜಿನಿಯರಿಂಗ್ ಪಟ್ಟಧಾರಿಗಳೂ ಇದ್ದಾರೆ. ಇವರುಗಳಿಗೆಲ್ಲಾ ಬೇಕಾಗಿರುವುದು ಒಂದಿಷ್ಟು ಜಾಗ ಮಾತ್ರ. ನಮ್ಮನ್ನು ಅಸ್ಪೃಶ್ಯರಂತೆ ಕಾಣುವ ವ್ಯವಸ್ಥೆ ಬದಲಾಗಿ ನಮಗೆ ಸಲ್ಲಬೇಕಾದ ಗೌರವ ನೀಡಿದರೆ ಬೇಕಾದಷ್ಟನ್ನು ಸಾಧಿಸಬಹುದು ಎನ್ನುತ್ತಾರೆ ಪ್ರತಿಷ್ಠಿತ ಮ್ಯಾಗ್‌ಸೆಸೆ ಪ್ರಶಸ್ತಿಗೆ ಪಾತ್ರರಾಗಿರುವ ಜೋಕಿಮ್ ಅರುತಮ್. ಇವರ ಮಾತುಗಳನ್ನು ಕೇಳಿ ಬಡವರನ್ನು ಕೀಳುದೃಷ್ಟಿಯಿಂದ ನೋಡುವುದನ್ನು ಬಿಟ್ಟಲ್ಲಿ ಮಾನವೀಯತೆ ಯನ್ನು ಮೌಲ್ಯವಾಗಿಟ್ಟುಕೊಂಡು, ಬಡವರ ಧ್ವನಿಯನ್ನು ಸಹೃದತೆಯಿಂದ ಕೇಳಿಸಿಕೊಳ್ಳಬಲ್ಲ ಸುಶಿಕ್ಷಿತ ಸಮಾಜವನ್ನು ಹೊಂದಿದೆ ಭಾರತ, ಎಂಬ ಅಂಶ ವಿಶ್ವಕ್ಕೆ ತೋರಿಸಬಹುದು.

**ಟಿ. ಎಸ್. ರುಕ್ಮಾಯಿ**
೫, 'ಕೃಪಾ', ೮ನೇ ಬ್ಲಾಕ್, ಕುಮಾರ ಪಾರ್ಕ್ ಪಶ್ಚಿಮ, ಬೆಂಗಳೂರು - ೫೬೦ ೦೨೦

# ಬೆಳ್ಳಿಗೂದಲ ನಗೆಮುಖ ಮರೆಯಾಯಿತು

**ಡಾ||** ಹಾ. ಮಾ. ನಾಯಕ ಅವರು ಇನ್ನಿಲ್ಲ. ನಾನು ಅವರನ್ನು ಭೇಟಿಯಾಗಿ ಆರೇಳು ...ಂಗಳುಗಳಾಗಿತ್ತು. ಅವರು ತೀರಿಕೊಂಡಿದ್ದಾರೆಂದು ಇನ್ನೂ ನಂಬಲಾಗುತ್ತಿಲ್ಲ. ಇಲ್ಲೇ ...ಲ್ಲೋ ಮತ್ತೆ ಭೇಟಿಯಾಗುತ್ತಾರೆ ಇಲ್ಲವೆ ಒಂದು ಪೋಸ್ಟ್ ಕಾರ್ಡ್ ಬರೆದುಹಾಕುತ್ತಾರೆ ...ಂದೇ ಅನಿಸುತ್ತಿದೆ. ಅವರ 'ಗೋಧೂಳಿ'ಯಿಂದ ಹೊರಹೋಗುತ್ತಿದ್ದಷ್ಟು ಪೋಸ್ಟ್ ...ಾರ್ಡುಗಳು ಬಹುಶಃ ಮೈಸೂರಿನ ಜಯಲಕ್ಷ್ಮೀಪುರದ ಬೇರಾವ ಮನೆಯಿಂದಲೂ ...ೋಗುತ್ತಿರಲಿಲ್ಲವೆನಿಸುತ್ತದೆ. ನಮ್ಮೆಷ್ಟೋ ಲೇಖಕರು ಪೋಸ್ಟ್ ಕಾರ್ಡಿನಲ್ಲಿ ಬರೆಯಲು ...ಂಜುತ್ತಾರೆ; ಆದರೆ ನಾಯಕರಿಂದ ನನಗೆ ಬಂದಿರುವ ಪತ್ರಗಳೆಲ್ಲಾ ಬರೀ ಪೋಸ್ಟ್ ...ಾರ್ಡುಗಳೇ. ಇದು ಅವರ ಸರಳತೆ ಮತ್ತು ಮುಕ್ತತೆಗಳಿಗೆ ಒಂದು ಕುರುಹು. ...ವರುಗಳಲ್ಲಿಟ್ಟು ಕಾಗದ ಕಳಿಸುವುದು ಖರ್ಚಿನ ಬಾಬ್ತು ಮಾತ್ರವಲ್ಲ, ಅದಕ್ಕೆ ತಯಾರಿ ...ೆಚ್ಚು. ಆದರಿಂದಾಗಿ ಬರೆಯುವುದನ್ನು ಮುಂದೂಡಬಹುದು ಅಥವಾ ...ದ್ದುಮಾಡಬಹುದು. ಕೆಲವು ವೇಳೆ ಬೇರೆಯವರ ಸಹಾಯವೂ ಬೇಕಾಗಬಹುದು. ಇಂಥ ...ಿಕ್ಕ ವಿಷಯದಲ್ಲೂ ಇತರರನ್ನು ಏಕೆ ಆಶ್ರಯಿಸಬೇಕು? ಅದು ನಾಯಕರಿಗೆ ಆಗಿಬರದಿದ್ದ ...ಭ್ಯಾಸ. 'ನಾವು ಮುಚ್ಚಿಟ್ಟುಕೊಳ್ಳಬೇಕಾದ್ದು ಏನಿದೆ, ಸ್ವಾಮಿ' ಎನ್ನುತ್ತಿದ್ದರು ಅವರು ...ೋಸ್ಟ್ ಕಾರ್ಡಿನಲ್ಲಿ ಬರೆಯುವುದನ್ನು ಕುರಿತು ಕೇಳಿದಾಗ. ಅನೇಕ ಸಾಹಿತ್ಯ- ದಿಗ್ಗಜಗಳಿಗೆ ...ುಚ್ಚಿಟ್ಟುಕೊಳ್ಳಬೇಕಾದ್ದೇ ಬಹಳವಿರುವಾಗ ನಾಯಕರಿಗೆ ಅಂತಹ ಅನಿವಾರ್ಯತೆ ...ಲ್ಲದಿದ್ದುದು ಒಂದು ವಿಶೇಷ. ಎಂಥೆಂಥದೋ ಪ್ರಶಸ್ತಿಗಳನ್ನು ಪಡೆದು ಅದರ ಬಲದಿಂದ ...ುನೆಯನ್ನೋ ಅಧಿಕಾರಸ್ಥಾನವನ್ನೋ ಪಡೆದುಕೊಳ್ಳಬೇಕಾದ ಗೀಳು ಅವರಿಗಿರಲಿಲ್ಲ. ...ವರನ್ನು ಗೌರವಿಸಲು ಅದೂ ಒಂದು ಮುಖ್ಯ ಕಾರಣ. ಪ್ರಶಸ್ತಿಗಳನ್ನು 'ಕೊಡಿಸುವ' ...್ಥಾನಗಳಲ್ಲಿ ಹಲವು ವರ್ಷಗಳಿದ್ದೂ ಅಹಂಕಾರದಿಂದ ಮೆರೆಯುವಂತಾಗದಿದ್ದುದೇ ಅವರ ...ಶಿಷ್ಟ ಗುಣ. ಇದು ವಿರಳವೆಂದು ಹೇಳುವ ಅಗತ್ಯವಿಲ್ಲ.

ಕರ್ನಾಟಕ ಸರ್ಕಾರದ ಶೈಕ್ಷಣಿಕ ಪದ್ಧತಿಗಳಲ್ಲಿ ಹೊಲಸಾದ ಒಂದು ಅಂಶ ವೃತ್ತಿಪರ ...ಾಪಿಟೇಶನ್ ಶುಲ್ಕದ ಕಾಲೇಜುಗಳನ್ನು ಬೇಕಾಬಿಟ್ಟಿ ತೆರೆಯುವುದು. ವಿಶ್ವವಿದ್ಯಾನಿಲಯಗಳ ...ಫಾರಸ್ಸು ಇಲ್ಲದೆಯೂ ಸರ್ಕಾರವು ಇಂತಹ ಕಾಲೇಜುಗಳಿಗೆ ಅನುಮತಿ ನೀಡಿರುವ ...್ರಸಂಗಗಳು ಎಷ್ಟೋ ಇವೆ. ಹಾಗೆ ಅಸ್ತಿತ್ವಕ್ಕೆ ಬಂದ ಕಾಲೇಜುಗಳು ವಿಶ್ವವಿದ್ಯಾಲಯಕ್ಕೆ ಬೇಡದ ...ುಕ್ಕಳಾದರೂ ಅವುಗಳ ಲಾಲನೆ, ಪೋಷಣೆ, ಇತ್ಯಾದಿ ಜವಾಬ್ದಾರಿ ಅದಕ್ಕಿರುತ್ತದೆ. ...್ಯಾಯತತ್ತೆಯ ಬಗ್ಗೆ ಭೋರ್ಗರೆಯುವ ಅನೇಕ ಶಿಕ್ಷಣ ತಜ್ಞರು ಈ ಪಾತಕ ಕ್ರಮವನ್ನು ...್ರತಿಭಟಿಸುವುದಿಲ್ಲ. ಯಾವ ಶಿಕ್ಷಣ ಮಂತ್ರಿ ಬಂದರೂ ಆತನನ್ನು ಸರಸ್ವತೀ ಕುವರನೆಂದು ...ೊಗಳಿ ಅಟ್ಟಕ್ಕೇರಿಸುವ ಪ್ರಮಾದ ನಮ್ಮ ಬಹುತೇಕ ಉಪಕುಲಪತಿಗಳು ಮಾಡುತ್ತಾರೆ. ...ಾಯಕರು ಇದಕ್ಕೆ ಹೊರತಾದವರು. ಸರ್ಕಾರದ ಅನೀತಿಯನ್ನು ವಿರೋಧಿಸಿ ಗುಲ್ಬರ್ಗಾ ...ಶ್ವವಿದ್ಯಾನಿಲಯದ ಉಪಕುಲಪತಿ ಸ್ಥಾನಕ್ಕೆ ರಾಜಿನಾಮೆ ನೀಡಿ, ಮೈಸೂರಿನ ತಮ್ಮ ಪ್ರಾಧ್ಯಾಪಕ ...ುದ್ದೆಗೆ ಹಿಂದಿರುಗಿ, ವಿಭಾಗದ ಮುಖ್ಯಸ್ಥರೂ ಆಗದೆ ಅಧ್ಯಾಪನದಲ್ಲಿ ತೊಡಗಿಕೊಂಡವರು ...ಾಯಕರು. ಏನೋ ಆಸ್ತಿ ಕಳೆದುಕೊಂಡವರಂತೆ ಮುಖ ಸಣ್ಣದು ಮಾಡಿಕೊಂಡು ...್ಯಗ್ರತೆಯನ್ನು ಅವರು ಅನುಭವಿಸಲಿಲ್ಲ. ಅದೇ ಹಸನ್ಮುಖ, ಅದೇ ಉತ್ಸಾಹ, ಅದೇ ...ಾರ್ಯತತ್ಪರತೆ. ಇಂತಹ ನಡತೆಯಿಂದ ಅಭಿನಂದನಾರ್ಹರಾದವರು ನಮ್ಮಲ್ಲಿ ವಿರಳ. ...ಾಯಕರು ಆ ಪರಂಪರೆಯವರು. ತಮ್ಮ ಮಕ್ಕಳು ಉಪಕುಲಪತಿಗಳಾಗಬೇಕೆಂದು ...ಳಿವಯಸ್ಸಿನಲ್ಲಿ ಯಾರಾರ ಕಾಲೋ ಹಿಡಿದು ಜಾತಿಮಹಿಮೆಯನ್ನು ಜಾಹೀರುಪಡಿಸುವ ...ುದ್ದಾಮ ಸಾಹಿತಿಗಳಿರುವ ಲೋಕದಲ್ಲಿ ನಾಯಕರಂಥವರೂ ಇದ್ದರೆಂಬುದು ಅವರ ಬಗ್ಗೆ ...ಭಿಮಾನ ಬೆಳೆಯಲು ಕಾರಣವಾಗುತ್ತದೆ.

ಅವರು ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಬಹುಮಾನ ವಿತರಣಾ ಸಮಾರಂಭಗಳು ...ದ್ದೂರಿಯಿಂದ ನಡೆಯುತ್ತಿರಲಿಲ್ಲ, ಆದರೆ ಅಚ್ಚುಕಟ್ಟಾಗಿ, ಆತ್ಮೀಯವಾಗಿ ನಡೆಯುತ್ತಿದ್ದುವು. ...ಮಾರಂಭಕ್ಕೆ ಮಂತ್ರಿಮಹೋದಯರನ್ನು ಬರಮಾಡಿಕೊಂಡು, ಬಹುಮಾನಿತರಿಗಿಂತ ಅವರೇ ...ೆಚ್ಚು ಗಣ್ಯರು ಎನ್ನುವ ರೀತಿಯಲ್ಲಿ ನಡೆಸಲಾಗುವ ಕಾರ್ಯಕ್ರಮಗಳಿಗಿಂತಲೂ ಭಿನ್ನವಾಗಿ ...ೋಜಿಸುವುದು ನಾಯಕರ ಸಂಪ್ರದಾಯ. ಬಹುಮಾನಗಳನ್ನು ಕೊಡುವ ಸಂದರ್ಭವನ್ನು ...ಚಾರ ಸಂಕಿರಣದ ಸಂದರ್ಭವನ್ನಾಗಿಯೂ ಮಾರ್ಪಡಿಸುತ್ತಿದ್ದವರು ಅವರು. ತುತ್ತೂರಿ ...ಂಪ್ರದಾಯಕ್ಕಿಂತಲೂ ಅವರ ಕಸ್ತೂರಿ ಸಂಪ್ರದಾಯ ಹೆಚ್ಚು ಹಿತ ಮತ್ತು ಆರೋಗ್ಯಕರ. ...ಹಾಲಿಂಗಪುರದಲ್ಲಿ ಪ್ರಗತಿ ಪಂಥದ ಎರಡನೆ ಸಮ್ಮೇಳನ ನಡೆದಾಗ ನಾಯಕರು ನಮ್ಮೊಡನೆಯೇ ಅಲ್ಲಿಯ ಒಂದು ಶಾಲೆಯಲ್ಲಿ ಇಳಿದುಕೊಂಡಿದ್ದರು; ಪ್ರತ್ಯೇಕ ಅತಿಥಿಗೃಹ ಬೇಕೆಂದು ಪಟ್ಟುಹಿಡಿಯಲಿಲ್ಲ. ವೇದಿಕೆಯನ್ನು ಏರುವ ಸನ್ನಿವೇಶ ಇರುವಾಗ ಮಾತ್ರವೇ ಗೋಷ್ಠಿಗಳಿಗೆ, ಸಮ್ಮೇಳನಗಳಿಗೆ ಹೋಗುವವರ ಒಂದು ದೊಡ್ಡ ಪಡೆ ಕನ್ನಡ ಸಾಹಿತ್ಯರಂಗದಲ್ಲಿದೆ. ಅದಕ್ಕೆ ಸೇರದೆ, ಉಪನ್ಯಾಸಗಳನ್ನು ಕೇಳುವವರ ಜೊತೆ ಕೂಡುವ ಸೌಜನ್ಯವನ್ನು ನಾಯಕರು ಬೆಳೆಸಿಕೊಂಡಿದ್ದರು.

ಡಾ|| ಹಾ. ಮಾ. ನಾಯಕ ಅವರ ಎಲ್ಲ ವಿದ್ಯಾರ್ಥಿಗಳೂ ಅವರನ್ನು ಒಂದೇ ರೀತಿಯಲ್ಲಿ ಮಾಪನ ಮಾಡಿಲ್ಲ. ಅವರಿಗೆ ಕೆಲವರು 'ಪಟ್ಟ' ಶಿಷ್ಯರಾಗುತ್ತಿದ್ದರು, ಅಂಥವರಿಗೆ ಇವರು ಹೆಚ್ಚಿನ ಅವಕಾಶ ಕಲ್ಪಿಸಿಕೊಡುತ್ತಿದ್ದರು, ಅವರ ಸಂಶೋಧನಾ ಪ್ರಬಂಧಗಳನ್ನು ಜಾಗ್ರತೆಯಾಗಿ ಅವಲೋಕನ ಮಾಡಿಕೊಡುತ್ತಿದ್ದರು, ಅವರ ಪುಸ್ತಕಗಳಿಗೆ ಬೇಗ ಮುನ್ನುಡಿಗಳನ್ನು ಬರೆದುಕೊಡುತ್ತಿದ್ದರು ಎಂದು ದೂರುವ ಅವರ ವಿದ್ಯಾರ್ಥಿಗಳು ಅನೇಕರಿದ್ದಾರೆ. ಕೆಲವು ಲೇಖಕರು ನಾಯಕರ ಮುನ್ನುಡಿಗಳಿಗಾಗಿ ವರ್ಷವಿಡೀ ಕಾದು ಬೇಸತ್ತು ಆಮೇಲೆ ಅವಿಲ್ಲದೆಯೂ ಪ್ರಕಟಿಸಿರುವುದುಂಟು. ಅದಕ್ಕೆ ನಾಯಕರ ಕೆಲಸದೊತ್ತಡವೋ ಅವಜ್ಞೆಯೋ, ಯಾವುದು ಕಾರಣವೆಂದು ಹೇಳಲಾಗುವುದಿಲ್ಲ. ಅವರ ವಿದ್ಯಾರ್ಥಿಗಳು ಅದನ್ನು ಅವಜ್ಞೆಯೆಂದು ದೂರಿದ್ದು ಅಪರೂಪ. ಆಗುವುದಿಲ್ಲವೆಂದರೂ ಹಸ್ತಪ್ರತಿಗಳನ್ನು ಅವರ ಬಳಿ ಮುನ್ನುಡಿಗಾಗಿ ಬಿಟ್ಟುಹೋಗುತ್ತಿದ್ದವರಿಗೇನೂ ಕಡಿಮೆಯಿಲ್ಲ. ವಿವಿಧ ಬರವಣಿಗೆಗಳಲ್ಲಿ ತೊಡಗಿರುತ್ತಿದ್ದ ಡಾ|| ನಾಯಕ ಅವರು ಇಂತಹ ಕೆಲವರಿಗೆ ಬೇಸರ ತಂದಿರಬಹುದು; ಆದರೆ ನಿಯತಕಾಲಿಕೆಗಳಿಗೆ ಒಪ್ಪಿದಂತೆ ಬರಹಗಳನ್ನು ತಲುಪಿಸುವುದರಲ್ಲಿ ಅವರೆಂದೂ ಸೋತವರಲ್ಲ. ಅಂಕಣವು ಒಂದು ಗಮನಾರ್ಹ ಸಾಹಿತ್ಯ ಪ್ರಕಾರವೇ ಎಂಬುದರ ಜಿಜ್ಞಾಸೆಗೆ ಕಾರಣರಾದವರು ಅವರು; ಅಂಕಣಗಳಿಗಾಗಿ ಒಂದು ಪ್ರಶಸ್ತಿ ಪಡೆದಾಗ ಇದು ಚರ್ಚಾ ವಿಷಯವಾಯಿತು. ಈಗಿನ ಇಂಟರ್‌ನೆಟ್ ಸಹಾಯದಿಂದ ಮಾಹಿತಿಯನ್ನು ಕಲೆಹಾಕುವ ಅಂಕಣವಿರುವಂತೆ ವೈಚಾರಿಕ ಅಂಕಣವೂ ಇರಬಹುದು. ಎರಡನೆ ಬಗೆಯದಕ್ಕೆ ನಾಯಕರ ಕೊಡುಗೆ ಅಪಾರ. ಅಂಕಣಗಳ ಮೂಲಕ 'ಖ್ಯಾತ ಸಾವು ಸುದ್ದಿಗಾರ'ರಾಗಿ ವಾರದಿಂದ ವಾರಕ್ಕೆ ಕಾಣಿಸಿಕೊಳ್ಳುವ ವ್ಯಕ್ತಿ ಡಾ|| ಹಾ. ಮಾ. ನಾಯಕ ಎಂದು ಲೇವಡಿ ಮಾಡಿದವರೂ ಇದ್ದಾರೆ. ಆದರೆ ಅವು ಕೇವಲ ಸುದ್ದಿರೂಪದಲ್ಲಿರುತ್ತಿರಲಿಲ್ಲವೆನ್ನುವುದು ಎಲ್ಲ ಓದುಗರಿಗೂ ತಿಳಿದಿದೆ.

ಕರ್ನಾಟಕಕ್ಕೆ ದೇವಿಪ್ರಸಾದ ಚಟ್ಟೋಪಾಧ್ಯಾಯರನ್ನು ಕರೆತಂದು ಪರಿಚಯ ಮಾಡಿಸಿಕೊಟ್ಟ ಡಾ|| ನಾಯಕರ ಖ್ಯಾತಿ ನನ್ನ ಮಟ್ಟಿಗೆ ಅವರ ಅತ್ಯಂತ ಅಮೂಲ್ಯವಾದ ಖ್ಯಾತಿ. ೧೯೭೦ರಲ್ಲಿ 'ಲೆನಿನ್ ಜನ್ಮಶತಾಬ್ದಿ' ಸಂದರ್ಭದ ವಿಚಾರಗೋಷ್ಠಿಗೆ ಅವರನ್ನು ಮೈಸೂರು ವಿಶ್ವವಿದ್ಯಾಲಯಕ್ಕೆ ಆಹ್ವಾನಿಸಿ, ಒಪ್ಪಿಸಿ, ಕರೆತಂದ ನಾಯಕರು ಆಮೇಲೆ ಹಲವು ಬಾರಿ ಅವರನ್ನು ಕರೆಸಿದರು. ಬೇರೆಲ್ಲಿಗಾದರೂ ಆದರೆ ಆಹ್ವಾನವನ್ನು ತಿರಸ್ಕರಿಸುತ್ತಿದ್ದರೇನೊ; ಆದರೆ ಹಾಮಾನಾ ಅವರ ಆಹ್ವಾನವನ್ನು ದೇವಿಪ್ರಸಾದ್ ಎಂದೂ ತಿರಸ್ಕರಿಸುತ್ತಿರಲಿಲ್ಲ. ಅವರು ಬಂದಾಗಲೆಲ್ಲಾ ನಾನು ಅವರ ಬಾಲದಂತೆ ಅವರೊಡನೆ ಮೈಸೂರಿಗೆ ಹೋಗುತ್ತಿದ್ದುದು ಅವಿಸ್ಮರಣೀಯ. ಒಮ್ಮೆ ಅವರ ಉಪನ್ಯಾಸಕ್ಕೆ ವಿಶ್ವವಿದ್ಯಾಲಯದ ತತ್ತ್ವಶಾಸ್ತ್ರ ಪ್ರಾಧ್ಯಾಪಕರು ಅಧ್ಯಕ್ಷರಾಗಿದ್ದರು. ಸಭೆಯ ನಂತರ ''ಇದನ್ನು ಕೇಳಲು ಇಷ್ಟು ಜನ ಬರಬೇಕೆ'' ಎಂದು ಅವರು ಅಸಮಾಧಾನ ಪ್ರಕಟಿಸಿದ್ದನ್ನು ಕೇಳಿಸಿಕೊಂಡ ನಾಯಕರೆಂದರು: ''ಹೌದು ಮಹಾಸ್ವಾಮಿ, ಅವರು ಜೀವನದ ತತ್ತ್ವಶಾಸ್ತ್ರ ಹೇಳುತ್ತಾರೆ, ನೀವು ಸಾವಿನ ನಂತರದ ತತ್ತ್ವಶಾಸ್ತ್ರ ಬೋಧಿಸುತ್ತೀರಿ.''

ಡಾ|| ನಾಯಕರ ರಾಜಕೀಯ ಒಲವುಗಳು ಅಷ್ಟಾಗಿ ಬಹಿರಂಗಕ್ಕೆ ಬರಲಿಲ್ಲ. ಯಾವ ರಾಜಕೀಯ ನಾಯಕನ ಆರಾಧಕರೂ ಆಗಲಿಲ್ಲವೆಂಬುದು ಅವರ ಮಹತ್ವ. ಎರಡು ಬಾರಿ ಭಾರತೀಯ ಜನತಾ ಪಕ್ಷಕ್ಕೆ ಸೇರಿಬಿಡುತ್ತಾರೆ ಎಂಬ ವದಂತಿಗಳು ಹಬ್ಬಿದ್ದವು. ಒಮ್ಮೆ ಅದ್ವಾನಿಯವರು ಬೆಂಗಳೂರಿನ ಒಂದು ಕಾರ್ಯಕ್ರಮದಲ್ಲಿ ನಾಯಕರನ್ನು ಅವರ ಪಕ್ಷಕ್ಕೆ ಸೇರಿಸಿಕೊಳ್ಳುವ ಸನ್ನಿವೇಶವಿತ್ತು. ಆದರೆ ಮೈಸೂರಿನ ಕೆಲವು ಗೆಳೆಯರು ಡಾ|| ನಾಯಕ ಅವರನ್ನು ಅದರಿಂದ ಹಿಂದಕ್ಕೆ ಸರಿಯುವಂತೆ ಮಾಡಿದ್ದುಂಟು. ಮುಕ್ತ ಮನಸ್ಸಿನ ಡಾ|| ನಾಯಕ ಅವರು ಅದ್ವಾನಿ ಪಕ್ಷದಲ್ಲಿ ಹೊಂದಿಕೊಳ್ಳುತ್ತಿದ್ದರೆಂದು ಊಹಿಸುವುದು ಕಷ್ಟ. ಕನ್ನಡಪರ ಕೆಲಸಗಳು, ಪ್ರಕಟಣೆಗಳು, ಸಂಶೋಧನೆ, ಭಾಷಾಶಾಸ್ತ್ರದ ಅಧ್ಯಾಪನ, ಆಡಳಿತಾತ್ಮಕ ಜವಾಬ್ದಾರಿಗಳು, ಹೀಗೆ ತಾವು ಕೈಗೆತ್ತಿಕೊಂಡ ಎಲ್ಲ ಕ್ಷೇತ್ರಗಳಲ್ಲೂ ಮಿಂಚಿದ ಬೆಳ್ಳಿಗೂದಲ ನಗೆಮುಖದ ಡಾ|| ಹಾಮಾನಾ ನಮ್ಮ ಸ್ಮೃತಿಯಲ್ಲಿ ಸದಾ ಚಿರಂಜೀವಿಗಳು.

- ಜಿ. ರಾಮಕೃಷ್ಣ

# ಗೊಂದಲಪುರದಿಂದ ದಿಲ್ಲಿಗೆ

ಪ್ರಿಯ ಯಜಮಾನಪ್ಪನವರೇ, ನಮಸ್ಕಾರ.

ಎರಡು ಮೂರು ತಿಂಗಳಿಂದ ಪತ್ತೆಯಿಲ್ಲವಲ್ಲ, ಎಲ್ಲಿಗೆ ಹಾಳಾಗಿ ಹೋದ ಈ ಬೀರಣ್ಣ ಎಂದು ನೀವು ಗೊಣಗುಟ್ಟಿರಬಹುದು. ನಾಪತ್ತೆಯಾಗಿದ್ದ ಅವಧಿಯಲ್ಲಿ ಎಂಥ ಸಾಹಸ ಮಾಡಹೊರಟಿದ್ದೆ ಎಂಬುದನ್ನು ಕೇಳಿದರೆ ನಿಮ್ಮ ಗೊಣಗಾಟ ಅಚ್ಚರಿಯಾಗಿ, ಸಿಟ್ಟಾಗಿ, ಕೊನೆಗೆ ನಿಮ್ಮ ಹೊಟ್ಟೆ ಹುಣ್ಣಾಗಬಹುದು !

ವೀರಪ್ಪನ್ ಬಂಧನದಿಂದ ರಾಜಕುಮಾರರನ್ನು ಬಿಡಿಸಿ ತರಲು ಗುಟ್ಟಾಗಿ ಪ್ರಯತ್ನ ನಡೆಸಿದ್ದೆ. ಹೇಳಿದರೆ ದೊಡ್ಡ ಪುರಾಣವೇ ಆಗುತ್ತದೆ. ಇದನ್ನು ಮತ್ತೆ ಯಾವಾಗಲಾದರೂ ಹೇಳುತ್ತೇನೆ.

ನಮ್ಮ ಬೋರ್ಲ್ಲಿ ಉರುಫ್ ಬೋರ್ಲಿಂಗ ಬಹಳ ವರ್ಷಗಳ ನಂತರ ಅಕಸ್ಮಾತ್ ಸಿಕ್ಕಿದ್ದ. ಹುಟ್ಟೂರು ನೆನಪಿನಿಂದ ಹಸಿಯಾಗಿ ಗೊಂದಲಪುರದ ನಮ್ಮ ತಲೆಮಾರಿನ ಗೆಳೆಯರ ಬಗ್ಗೆ ವಿಚಾರಿಸಿದ. 'ಅಕವ ಅಂಡ್ ಬೋರ್ಲ್ಲಿ ಇನ್‌ಫೋ ಟೆಕ್ನಾಲಜಿ'ಯಂಥ ಕಕವ ಅಂತರ ರಾಷ್ಟ್ರೀಯ ಮಟ್ಟದ ಕಂಪೆನಿಯ ಒಡೆಯ. ಯಾವೊಂದು ಕಷ್ಟ ಸುಖಕ್ಕೂ ಗೊಂದಲಪುರದ ನರಪಿಳ್ಳೆಯನ್ನು ಹತ್ತಿರ ಸೇರಿಸಿದವನಲ್ಲ. ಆದರೆ, ಅಕಸ್ಮಾತ್ ಸಿಕ್ಕಿದಾಗ ರಸಗುಲ್ಲಾದಂಥ ಮಾತಿನಿಂದ ಧಾರಾಳ ಉಪದೇಶ ನೀಡುವುದನ್ನು ಮರೆಯುವುದಿಲ್ಲ. ಭಾರಿ ಜಾಣ.

ನನ್ನ ಮಗ ಕಳೆದ ಮೂರು ನಾಲ್ಕು ವರ್ಷದಿಂದ ಎಮ್ಮೆ ಕಟ್ಟುತ್ತಿರುವ, ಪದ್ಯ ಗಿದ್ಯ ಗೀಚುತ್ತ ಗೊಂಟಿಕೊಪ್ಪಲಿನ ಶಾಲೆಯಲ್ಲಿ ಮೇಸ್ಟರಾಗಿರುವ ವಿಷಯ ತಿಳಿದಾಗ, ಬೋರ್ಲ್ಲಿ ಕೋಪದಿಂದ ಕೆಂಡಾಮಂಡಲವಾದ !

''ಎಮ್ಮೆ ಕಟ್ಟೋದು, ಪದ್ಯ ಗೀಚೋದು, ಮೇಷ್ಟರಾಗೋದು. ನಮ್ಮೂರಿನವರ ತಲೆ ಅದರಿಂದಾಚೆಗೆ ಓಡುವುದೇ ಇಲ್ಲವಲ್ಲ. ಏನನ್ನೋಣ ಇದಕ್ಕೆ ! ನಿಮಗೆಲ್ಲ ಯಾವಾಗ ಬುದ್ಧಿ ಬರುತ್ತೆ ಬೀರಣ್ಣ! ಪ್ರಪಂಚದಲ್ಲಿ ಆಗ್ತಾ ಇರೋ ಬದಲಾವಣೆ, ಬೆಳವಣಿಗೆ ನಿಮ್ಮ ಕಣ್ಣಿಗೆ ಬೀಳ್ತಾ ಇಲ್ವೆ? ಜುಜುಬಿ ಮೇಷ್ಟ್ರ ಕೆಲ್ಸ ಯಾಕಾಗ್ಬೇಕು? ವೈದಿಕಾಧ್ಯಯನ ಮಾಡಿ ಒಂದ್ ಡಿಗ್ರಿ ತಗೊಂಡ್ರೆ ಆಗೊಲ್ವೋ? ಈ ಡಿಗ್ರಿಗಳಿಗೆ ಫಾರಿನ್‌ನಲ್ಲಿ ಎಷ್ಟ್ ಆಪರ್ಚುನಿಟಿ ಇದೆ ಅಂತ ಗೊತ್ತೆ? ನಿನ್ ಮಗ ಕೈ ತುಂಬಾ ಡಾಲರ್ ಸಂಪಾದಿಸಿದ್ರೆ ನಿಂಗೆ ವಾಕರಿಕೆ ಬರುತ್ತಾ?''

ವೈದಿಕಾಧ್ಯಯನ, ಡಿಗ್ರಿ, ಕೈತುಂಬಾ ಡಾಲರ್ ಇದನ್ನೆಲ್ಲ ಕೇಳಿ ನಾನು ಒಂದು ಕ್ಷಣ ತತ್ತರಿಸಿಹೋದೆ.

''ಯಡವಟ್ಟನ ಥರ ಮಿಕಿಮಿಕಿ ನೋಡೋದಷ್ಟೆ ನಿಂಗೊತ್ತಿರೋದು. ಸಮಯ ಬಂದಾಗ ಬುದ್ಧಿ ಓಡಿಸ್ಬೇಕು. ಈಗಿನ್ಕಾಲದಲ್ಲಿ ರೈಟ್ ಕನೆಕ್ಷನ್, ರೆಕಮೆಂಡೇಷನ್, ಫಿಕ್ಸಿಂಗ್ - ಇಲ್ದೆನೆ ಯಾವ್ ಕೆಲ್ಸಾನೂ ಆಗೊಲ್ಲ. ನಮ್ಮೂರ್ ಜನ ಸ್ವಲ್ಪನಾದ್ರೂ ಮುಂದೆ ಬರ್‍ಲಿ ಅಂತ ನನಗೂ ಕಳಕಳಿ ಇರೊಲ್ವೆ? ಸೆಂಟರ್‌ನಲ್ಲಿ ನನಗೆ ಎಷ್ಟ್ ಇನ್‌ಫ್ಲುಯೆನ್ಸ್ ಇದೆ ಗೊತ್ತಾ? ಮೊದ್ಲು ನನ್ ಮಾತ್ಕೇಳು. ತಡ ಮಾಡಿದ್ರೆ ಯಾವ್ದೂ ದಕ್ಕೊಲ್ಲ. ವೈದಿಕ ಶಿಖಾಮಣಿ ಡಿಗ್ರಿಗೆ ಸೀಟು ಸಿಕ್ಕದೆ ಹೋಗಬಹುದು......!''

ನನ್ನ ಗಾಬರಿ ಮತ್ತಷ್ಟು ಹೆಚ್ಚಿತು. ಬೋರ್ಲ್ಲಿಗೆ ಕೇಂದ್ರದಲ್ಲಿ ಇರಬಹುದಾದ ಪ್ರಭಾವದ ಬಗೆಗೂ ಹೆಚ್ಚು ತಿಳುವಳಿಕೆ ನನಗಿರಲಿಲ್ಲ. ಅಂತು, ನನ್ನ ಮಗನಿಗೆ ಒಳ್ಳೆಯದಾಗುವಂತೆ ಈ ಬೋರ್ಲ್ಲಿ ಏನೋ ಪ್ರಯತ್ನಿಸುತ್ತಿದ್ದಾನೆ ಎನ್ನಿಸಿದ್ದು ನಿಜ.

''ಬೀರಣ್ಣಾ, ನಾನೊಂಥರಾ ಸ್ವಯಂ ಸೇವಕ ಅನ್ನು. ಅಯೋಧ್ಯೆಗೆ ಒಂದು ಲೋಡು ಭರ್ತಿ ರಾಮನ ಇಟ್ಟಿಗೆ ಕಳಿಸಿದ್ದೀನಿ ಗೊತ್ತೆ? ನಮ್ಮ ಮಾನವ ಸಂಪನ್ಮೂಲ ಮಂತ್ರಿಗಳಿದ್ದಾರಲ್ಲ ಪ್ರೊ॥ ಮುರಳಿ ಮನೋಹರ ಜೋಶಿಯವರು, ನನಗೆ ಭಾಳಾ ಭಾಳಾ ಫ್ರೆಂಡು ಕಣಯ್ಯ.....'' ಎನ್ನುತ್ತ, ಮಾನ್ಯ ಮಂತ್ರಿಗಳಿಗೆ ಒಂದು ಶಿಫಾರಸ್ಸು ಪತ್ರ ಟೈಪಿಸಿಕೊಟ್ಟ. ಅದರ ಒಂದು ಪ್ರತಿಯನ್ನು ಈಗಲೇ ಫ್ಯಾಕ್ಸ್ ಮೂಲಕ ಕಳಿಸುವುದಾಗಿ ಹೇಳಿದ. ಇದು ಈಗಿಂದೀಗ ಆಗಬೇಕಾದ ಕೆಲಸ ಎಂಬುದು ನನಗೆ ಮನದಟ್ಟಾಯಿತು.

ನನ್ನ ಮಗ ವೈದಿಕ ಶಿಖಾಮಣಿ ಡಿಗ್ರಿ ಪಡೆದು, ಅಮೆರಿಕದಲ್ಲಿ ಕೆಲಸಕ್ಕೆ ಸೇರಿ ಪ್ರತಿ ತಿಂಗಳೂ ನನಗೆ ಡಾಲರ್ ಕಳಿಸಿಕೊಡುವುದನ್ನು ಕಲ್ಪಿಸಿಕೊಂಡು ಪುಳಕಗೊಂಡೆ. ಇದು ತೀರಾ ಗುಟ್ಟಾಗಿ ಆಗಬೇಕಾಗಿದ್ದ ಕೆಲಸ. ಹಾಗಾಗಿ, ರೈಲಿನಲ್ಲಿ ಸಹ ಯಾರೊಂದಿಗೂ ಮಾತಾಡದೆ ದಿಲ್ಲಿಗೆ ದೌಡಾಯಿಸಿದೆ !

ಬೋರ್ಲ್ಲಿ ಹೇಳಿಕೊಟ್ಟ ಉಪಾಯದಂತೆ ಹಣೆಗೆ ಕುಂಕುಮ ಧರಿಸಿದೆ. ಆದರೂ ಮಾನ್ಯ ಮು.ಮ. ಜೋಶಿಯವರ ಭೇಟಿಗಾಗಿ ಮೂರು ನಾಲ್ಕು ದಿನ ಕಾಯಬೇಕಾಯಿತು. ಅಷ್ಟು ಅಕೆಡೆಮಿಕ್ ಅವರು.

ಮಂತ್ರಿಗಳು ನಮ್ಮ ಬೋರ್ಲ್ಲಿಯನ್ನು ನೆನಪು ಮಾಡಿಕೊಳ್ಳಲು ಸುಮಾರು ಒಂದು ಗಂಟೆಗೂ ಹೆಚ್ಚು ಕಾಲ ತೆಗೆದುಕೊಂಡರು. ಕೊನೆಗೆ, ಬೋರ್ಲ್ಲಿ ಒಂದು ಲೋಡು ಭರ್ತಿ ರಾಮನ ಇಟ್ಟಿಗೆ ಕಳಿಸಿಕೊಟ್ಟಿದ್ದ ವಿಷಯವನ್ನು ನಾನೇ ನೆನಪಿಸಬೇಕಾಯಿತು. ಆದರೂ, ಈ ಬೋರ್ಲ್ಲಿ ಎಂಬ ಮಹಾಶಯ ನಿಜವಾದ 'ಸ್ವಯಂ ಸೇವಕ'ನೋ ಸ್ಯೂಡೋ ಸ್ವಯಂ ಸೇವಕನೋ ಎಂಬ ಗೊಂದಲದಲ್ಲಿಯೇ ಇದ್ದಂತಿತ್ತು.

ಮಾನ್ಯ ಭೌತಶಾಸ್ತ್ರ ಪ್ರೊಫೆಸರ್ ಮಂತ್ರಿಯವರು ನನ್ನೊಂದಿಗೆ ಬಹಳ ಸ್ನೇಹದಿಂದ ಮಾತನಾಡಿದರು. ಈ ಅವಕಾಶ ಉಪಯೋಗಿಸಿಕೊಂಡು ನನ್ನ ಮಗನ ವಿಷಯ ಪ್ರಸ್ತಾಪಿಸಿದೆ. ಎತ್ತಲೋ ನೋಡುತ್ತ ನನ್ನ ಮಾತು ಕೇಳಿಸಿಕೊಳ್ಳುತ್ತಿದ್ದಾರೆ ಎನ್ನಿಸಿತು. 'ಕೆಂಪು' ಕಂಡರೆ ಉರಿದು ಬೀಳುವ ಇವರು ಹಣೆಗೆ ಈಗಲೂ ಕೆಂಪು ಕುಂಕುಮ



ಧರಿಸುತ್ತಿರುವ ಬಗ್ಗೆ ಮನಸ್ಸಿನಲ್ಲಿ ಜಿಜ್ಞಾಸೆ ನಡೆಸತೊಡಗಿದೆ.

ಮಾನ್ಯ ಮಂತ್ರಿಯವರು ನಮ್ಮ ಭವ್ಯ ಪರಂಪರೆ, ಸಂಸ್ಕೃತಿಯ ಬಗ್ಗೆ ಮಾತಿಗೆ ತೊಡಗಿದರು. ನಾವು ಜಾಣ ಮರೆಗುಳಿಗಳು, ನಮ್ಮ ಸಂಸ್ಕೃತಿಯನ್ನು ಮರೆತದ್ದೇ ನಮ್ಮೆಲ್ಲ ಕಷ್ಟ ಪರಂಪರೆಗಳಿಗೆ, ದೀರ್ಘಕಾಲದ ದಾಸ್ಯಕ್ಕೆ ಕಾರಣವೆಂದು ಪೀಠಿಕೆ ಹಾಕಿದ ಅವರು, ನನ್ನ ಹೆಸರು 'ಬೀರ'ಣ್ಣ ಎಂಬುದಕ್ಕೆ ಬದಲು 'ಸೋಮ'ಣ್ಣ ಎಂದಿದ್ದರೆ ಅದು ನಮ್ಮ ಸಂಸ್ಕೃತಿಗೆ ಹೆಚ್ಚು ಹತ್ತಿರವಾಗುತ್ತಿತ್ತು ಎಂದು ಮುಗುಳ್ನಕ್ಕರು. ''ನಿನ್ನ ಮಹಾನ್ ಅಲೆಕ್ಸಾಂಡರನಲ್ಲ ಅವನಪ್ಪನೇ ಆಗಲಿ, ಮೊಗಲರು, ಬ್ರಿಟಿಷರು, ಫ್ರೆಂಚರು - ಯಾರೇ ಬರಲಿ, ನಮ್ಮ ಸಂಸ್ಕೃತವನ್ನು, ವೇದಾಧ್ಯಯನವನ್ನು ಪಟ್ಟಾಗಿ ಹಿಡಿದುಕೊಳ್ಳಬೇಕಾಗಿತ್ತು. ನಮ್ಮ ವೇದಗಳಲ್ಲಿ ಇಲ್ಲದ್ದು ಯಾವುದಿದೆ ಬೀರಣ್ಣ? ಪುಷ್ಪಕ ವಿಮಾನ, ಟೆಲಿಫೋನು, ದೂರದರ್ಶನ, ಕಂಪ್ಯೂಟರ್ - ಎಲ್ಲ ಆಗಲೇ ಇತ್ತಲ್ಲಯ್ಯ! ಪಾಶ್ಚಾತ್ಯ ಪ್ರಭಾವದಿಂದ ನಮ್ಮ ಸನಾತನ ಸಂಸ್ಕೃತಿಯ ಬಗ್ಗೆ ಅಸಡ್ಡೆ ತೋರಿದ್ದರಿಂದಲೇ ನಮ್ಮ ಶೌರ್ಯ ಕುಂದಲು ಕಾರಣವಾಗಿ ನಾವು ನೂರಾರು ವರ್ಷ ದಾಸ್ಯದಲ್ಲಿ ನರಳುವಂತಾಯಿತು. ಜೊತೆಗೆ ಬ್ರಿಟಿಷರು ಬರೆದ ಇತಿಹಾಸವನ್ನು ನಂಬುವ ಮೂರ್ಖತನ ಬೇರೆ. ಅದಕ್ಕೇ, ನಮ್ಮ ಇತಿಹಾಸವನ್ನು ಹೊಸರೀತಿಯಲ್ಲಿ ಬರೆಯುವ ವಿದ್ವಾಂಸರ ಹಿಂಡೇ ತಯಾರಾಗಿದೆ........''

ಮಾನ್ಯ ಮಂತ್ರಿಗಳ ಮಾತಿಗೆ ಎಂತೆಂಥ ವಿಜ್ಞಾನಿಗಳೇ ತೆಪ್ಪಗೆ ತಲೆಯಾಡಿಸುತ್ತಾರೆಂದು ಕೇಳಿದ್ದೆ. ಇನ್ನು ನನ್ನಂಥವನ ಪಾಡೇನು? ಅವರ ಮಾತಿಗೆ ಕೃತಕ ವಿನಯದಿಂದ ತಲೆದೂಗುತ್ತ ನಾನು ಬಂದ ಉದ್ದೇಶವನ್ನು ಅವರಿಗೆ ನೆನಪಿಸಲು ಪ್ರಯತ್ನಿಸಿದೆ.

ಮಂತ್ರಿಗಳು ಬೋರ್ಲ್ಲಿಯ ಶಿಫಾರಸ್ಸು ಪತ್ರದ ಮೇಲೆ ಮತ್ತೊಮ್ಮೆ ಕಣ್ಣಾಡಿಸಿದರು. ''ನಮ್ಮ ಭಾರತೀಯ ಯುವಕರು ವೇದ, ವೈದಿಕ ಶಾಸ್ತ್ರಗಳ ಅಧ್ಯಯನ ಮಾಡಬೇಕು. ಅಮೆರಿಕದಂಥ ಡಾಲರ್‌ಲ್ಯಾಂಡಿಗೆ ಹೋಗಿ ಅಲ್ಲಿನವರ ತಿಥಿ, ಪೂಜೆ, ಮದುವೆ- ಮುಂಜಿಗಳಲ್ಲಿ ಪುರೋಹಿತರಾಗಿ, ಅಲ್ಲಿನ ನೂರಾರು ಶ್ರೀಮಂತ ದೇವಾಲಯಗಳಲ್ಲಿ ಪೂಜಾರಿಗಳಾಗಿ ಸಾಕಷ್ಟು ಡಾಲರ್

*(೫೫ ನೇ ಪುಟದಲ್ಲಿ ಮುಂದುವರೆದಿದೆ)*

**ಪ್ರಕಾಶ್ ಶೆಟ್ಟಿ**



ಅದ್ವಾನಿಯವರು ನಮ್ಮ ಹಿಂಬಾಲಕರ ಪಟ್ಟಿಯಲ್ಲಿದ್ದಾರೆಯೆ ?.....







ಸ್ವಧಾ ನಮಸ್ತರ್ಪಯಾಮಿ




*(೫೪ನೇ ಪುಟದಿಂದ)*

ಸಂಪಾದಿಸಬಹುದು. ಆದರಿಂದ ಸರಕಾರಕ್ಕೆ ಫಾರಿನ್ ಎಕ್ಸ್‌ಚೇಂಜ್ ಲಭಿಸುತ್ತದೆ ಎಂಬ ಐಡಿಯಾ ಇರುವುದೇನೋ ನಿಜ. ಫಲಜ್ಯೋತಿಷಿಗಳು, ವಾರ, ಮಾಸ ಭವಿಷ್ಯಕಾರರು, ಹಸ್ತಸಾಮುದ್ರಿಕರು, ಕಣಿ ಹೇಳುವವರು, ನಾಡಿಶಾಸ್ತ್ರ, ಕವಡೆಶಾಸ್ತ್ರ, ಗಿಳಿಶಾಸ್ತ್ರದವರು, ಜಲಶಿಲ್ಪ ಹಲ್ಲೀಶಕುನದವರು - ಈ ವಿಷಯಗಳಲ್ಲಿ ನಮ್ಮ ಭವ್ಯ ಭಾರತದ ಮಾನವ ಸಂಪನ್ಮೂಲ ಎಷ್ಟಿದೆಯೆಂದರೆ ಬಿಲ್‌ಗೇಟ್ಸ್‌ನ ಕಂಪ್ಯೂಟರಿಗೆ ಸಹ ಅದನ್ನು ಅಂದಾಜು ಮಾಡಲು ಸಾಧ್ಯವಾಗಲಾರದು. ಆದರೆ ಬೀರಣ್ಣ....'' ಮಂತ್ರಿಗಳು ಒಂದು ಬಗೆಯ ಪೂರ್ವಾಗ್ರಹ ಸಂಶಯದಿಂದ ನನ್ನತ್ತ ನೋಡಿದರು. ''ನಿನ್ನ ಮಗ ಸಂಸ್ಕೃತ ಕಲಿತಿದ್ದಾನ್ಯೆ?'' ಎಂದರು.

ಆಗ ನಾನು ''ಇಲ್ವಲ್ಲ ಗುರುಗಳೇ, ನಮ್ಮೂರ್‍ನಲ್ಲಿ ರೋದು ಬರೀ ಕನ್ನಡ ಸ್ಕೂಲು'' ಎನ್ನಬೇಕಾಯಿತು.

ಅವರು ನಿರಾಶೆಯಿಂದ ತಲೆಯಾಡಿಸುತ್ತ ''ಹಮ್ ಕುಛ್ ನಹಿ ಕರ್‌ಸಕ್ತಾ..... ನಮ್ಮ ದೇಶದಲ್ಲಿ ತಪ್ಪು ತಪ್ಪಾಗಿ ಸಂಸ್ಕೃತ ಶ್ಲೋಕ ಹೇಳಿದ್ರೂ ನಡಿಯುತ್ತೆ. ಆದರೆ ಅಮೆರಿಕದವರು ಬಹಳ ಇಂಟಲಿಜೆಂಟ್ಸು, ಕಂಪ್ಯೂಟರ್ ಮಿದುಳು ಅವರದು. ಮಂತ್ರ ಸರಿಯಾಗಿ ಹೇಳದಿದ್ದರೆ, ತಪ್ಪಾಗಿ ಉಚ್ಚರಿಸಿದರೆ ಅಲ್ಲಿಂದ ಓಡಿಸಿಬಿಡುತ್ತಾರೆ. ಕೆಲವು ನಾಲಿಗೆಗಳಿಗೆ ಸಂಸ್ಕೃತ ಒಗ್ಗೋದಿಲ್ಲ ಬೀರಣ್ಣ. ನಿನ್ನ ಮಗನ್ನ ಸಂಸ್ಕೃತ ಸ್ಕೂಲಿಗೆ ಸೇರಿಸಬೇಕಾಗಿತ್ತು. ಬೆಂಕಿ ಬಿದ್ದಾಗ ಬಾವಿ ತೋಡಿದರು ಅನ್ನೋ ಗಾದೆ ಕನ್ನಡದಲ್ಲಿಯೇ ಇದೆಯಲ್ಲ. ಆಪ್ ಜಾಸಕ್ತ ಹೈ.......''

ಲೋ ಶೂದ್ರಾ.... ನಿನ್ನ ನಾಲಿಗೆಯಲ್ಲಿ ಸಂಸ್ಕೃತ ನುಸುಳೊಲ್ಲ ಎಂಬ ಹಿಡೆನ್ ಅಜೆಂಡಾ ನನ್ನ ತಲೆಯಲ್ಲಿ ಮಿಂಚಿದಂತಾಯಿತು. ಹೋದ ದಾರಿಗೆ ಸುಂಕವಿಲ್ಲ. ನನ್ನ ಮಗನಿಗೆ ಅಮೆರಿಕದವರ ತಿಥಿ ಮಾಡಿಸುವ ಛಾನ್ಸ್ ಹಣೆಯಲ್ಲಿ ಬರೆದಿರಲಿಲ್ಲ. ಬೋರ್‍ಲಿಯ ಪುಕ್ಕಟೆ ಸಲಹೆ ಕೇಳಿ ನನ್ನ ಮಗನನ್ನೂ ವೈದಿಕ ಶಿಖಾಮಣಿ ಮಾಡಹೊರಟದ್ದು ಈ ಶತಮಾನದ ಮೂರ್ಖತನವಲ್ಲದೆ ಬೇರೇನು ಹೇಳಿ !

ಯಜಮಾನಪ್ಪನವರೇ, ಸಂಸ್ಕೃತ ಉಲಿಯಲು ನಾಲಿಗೆ ಸುಲಭವಾಗಿ ಹೊರಳುವಂತೆ ಮಾಡುವ ಯಾವುದಾದರೂ ದಿವ್ಯೌಷಧವಿದ್ದರೆ ಶಿಫಾರಸ್ಸು ಮಾಡುವಿರಾ?

*- ಬೀರಣ್ಣ, ಗೊಂದಲಪುರ*

# ಕಡಲಲ್ಲಿ ನೆಲದ ನೆನಪು

ರಹಮತ್ ತರೀಕೆರೆ

ಬ್ರಿಟಿಷರು ತಮ್ಮ ವಸತಿ ಪ್ರದೇಶವನ್ನಾಗಿಸಿಕೊಂಡಿದ್ದ ರಾಸ್ ದ್ವೀಪಕ್ಕೆ ಒಮ್ಮೆ ನಾವು ಹೋದೆವು. ಈ ದ್ವೀಪವು ಪೋರ್ಟ್ ಬ್ಲೇರಿಗೆ ಮಗ್ಗುಲಿಗೇ ಇದೆ. ರಾಸನ್ನು ಸುತ್ತಾಡಿ ಅಲ್ಲಿನ ಬ್ರಿಟಿಷ್ ನಗರದ ಅವಶೇಷವನ್ನು ಕಂಡು, ಮರಳಿ ಬ್ಲೇರ್ ಬಂದರಿಗೆ ಬರಬೇಕೆಂದು ದೋಣಿಗೆ ಕಾಯತೊಡಗಿದೆವು. ಯಾಕೋ ಏನೋ ನಮ್ಮನ್ನು ಕರೆತಂದಿದ್ದ ದೋಣಿ ಬರಲೇ ಇಲ್ಲ. ಕಣ್ಣೆದುರೇ ಬ್ಲೇರ್ ಪಟ್ಟಣ, ಅದರ ರಸ್ತೆ, ಜನ, ವಾಹನ ಎಲ್ಲ ಕಾಣುತ್ತಿವೆ. ಆದರೆ ಹೋಗುವಂತಿಲ್ಲ. ವಿಚಿತ್ರ ಚಡಪಡಿಕೆ. ನಡುಗಡ್ಡೆಯಲ್ಲಿ ಸಿಕ್ಕಿಹಾಕಿಕೊಳ್ಳುವ ಕಷ್ಟ ಎಂಥದು ಎಂದು ಅನುಭವವಾಗತೊಡಗಿತು. ಬಸ್ಸು ಬರಲಿಲ್ಲವೆಂದರೆ ಸಣ್ಣ ಪುಟ್ಟ ದೂರವನ್ನು ನಡೆದಾದರೂ ಹೋಗುವೆ ಎಂಬ ಭರವಸೆ ನೆಲದ ಮೇಲಿದ್ದಾಗ ಇರುತ್ತದೆ. ಅದರಲ್ಲೂ ಮನೆ ಬೇಡವಾದಾಗ, ಕೇರಿ ಊರು ಅಪಮಾನಿಸಿದಾಗ, ದೂರ ಹೋಗಬೇಕೆಂದರೆ ಎಷ್ಟೊಂದು ವಿಶಾಲಲೋಕ ನೆಲದ ಮೇಲಿದೆ. ಈ ಕಾರಣಕ್ಕೆ ಭಾರತದ ರೈಲುಗಳ ಪಾತ್ರ ಅದ್ಭುತ. ಮಕ್ಕಳಿಂದ ನೊಂದ ಮುಪ್ಪಿನವರನ್ನು, ಹಿರಿಯರಿಂದ ಹಂಗಿಸಿಕೊಂಡು ಅಭಿಮಾನ ಮುರಿದ ಸೊಕ್ಕಿನ ತರುಣರನ್ನು, ಕೂಲಿಗಾಗಿ ಗುಳೆಹೋಗುವ ಕುಟುಂಬಗಳನ್ನು, ಹಿರಿಯ ರೊಪ್ಪದ ಪ್ರೇಮಿಗಳನ್ನು ದೂರದ ಪಟ್ಟಣಗಳಿಗೆ ಅವು ಶತಮಾನಗಳಿಂದ ಕರೆದೊಯ್ಯುತ್ತಲೇ ಇವೆ. ಇಲ್ಲೋ ನೀರು ಮುಂದೆ ಹೆಜ್ಜೆ ಸಾಗದಂತೆ ತಡೆದು ಕೂರಿಸಿ, ತಮಾಷೆ ನೋಡುತ್ತ ಕುಣಿಯುತ್ತಿದೆ. ರಾಸ್ ಮಾತ್ರವಲ್ಲ, ಅಂಡಮಾನಿನಲ್ಲಿದ್ದಾಗ ನಾವು ಎತ್ತ ಹೋದರೂ 'ನಿಲ್ಲು ನಾನಿದ್ದೇನೆ' ಎಂದು ಗದರಿಸಿ ನಿಲ್ಲಿಸುವ ಕಡಲು ಧುತ್ತನೆ ಎದುರಾಗುತ್ತದೆ. ನೆಲಕ್ಕೆ ನೀರಬೇಲಿ ಕಟ್ಟಿದಂತೆ ತಡೆಯುತ್ತದೆ. ನಮಗೂ ಅಂಡಮಾನಿನಲ್ಲಿ ಕೊನೆಕೊನೆಗೆ ಊರುಮನೆ ತೀವ್ರವಾಗಿ ನೆನಪಾಗುತ್ತಿದ್ದವು. ಇದಕ್ಕೆ ಕಾರಣ ನಾವು ಊರಿಂದ ೨೦೦೦ ಮೈಲಿ ದೂರದಲ್ಲಿ ಇದ್ದೇವೆ ಎಂಬುದಲ್ಲ. ನಾವು ಬಂದು ಬಹಳ ದಿನವಾದವು ಎಂಬುದೂ ಅಲ್ಲ. 'ದಾಟು ನೋಡೋಣ' ಎಂಬಂತೆ ನಡುವೆ ಹಬ್ಬಿ ಹರಡಿ ಸವಾಲೆಸೆದಿರುವ ಕಡಲು. ದ್ವೀಪಗಳಿಗೆ ನಿಜವಾಗಿಯೂ ಚೈತನ್ಯವನ್ನು ಬಂಧಿಸುವ ವಿಚಿತ್ರ ಶಕ್ತಿಯಿದ್ದಂತಿದೆ. ಈ ಕಾರಣಕ್ಕೆ ಅವು ಅನೇಕ ಸಲ ನನಗೆ ಅಮಾನುಷವಾಗಿ ಕಂಡಿವೆ.

ಈ ಅಮಾನುಷತೆಯ ಅನುಭವ ಮೊದಲ ಸಲ ನನಗಾಗಿದ್ದು, ಮಲ್ಪೆಯ ಬಳಿ ಇರುವ ಸೇಂಟ್ ಮೇರಿ ನಡುಗಡ್ಡೆಗೆ ಹೋದಾಗ. ಮನುಷ್ಯರಿಲ್ಲದ ನೀರವತೆ, ಕುಡಿಯಲು ಹನಿ ನೀರಿಲ್ಲದಿರುವುದು, ಚಲಿಸಲು ಎಡೆಯಿಲ್ಲದಿರುವುದು ಇವೆಲ್ಲ ಸೇಂಟ್ ಮೇರಿ ದ್ವೀಪದ ಎಲ್ಲಾ ಸ್ವರ್ಗೀಯ ಚೆಲುವನ್ನು ನುಂಗಿ ನೊಣೆದುಬಿಡುತ್ತವೆ. ಕುಡಿವ ನೀರಿಲ್ಲದಿದ್ದರೆ ಅಲ್ಲಿ ಜೀವನ ಇರಲು ಸಾಧ್ಯವೇ ಇಲ್ಲ. ಈ ಅರ್ಥದಲ್ಲಿ ಇವಕ್ಕೂ ಮರಳುಗಾಡಿಗೂ ವ್ಯತ್ಯಾಸವೇ ಇಲ್ಲ. ಬಹುಶಃ ದಿಗ್ಬಂಧನ ಮಾಡುವ ದ್ವೀಪಗಳ ಗುಣವು, ಚಲಿಸುವ ಬದುಕು ತಟ್ಟನೆ ಕಂಡ ಕೊನೆಯಂತೆ ಭಾಸವಾಗಿ, ಆಳದಲ್ಲಿ ಸಾವಿನ ಭಯ ಸುಳಿಯುವಂತೆ ಮಾಡುತ್ತದೆಯೇ? ಅಥವಾ ಮೇನ್ 'ಲ್ಯಾಂಡಿ'ನ ಬಯಲಿಂದ ಬಂದ ನನ್ನಂತಹವರಿಗೆ ಹೀಗನಿಸುತ್ತಿದೆಯೇ ? ಯಾಕೆಂದರೆ ಸಾವಿರಾರು ವರುಷಗಳಿಂದ ಒಂದು ಪುಟ್ಟ ದ್ವೀಪದಲ್ಲೇ ಬದುಕುವ ಸೆಂಟಿನಲೀನರಿಗೆ ಹೀಗೆ ಅನಿಸಲು ಸಾಧ್ಯವಿಲ್ಲ. ಹಡಗೊಡೆದು ನೆಲೆತಪ್ಪಿದವರಿಗೆ ಈ ದ್ವೀಪಗಳೇ ನೆಲೆಮನೆ ತಾನೆ ? ನಾವಿಕರ ಸಾಹಸಕತೆಗಳನ್ನು ಓದಿದರೆ ದ್ವೀಪಗಳು ಎಷ್ಟೋ ಸಾಯುವವರಿಗೆ ಜೀವದಾನ ಗೈದಿರುವುದು ತಿಳಿಯುತ್ತದೆ. ಆದರೆ ಇದೇ ನಾವಿಕರು ಕೆಲವು ದಿನವಾದ ಮೇಲೆ, ನೆಲೆಕೊಟ್ಟ ಇವೇ ದ್ವೀಪಗಳಿಂದ ಬಿಡಿಸಿಕೊಂಡು ತಾಯ್ನಾಡಿಗೆ ಹೋಗಲು ಮಾಡುವ ಚಡಪಡಗಳ ವರ್ಣನೆ ಕೂಡ ಇದೆ. ನಾನು ಸಣ್ಣವನಾಗಿದ್ದಾಗ ಓದಿದ 'ಹವಳದ್ವೀಪ' ಎಂಬ ಮಕ್ಕಳ ಸಾಹಸ ಪುಸ್ತಕದ ಮಕ್ಕಳು ಇಂತಹವರು. ಅರೆಬಿಯನ್ ನೈಟ್ಸ್ ಕತೆಗಳ ಸಿಂದಾಬಾದ್ ಕೂಡ ಇಂತಹವನು.



*ಅಂಡಮಾನಿನಿಂದ ಬರುವಾಗ ಹಾದಿಯಲ್ಲಿ ಕಂಡ ಒಂದು ದ್ವೀಪ*

ಜನಜಂಗುಳಿಯ ನಗರಗಳನ್ನು ತೊರೆದು ನೆಮ್ಮದಿಯನ್ನು ಅರಸಿ ಮಧ್ಯಮವರ್ಗದ ಜನ ದ್ವೀಪಗಳಿಗೆ ಓಡೋಡಿ ಬರುತ್ತಾರೆ. ದ್ವೀಪಗಳ ಟೂರಿಸಂ ಪ್ರಚಾರವೂ ಕೂಡ ನಗರದ ಈ ಜನಜಂಗುಳಿಯನ್ನು ನರಕಭೀಕರವಾಗಿ ಬಣ್ಣಿಸಿ, ಸ್ವರ್ಗಶಾಂತಿ ಬೇಕಾದರೆ ದ್ವೀಪಗಳಿಗೆ ಬನ್ನಿ ಎಂದು ಕರೆಗೊಡುತ್ತದೆ. ದ್ವೀಪಗಳಿಗೆ ಏಕಾಂತವನ್ನೂ ಶಾಂತಿಯನ್ನೂ ಒದಗಿಸುವ ಶಕ್ತಿ ಇರುವುದು ಸುಳ್ಳೇನಲ್ಲ. ಜತೆಗೆ ಅವಕ್ಕೆ ನೆಮ್ಮದಿಯನ್ನು ಕಸಿದುಕೊಳ್ಳುವ ಗುಣವೂ ಇದೆ. ಒಮ್ಮೆ ಹೊರಬರಲು ಸಾಧ್ಯವಿಲ್ಲದಂತೆ ಸಿಲುಕಿ ಚಡಪಡ ಅನುಭವಿಸಿದಾಗಲೇ ಇದು ಅರಿವಾಗುವುದು. ಮನಸ್ಸು ಬಂದಾಗ ಹೊರಹೋಗುವಂತಿಲ್ಲ ಎಂಬ ಗಾಢ ವಾಸ್ತವಕ್ಕೆ ಢಿಕ್ಕಿ ಹೊಡೆದೊಡನೆ ಸೆಳೆದು ತಂದ ದ್ವೀಪಗಳೇ ಉಸಿರು ಕಟ್ಟಿಸತೊಡಗುತ್ತವೆ. ಹಡಗು ಬಾರದೆ ವಾರಕಾಲ ಹ್ಯಾವಲಾಕ್ ದ್ವೀಪದಲ್ಲಿ ಸಿಕ್ಕಿಹಾಕಿಕೊಂಡು ಬಸವಳಿದು ಬಂದಿದ್ದ ಜರ್ಮನಿಯ ಪ್ರೋಕರನ ಪಾಡು ನೆನಪಿಗೆ ಬಂದಿತು. ಜೈಲುಗಳನ್ನು ದ್ವೀಪಗಳಲ್ಲಿ ಕಟ್ಟುವುದು ಕೈದಿಗಳು ತಪ್ಪಿಸಿಕೊಂಡು ಸುಲಭವಾಗಿ ಹೋಗದಿರಲಿ ಎಂಬುದು ತೋರಿಕೆಯ ಕಾರಣ. ನಿಜವಾದ ಕಾರಣ - ಈ ಜೈಲುಗಳು ಮನುಷ್ಯರನ್ನು, ಅದರಲ್ಲೂ ಜನರ ನಡುವೆ ಬೆಳೆದ ಮನುಷ್ಯರನ್ನು, ಅವರ ಜೀವಂತಿಕೆಗೆ ಕಾರಣವಾದ ಜನಸಮುದಾಯ ಸಮಾಜ ದೇಶಗಳಿಂದ ಕತ್ತರಿಸಿ ದೂರ ಇಟ್ಟು, ಅವರ ಚೈತನ್ಯವನ್ನು ಹಿಂಡುತ್ತವೆ ಎಂಬುದು ಇರಬೇಕು. ಹೀಗಾಗಿ ಸ್ವತಃ ದ್ವೀಪಗಳಲ್ಲಿ ಜೈಲುಕಟ್ಟುವುದು ಸಾಂಕೇತಿಕವಾಗಿದೆ. ನೆಪೋಲಿಯನ್‌ಗೆ ಅವನ ದೇಶದವರು ವಿಧಿಸಿದ ಶಿಕ್ಷೆಯೆಂದರೆ ಹೊರಗೆ ಬರಲಾರದ ದ್ವೀಪದಲ್ಲಿ ಇಟ್ಟಿದ್ದು. ಯಾರೂ ಜೈಲಿನಲ್ಲಿ ಇಟ್ಟಿಲ್ಲವಾದರೂ ನಮ್ಮನ್ನು ಸೆಳೆದು ತಂದ ರಾಸ್ ದ್ವೀಪವೇ ಸೆಲ್ಯುಲಾರ್ ಜೈಲಾದಂತೆ ಅನಿಸತೊಡಗಿತು. ಪಂಜರದಲ್ಲಿ ಇಟ್ಟಿರದಿದ್ದರೂ ಅಕ್ಷರಶಃ ಬಂಧನದಲ್ಲಿರುವ ರಾಸ್ ದ್ವೀಪದಲ್ಲಿದ್ದ ಜಿಂಕೆಗಳು ಕಣ್ಣೆದುರು ಬಂದವು.

ಮದರಾಸಿನಿಂದ ಬರುವಾಗ ಹಡಗು ಹತ್ತಲು ನೂಕು ನುಗ್ಗಲು ಮಾಡುವ ಜನರನ್ನು ಕಂಡು ದ್ವೀಪಗಳು ಹೇಗೆ ಮೇನ್‌ಲ್ಯಾಂಡಿನ ಜನರಿಗೆ ಆಕರ್ಷಿಸುತ್ತಿವೆಯಲ್ಲಾ ಎಂದು ಸೋಜಿಗವಾಗಿತ್ತು. ಆದರೆ ಅಂಡಮಾನಿನಲ್ಲಿ ಮೇನ್‌ಲ್ಯಾಂಡಿಗೆ ತೆರಳುವವರ ನೂಕುನುಗ್ಗಲು ಚಿತ್ರಗಳೂ ಹೀಗೇ ಇದ್ದವು. ಮೇನ್‌ಲ್ಯಾಂಡಿಗೆ ಹೋಗುವ ಹಡಗನ್ನು ಜನ ದೇವದೂತರಿಗೆ ಕಾಯುವಂತೆ ಕಾಯುತ್ತಾರೆ. ವಿಶಾಖಪಟ್ಟಣಕ್ಕೆ ಹೊರಟಿದ್ದ ನಮ್ಮ 'ಹರ್ಷವರ್ಧನ' ಹಡಗನ್ನು ಹತ್ತಲು ಒದ್ದಾಡುತ್ತಿದ್ದ ಒಬ್ಬ ತೆಲುಗು ಹೆಂಗಸು ಇದನ್ನು ಕಾಣಿಸಿದಳು. ಅವಳ ಕಂಕುಳಲ್ಲಿ ಅವಸರಕ್ಕೆ ಸುತ್ತಿಕೊಂಡ ಒಂದು ಬಟ್ಟೆಯ ಗಂಟು ಇತ್ತು. ಅವಳಲ್ಲಿ ಟಿಕೇಟಿರಲಿಲ್ಲ. ಟಿಕೇಟಿಲ್ಲದೆ ಹತ್ತುವವರ ಪರಂಪರೆ ಬಹಳ ಹಳೆಯದಿರಬೇಕು. ಗೇಟಿನಲ್ಲಿ ಬಂದರಿನ ಪೊಲೀಸರು ಕಟ್ಟುನಿಟ್ಟಾಗಿ ತಪಾಸಣೆ ಮಾಡಿ ಜನರನ್ನು ಒಳಗೆ ಬಿಡುತ್ತಿದ್ದರು. ಆ ಹೆಂಗಸು ಪೊಲೀಸರ ಕಾಲು ಕಾಲಿಗೆ ಬೀಳುತ್ತಾ, 'ತನ್ನನ್ನು ಹಡಗು ಹತ್ತಲು ಬಿಡಿ' ಎಂದು ಕೊನೆತನಕ ಅಂಗಲಾಚುತ್ತಿದ್ದಳು. ನಡುನಡುವೆ ಹಿಂದಕ್ಕೆ ತಿರುತಿರುಗಿ ತನ್ನನ್ನು ಎಳೆದೊಯ್ಯಲು ಬರುವ ಯಾರನ್ನೋ ಗಾಬರಿಯಿಂದ ನೋಡುತ್ತಿದ್ದಳು (ಅಥವಾ ಇದು ನನ್ನ ಭ್ರಮೆಯೂ ಇರಬೇಕು). ಅವಳು ಯಾಕಾದರೂ ಅಂಡಮಾನನ್ನು ಬಿಟ್ಟು ಬರಲು ಯತ್ನಿಸುತ್ತಿದ್ದಾಳೆ ? ಗಂಡನಿಂದ ತಪ್ಪಿಸಿಕೊಳ್ಳಲೇ ? ಮೇನ್‌ಲ್ಯಾಂಡಿನಲ್ಲಿರುವ ತನ್ನ ಬಂಧುಗಳ ನೆನಪಿನಿಂದಲೇ ? ತಿಳಿಯದು. ಪೊಲೀಸರು ಮಾತ್ರ ಕಸ ಎಳೆದುಹಾಕುವಂತೆ ಅವಳನ್ನು ಎಳೆದೆಳೆದು ಹಾಕುತ್ತಿದ್ದರು. ಅವರಿಗಿದು ಮಾಮೂಲಿ ಕೆಲಸವಾದಂತಿತ್ತು. ಕೊನೆಗೂ ಅವಳನ್ನು ಅವರು ತಡೆಯುವಲ್ಲಿ ಯಶಸ್ವಿಯಾದರು.

**ಕಡಲು ಹುಟ್ಟಿಸುವ ಭಯ**

ಕಡಲ ಮೇಲೆ ಇದ್ದಾಗ ನನಗೆ ಸಂತೋಷದ ಜತೆಜತೆಯಲ್ಲೇ, ಭಯ ಮತ್ತು ಏಕತಾನತೆ ಕಾಡುತ್ತದೆ. ಕಡಲಾಗಲಿ, ಮರಳುಗಾಡಾಗಲಿ, ಹಸಿರು ಚೆಲ್ಲುವ

ರಣ್ಯವಾಗಲೀ, ತಾವೊಂದೇ ವಿಜೃಂಭಿಸುವಾಗ ಏಕತಾನ ನಿಸುತ್ತವೆ. ಅವಕ್ಕೆ ಹೋಲಿಸುವ ಮತ್ತೊಂದು ಸಂಗತಿ ತೆಯಲ್ಲಿ ಇದ್ದಾಗ ಸುಂದರವಾಗಿ ಕಾಣುತ್ತವೆ. ಎಂತಲೇ ನಗೆ ಯಾವತ್ತೂ ದಂಡೆಮೇಲೆ ನಿಂತಾಗ ಕಡಲು ಹೆಚ್ಚು ತ್ಮೀಯವಾಗಿ ಕಂಡಿದೆ. ದಂಡೆಯ ಮೇಲಿದ್ದಾಗ ಲೆಗಳಿಂದ ಅಪ್ಪಳಿಸಿಕೊಂಡರೂ ಅಪ್ಪಿಕೊಳ್ಳುವ ರಳದಂಡೆ, ದಂಡೆಯ ಮೇಲೆ ವಿಹಾರ ಮಾಡುವ ಜೀವ ಂತು, ಬೀಡುಬಿಟ್ಟ ಜನವಸತಿ, ದಂಡೆಯ ಉದ್ದಕ್ಕೂ ಬೆಳೆದ ಡ ಮರ ಬಳ್ಳಿ, ಕೆಲವೊಮ್ಮೆ ಎತ್ತರದ ಬೆಟ್ಟ - ಇವೆಲ್ಲ ಕೂಡಿ, ಲೆಗಳ ಜಡತೆಯನ್ನು ಮುರಿದು, ಕಡಲಿಗೊಂದು ಲನಶೀಲತೆಯನ್ನು ಹೊಸತನವನ್ನು ನೀಡುತ್ತವೆ. ಯಾರಿಗೆ ೊತ್ತು - ಇದೆಲ್ಲ ಮೇಲುನೋಟದ ತರ್ಕವಿರಬಹುದು; ುನಿದಾಗ ಜೀವ ತೆಗೆಯಬಲ್ಲ ಕಡಲ ಕಾಠಿಣ್ಯದಿಂದ ಪ್ಪಿಸಿಕೊಳ್ಳಬಲ್ಲ ಸುರಕ್ಷಿತ ದೂರದಲ್ಲಿ, ಭದ್ರವಾದ ನೆಲದ ಮೇಲೆ ಇದ್ದೇವೆ ಎಂಬ ನೆಮ್ಮದಿಯಿಂದಲೇ, ದಂಡೆಯ ಮೇಲಿನ ಕಡಲ ಚೆಲುವು ಮೋಹವೆನಿಸುತ್ತಿರಬಹುದು. ಜವಾಗಿಯೂ ಕಡಲಿಗೆ ಅದರ ಮೇಲಿರುವಾಗ ಅಭದ್ರತೆ ುಟ್ಟಿಸುವ ಗುಣವಿದೆ. ಕ್ರೂರ ಪ್ರಾಣಿಗಳು ಇವೆಯೆನ್ನುವ ಾಡಿನಲ್ಲಿ ತಿರುಗಾಡುವಾಗ ಬಾರದ, ಹರಿವ ದಿಯಲ್ಲಿದ್ದಾಗಲೂ ಬಾರದ ಭಯವದು. ನದಿಯಲ್ಲಿ ದ್ದರೆ ದಂಡೆಯಾದರೂ ಸೇರುವೆ ಎಂಬ ಆಸೆಯಿರುತ್ತದೆ ; ಂಡೆ ಕಾಣುವುದೇ ಜೀವಕ್ಕೆ ಭರವಸೆ. ನಡುಗಡಲೋ ಂಡೆಕಾಣದ ಜಲರಾಶಿ. ಎಂತಲೇ ಕಡಲಿನಲ್ಲಿರುವಾಗ ಡಗಿನಲ್ಲಿ ಭೂಮಿಚಿಹ್ನೆ ಕಂಡರೆ ಬದುಕಿನ ಕುರುಹು ಂಡಂತೆ ನೆಮ್ಮದಿ ಬರುತ್ತದೆ.

ಸಮುದ್ರ ಹೇಗೆ ತನ್ನ ಸಾವಿನ ಬಾಯೊಳಗೆ ುನುಷ್ಯರನ್ನು ತುತ್ತು ಮಾಡಿ ನುಂಗುವ ಅನುಭವವನ್ನು ೂಡಬಲ್ಲುದು ಎಂಬುದನ್ನು ತಿಳಿಯಲು ದೊಡ್ಡ ದೊಡ್ಡ ಾವಿಕರ ಕತೆಗಳನ್ನೇ ಓದಬೇಕಿಲ್ಲ. ಸಣ್ಣ ಪುಟ್ಟ ದೂರಗಳನ್ನು ್ರಮಿಸಿದ ಪಯಣಿಕರ ಅನುಭವಗಳೂ ಸಾಕು. ಉದಾ: ಾನು ತುಂಬ ಇಷ್ಟಪಡುವ ಕಾಕಾ ಕಾಲೇಲ್ಕರ್ ಅವರ ಪುಸ್ತಕ ಜೀವನ ಲೀಲೆ'ಯಲ್ಲಿ ಬರುವ ಸಮುದ್ರ ಪಯಣದ ಒಂದು ನುಭವದಲ್ಲಿ ಇದಿದೆ (ಬೆಳಗಾವಿ ಸಮೀಪದ ಹಳ್ಳಿಯಲ್ಲಿ ುಟ್ಟಿದ ಕಾಲೇಲ್ಕರ್ ಗಾಂಧೀಜಿಯ ಆಪ್ತ ಾರ್ಯದರ್ಶಿಯಾಗಿದ್ದರು. ಜೀವನ ಎಂದರೆ ನೀರು. ೀರಿನ ಆಟ ಎಂಬರ್ಥವನ್ನೂ ಉಳ್ಳ ಈ ಪುಸ್ತಕ ಇಂಡಿಯಾದ ನದಿಗಳನ್ನು ಕುರಿತದ್ದು). ಕಾಲೇಲ್ಕರ್ ನಿರೂಪಿಸಿರುವ ಈ ಅನುಭವ ಆಳ ಸಮುದ್ರದಲ್ಲಿ ಪಯಣಿಸಿದ್ದರಿಂದ ಬಂದುದಲ್ಲ. ಗೋಕರ್ಣದಿಂದ ಅಲ್ಲೇ ಇರುವ ತದಡಿ ಬಂದರಿಗೆ ಬರುವಾಗ, ಬಿರುಗಾಳಿಗೆ ಸಿಲುಕಿದ ಸ್ಟೀಮರಿನಲ್ಲಿ ಪಡೆದುದು. ಇನ್ನು ನೆಲಬಿಟ್ಟು ಸಾವಿರಾರು ಮೈಲಿ ದೂರದವರೆಗೆ ಗೊತ್ತುಗುರಿಯಿಲ್ಲದೆ ಹೋಗುವವರಿಗೆ ಕಡಲು ಎಂತಹ ತಲ್ಲಣಗಳನ್ನು ತಂದೀತು ? ತಮ್ಮನ್ನು ಹೊಸ ಹೊಸ ನಾಡುಗಳ ಶೋಧನೆಗೆ ಅರಿಯದ ಕಡಲುಗಳಲ್ಲಿ ಹೊರಟಿದ್ದ ಕೊಲಂಬಸನನ್ನು ಮಾರ್ಗಮಧ್ಯದಲ್ಲೇ ಮುಗಿಸಿಬಿಡಲು ಅವನ ಜತೆಗಾರರು ಆಲೋಚಿಸಿದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ನಾವು ಹಡಗಿನಲ್ಲಿ ಬರುವಾಗ ಬಂಗಾಳ ಕೊಲ್ಲಿಯ ನಟ್ಟ ನಡುವೆ ಕಪ್ಪು ಶಾಯಿಯಂತಹ ಕಡಲನ್ನು ನೋಡುತ್ತಾ ನಿಂತಿರಬೇಕಾದರೆ, ಭಾರತ ಮೇನ್ ಲ್ಯಾಂಡಿನ ಕಡೆಯಿಂದ ಒಂದು ಆಮೆ ಅಂಡಮಾನಿನತ್ತ ಹೋಗುತ್ತಿರುವುದನ್ನು ಕಂಡೆವು. ಎಲ್ಲಿಗೆ ಪಯಣ ? ಎಂದು ವಿಸ್ಮಯ ಪಡುತ್ತಿರುವಾಗ ಗಣನಾಥ್ ಈ ಕಡಲಾಮೆಗಳ ಮಹಾಚಲನೆಗಳ ಬಗೆಗೆ ವಿವರಿಸಿದರು : 'ಈ ಆಮೆಗಳು ಅಂಡಮಾನಿಗೇ ಹೋಗುತ್ತವೆ ಎಂದು ಹೇಳಲು ಬರುವುದಿಲ್ಲ. ಅವು ಖಂಡಾಂತರಗಳಿಗೆ ಹೋಗುತ್ತವೆ. ಅವುಗಳ ಆಯಸ್ಸು ಕೂಡ ದೊಡ್ಡದು. ಆದರೆ ಎಲ್ಲೇ ಹೋದರೂ ಮೊಟ್ಟೆಯಿಡಲು ಮಾತ್ರ ನಿರ್ದಿಷ್ಟ ದಂಡೆಗಳಿಗೇ ಬರುತ್ತವೆ. ಒರಿಸ್ಸಾದ ದಂಡೆಗಳು ಅವುಗಳಲ್ಲಿ ಒಂದು. ಬಹುಶಃ ಈ ಆಮೆ ಮೊಟ್ಟೆಯಿಟ್ಟು ಮರಳಿ ಹೊರಟಿರಬಹುದು' ಎಂದರು. ಅದು ತನ್ನ ನೆಲೆಮನೆಯತ್ತ ಏಕಾಂಗಿಯಾಗಿ ಹೊರಟಿತ್ತು - ನಾವು ನಮ್ಮ ನೆಲೆಮನೆಯತ್ತ ಹೊರಟಂತೆ. ತನ್ನ ಸಂತಾನವನ್ನು ನೋಡಲು ಈ ತಾಯಿ ಆಮೆಗಳಿಗೆ ಸಾಧ್ಯವಾಗುವುದೇ ಇಲ್ಲವಲ್ಲ ಎಂದು ನನಗೆ ಅನಿಸಿತು. ಇದೇ ಕೂರ್ಮ ಸಂತಾನವು ಅಂಡಮಾನಿನ ದ್ವೀಪಗಳಲ್ಲಿರುವ ಜರವಾ ಸೆಂಟಿನಲೀಸ್, ಗ್ರೇಟ್ ಅಂಡಮಾನಿಗರು, ಶಾಂಪೇನರು, ಓಂಗಿಗಳಿಗೆ ಸಾವಿರಾರು ವರುಷಗಳಿಂದ ಆಹಾರ ವಾಗಿದೆ. ಅಲ್ಲಿ ಪರಿಸರವಾದದ ಪ್ರಶ್ನೆಯೇ ಬರುವುದಿಲ್ಲ.



*ಹಡಗಿನಿಂದ ಇಳಿಯಲು ನೆರೆದ ಸಂದಣಿ*

## ನೆಲ ಕಂಡಾಗ ರೋಮಾಂಚನ

ಹಡಗು ನೆಲಕ್ಕೆ ಸಮೀಪಸುತ್ತಿದೆ ಎಂದಾಗ ಇಡೀ ಹಡಗಿನೊಳಗೆ ಜೀವ ಸಂಚಾರದ ಒಂದು ಅಲೆಯೇ ಎದ್ದುಬಿಡುತ್ತದೆ. ಪಯಣದ ದಣಿವೋ ಅಪಾಯದಿಂದ ಪಾರಾದೆವು ಎಂಬ ನಿರಾಳ



*ಹಡಗಿನ ವೀಲ್ ಚೇಂಬರ್*

ಸುಖವೋ, ಇವೆರಡೂ ಕೂಡಿದ ಸಂಕೀರ್ಣ ಭಾವನೆಯೋ, ಎಲ್ಲರ ಜೀವಗಳು ನಲಿಯತೊಡಗಿವೆ ಎಂಬುದನ್ನು ಮಾತ್ರ ಕಾಣಬಹುದಿತ್ತು.

ಕೆಲವರ ನಲಿವಿಗೆ ಕಾರಣ ಹಡಗೂ ಅಲ್ಲ, ಕಡಲೂ ಅಲ್ಲ, ನೆಲವೂ ಅಲ್ಲ; ಬದಲಿಗೆ ಬಹಳ ಕಾಲದಿಂದ ಅಂಡಮಾನಿನಲ್ಲಿ ಇದ್ದು ತಂತಮ್ಮ ಊರುಗಳಿಗೆ ಮರಳುತ್ತಿರುವ ತವಕ. ನೆಲದ ಮೇಲೆ ಕಾಯುತ್ತಿರುವ ಜೀವಗಳ ನೆನಪು ಬಂದೊಡನೆ ಯಾಕಾದರೂ ಈ ಹಡಗು ಇಷ್ಟು ಮೆಲ್ಲಗೆ ಚಲಿಸುತ್ತಿದೆ ಅನಿಸುತ್ತಿರಬಹುದು. ದುಡಿಯಲು ಅಂಡಮಾನಿಗೆ ಹೋದ ಈ ಜನ, ತಮ್ಮ ತಾಯಿ, ತಂದೆ, ಹೆಂಡಿರು ಮಕ್ಕಳು ನೋಡಲು ಪಡುವ ತವಕವನ್ನೂ ಇಲ್ಲಿ ನೋಡಬೇಕು. ವಿದೇಶದಿಂದ ಮರಳಿಬಂದಂತಹ ಅನುಭವದಲ್ಲಿ ಅವರಿದ್ದರು. ಆದರೆ ಅವರನ್ನು ಬರಮಾಡಿಕೊಳ್ಳಲು ಬಂದರಿನಲ್ಲಿ ಜನ ಸೇರಿದ್ದರು ಅನಿಸಲಿಲ್ಲ. ಬಹುಶಃ ಅವರು ವಿಶಾಖಪಟ್ಟಣದಿಂದ ದೂರದ ಊರುಗಳವರಿರಬೇಕು.

ವರುಷಗಟ್ಟಲೆ ನೀರಿನ ಮೇಲೆ ಇದ್ದು, ಅದರಲ್ಲೂ ಬಿರುಗಾಳಿಗೆ ಸಿಕ್ಕು ಅಲೆದಲೆದು ಸಾಕಾದವರಿಗೆ ತನ್ನ ತಾಯ್ನಾಡಿನ ನೆಲದ ದರ್ಶನ ಎಷ್ಟು ಸಂಭ್ರಮದಾಯಕ ವಿದ್ದೀತು? ಎಂದು ಯೋಚಿಸುವಾಗ ಅರೆಬಿಯನ್ ನೈಟ್ಸ್ ಕತೆಗಳ ಸಿಂದಾಬಾದನು ನೆನಪಿಗೆ ಬರುತ್ತಾನೆ. ಸಿಂದಾಬಾದ್ ಹಡಗಿಳಿದು ಬಂದಾ ಎಂದರೆ, ಇಡೀ ಕುಟುಂಬವೇ ಸಡಗರದಲ್ಲಿ ಮುಳುಗಿಬಿಡುತ್ತದೆ. ಆದರೆ ಬಾಗ್ದಾದ್ ನಗರದ ವ್ಯಾಪಾರಿ ಸಿಂದಾಬಾದ್ ವಿಚಿತ್ರ ಸ್ವಭಾವದ ನಾವಿಕ ಹಾಗೂ ಸಾಹಸಿಗ. ಅವನಿಗೆ ಎರಡೇ ದಿನದೊಳಗೆ ಮನೆಯ ಮೋಜು, ಸಡಗರ, ಹೆಂಡತಿ-ಮಕ್ಕಳು, ಊರುಕೇರಿ ಎಲ್ಲ ಬೋರಾಗಿ, ಮತ್ತೆ ಹಡಗು ಹತ್ತಿ ಹೊಸಹೊಸ ನಾಡುಗಳಿಗೆ, ಅರಿಯದ ದ್ವೀಪಗಳಿಗೆ ಹೊರಟುಬಿಡುತ್ತಾನೆ. ಹಾಗೆ ಮನೆಮಾರು ಬಿಟ್ಟು ಹೊರಟುಬಿಡುವುದಕ್ಕೆ ಅವನ ವ್ಯಾಪಾರಿ ಬುದ್ಧಿಯೂ ಕಾರಣವಿರಬೇಕು. ನನಗೆ ಯಾವತ್ತೂ ಮನೆಮಾರು ಬಿಟ್ಟು ದೂರ ಕರೆದೊಯ್ಯುವ ಈ ವ್ಯಾಪಾರಿ ಸಂಸ್ಕೃತಿ ಹಾಗೂ ಅದರ ಭಾಗವಾದ ಈ ಹಡಗುಗಳು ಕುಟುಂಬ ವಿರೋಧಿ ಎಂದು ಅನಿಸಿವೆ. ಇದನ್ನು ತುಳುನಾಡಿನ ಭೂತಗಳಲ್ಲಿ ಒಬ್ಬನಾದ ಬಪ್ಪಬ್ಯಾರಿಯ ಕತೆ

ಸೂಚಿಸುತ್ತದೆ. ಬಪ್ಪಬ್ಯಾರಿಗೆ ಅವನು ದೂರದೇಶಕ್ಕೆ ಹೋಗಿ ವ್ಯಾಪಾರ ('ಬ್ಯಾರಿ' ಎಂದರೆ ವ್ಯಾಪಾರಿ !) ಮಾಡಬೇಕೆಂದು ಹಡಗನ್ನು ಕಟ್ಟತೊಡಗುತ್ತಾನೆ. ಅವನ ತಾಯಿ ಇದ್ದೊಬ್ಬ ಮಗ ಗದ್ದೆ ಉತ್ತುಕ್ಕೊಂಡು ಕಣ್ಣ ಮುಂದೆ ಇರಲಿ ಎಂದು ಹಡಗು ಕಟ್ಟುವುದನ್ನು ವಿರೋಧಿಸುತ್ತಾಳೆ. ಅವನು ತನ್ನ ಮಾತು ಮೀರಿ ಹಡಗು ಕಟ್ಟಿ ಕಡಲಿಗೆ ಹೋದಾಗ ತನ್ನ ತಂಗಿ ಕಡಲಮ್ಮನಿಗೆ ಹೇಳಿ ಬಿರುಗಾಳಿ ಎಬ್ಬಿಸಿ ಅವನ ಹಡಗು ಮುಳುಗಿಹೋಗುವಂತೆ ಮಾಡುತ್ತಾಳೆ. ನಿರ್ದಿಷ್ಟ ನೆಲಕ್ಕೆ ಕಟ್ಟಿನಿಲ್ಲಿಸುವ ಕೃಷಿ ಹಾಗೂ ಕುಟುಂಬ ಸಂಸ್ಕೃತಿಗಳಿಂದ ಬಿಡಿಸಿಕೊಂಡು ಹೋಗುವ ಪುರುಷ ಸಾಹಸ ಹಡಗನ್ನು ನಿರ್ಮಿಸಿತೆ ? ಅಥವಾ ವ್ಯಾಪಾರ ಸಂಸ್ಕೃತಿಯ ಒತ್ತಾಯಗಳು ಹಡಗನ್ನು ಕಟ್ಟಲು ಒತ್ತಾಯಿಸಿತೇ ? ಇದೇ ಕಡಲು ಇವೇ ಹಡಗುಗಳು ತಾನೇ ಚರಿತ್ರೆಯಲ್ಲಿ ಕೆಲವರು ಖಂಡಾಂತರಗಳನ್ನು ಹುಡುಕಿ ವ್ಯಾಪಾರ ಮಾಡಲು ಪ್ರಚೋದನೆ ಕೊಟ್ಟಂತಹವು ? ಇವೇ ಹಡಗು ತಾನೇ ಈ ವ್ಯಾಪಾರಿಗಳು ತಾವಿಳಿದ ದೇಶಗಳನ್ನು ನಾಡುಗಳನ್ನು ವಶಪಡಿಸಿಕೊಳ್ಳಲು ಯುದ್ಧ ಮಾಡಲು ಸಹಾಯಕವಾದಂತಹವು ? ಚರಿತ್ರೆಯಲ್ಲೂ ವರ್ತಮಾನದಲ್ಲೂ ವ್ಯಾಪಾರದ ಭಾಗವಾಗಿಯೇ ಯುದ್ಧ ಸಂಸ್ಕೃತಿ ಇದೆ.

ಹೀಗೆಲ್ಲ ಆಲೋಚಿಸುತ್ತಾ ನನಗೆ ಈ ಕಡಲು ಹಡಗುಗಳು, ವ್ಯಾಪಾರ, ಯುದ್ಧ ಮತ್ತು ವಸಾಹತುಶಾಹಿ ರಾಜಕಾರಣದ ಸಂಕೇತಗಳಾಗಿ, ಆಳದಲ್ಲಿ ಸ್ತ್ರೀ ವಿರೋಧಿಯಾಗಿ ಅನಿಸತೊಡಗಿದವು. ವ್ಯಂಗ್ಯವೆಂದರೆ ಇಷ್ಟೆಲ್ಲವನ್ನೂ ಬ್ರಿಟಿಷರು ಒಬ್ಬ ರಾಣಿಯ ಹೆಸರಲ್ಲಿ ಮಾಡಿದರು. ನಮ್ಮ ಹಡಗಿನ ಹೆಸರು ಕೂಡ ಅನ್ಯರಾಜ್ಯಗಳನ್ನು ಸೋಲಿಸಿ ದೊಡ್ಡ ಸಾಮ್ರಾಜ್ಯ ಕಟ್ಟಲು ಭಾರತವನ್ನೆ ಸುತ್ತಾಡಿದ ಒಬ್ಬ ರಾಜನದು. ಅಭಿಮಾನಿಗಳು 'ಕನ್ನಡಿಗನಾದ ಬಾದಾಮಿಯ ಚಾಲುಕ್ಯ ಪುಲಕೇಶಿ ಸೋಲಿಸಿದ ಹರ್ಷವರ್ಧನ' ಎಂದು ವಿಶೇಷಣ ಬೇಕಾದರೆ ಸೇರಿಸಬಹುದು.

ಸೂರ್ಯ ಮುಳುಗತೊಡಗಿದ. ನಿಧನಿಧಾನವಾಗಿ ಮಬ್ಬು ಬೆಳಕೂ ಕತ್ತಲೂ ಒಂದಕ್ಕೊಂದು ಸರಸವಾಡುತ್ತ ಪಾಳಿ ಬದಲಿಸುತ್ತಿದ್ದವು. ನಾವೆಲ್ಲ ಇಳಿಯಲು ಮಾಡಿಕೊಳ್ಳುವ ಸಿದ್ಧತೆ ತವಕ ಕಂಡು ಹಡಗಿನ ನಾವಿಕರಿಗೆ - ನಮ್ಮನ್ನು ಮೂರುದಿನ ಉಪಚರಿಸಿ ಕರೆತಂದವರಿಗೆ - ಹೇಗೆ ಅನಿಸುತ್ತಿತ್ತೋ ಏನೊ ? 'ನಮ್ಮನ್ನು ಜೋಪಾನವಾಗಿ ತಂದು ತಲುಪಿಸಿದರಲ್ಲಪ್ಪಾ' ಎಂದು ಅವರಿಗೆ ಕೃತಜ್ಞತೆ ಹೇಳುವ ಪುರುಸೊತ್ತು ಯಾರಿಗೂ ಇದ್ದಂತೆ ತೋರಲಿಲ್ಲ. ಹೊಳೆ ದಾಟಿದ ಮೇಲೆ ಅವರ ಅಂಬಿಗನ ಹಂಗಾದರೂ ಯಾಕೆ ? ಹಡಗಿನವರೂ ಅವತ್ತು ಸಂಜೆ ೫ ಗಂಟೆಗೇ 'ಲಾಸ್ಟ್ ಸಪ್ಪರ್'ನ್ನು ಹಾಕಿ, ಹಾಳಾಗಿಹೋಗಿ ಎಂದು ಕೈತೊಳೆದುಕೊಂಡಿದ್ದರು. ಹಡಗು ನೆಲಕ್ಕೆ ಸಮೀಪಿಸುವಾಗ ಹಡಗಿನ ತುದಿಗೆ ಸಂತೆ ನೆರೆದಂತೆ - ಹುಟ್ಟಿದಾರಭ್ಯ ಭೂಮಿಯನ್ನು ಕಂಡೇ ಇಲ್ಲವೇನೋ ಎಂಬಂತೆ - ಜನಸಂದಣಿ ನೆರೆಯಿತು. ನೆಲ ಸಮೀಪಿಸುತ್ತದೆ ಎಂದು ಸೂಚಿಸುವ ಚಿಹ್ನೆಗಳೆಂದರೆ - ಆಗಸದಲ್ಲಿ ಹಕ್ಕಿಗಳು ಹಾರಾಡುವುದು, ದೂರದ ಬೆಟ್ಟದ ಕೋಡು ಮಸುಕುಮಸುಕಾಗಿ ಕಾಣಿಸುವುದು, ಬಂದರಿನೊಳಗೆ ಹೋಗಲು ಅನುಮತಿಗಾಗಿ ದೂರದೂರದಲ್ಲಿ ನಿಂತಿರುವ ಹಡಗುಗಳ ಕೂವೆ ಕಂಬ ಕಪ್ಪು ಗೀಟನಂತೆ ಕಾಣುವುದು, ನೀರ ಮೇಲೆ ಎಣ್ಣೆಪಸೆ ತೇಲುತ್ತಾ ಮನುಷ್ಯರು ಬಳಸಿ ಬಿಸಾಡಿದ ವಸ್ತುಗಳು ಅಲ್ಲಲ್ಲಿ ಕಾಣಸಿಗುವುದು, ಇತ್ಯಾದಿ. ನೆಲ ಹತ್ತಿರ ಬರುವ ಈ ಚಿಹ್ನೆಗಳನ್ನು ಕಂಡಂತೆಲ್ಲ 'ಹೋ' ಎಂದು ಜನಘೋಷ ಹೊಮ್ಮುತ್ತಿತ್ತು. ಈ ಚಿಹ್ನೆಗಳನ್ನು ಉಗಾದಿಯ ಮೊದಲ ಚಂದ್ರನನ್ನು ಹುಡುಹುಡುಕಿ ಒಬ್ಬರಿಗೊಬ್ಬರು ತೋರಿಸುವಂತೆ ತೋರಿಸುತ್ತಿದ್ದರು.

**ಸುಡುವ ಊರಿನಂತಹ ಬಂದರು**

ಹಡಗಿನ ಯಾವುದೋ ಒಂದು ಹೊಯ್ದಾಟದಲ್ಲಿ ವಿಶಾಖಪಟ್ಟಣದ ಬೆಟ್ಟ ಸಾಲುಗಳ ಮೇಲಿನ ದೀಪಗಳ ಮಿಣುಕುರಾಶಿ ಚಕ್ಕನೆ ಕಂಡಿತು. ಇಡೀ ಊರು ಆ ಬೆಟ್ಟದ ಮೇಲೆ ಬೀಡುಬಿಟ್ಟಿರಬೇಕು. ಬಿಲ್ಲಿನಂತೆ ಬಾಗಿದ ಬೆಟ್ಟ ಸಾಲಿನ ಮೇಲೆ ಝಗಝಗಿಸುವ ದೀಪಗಳನ್ನು ಕಂಡು ಬಾನು 'ನೆಕಲೇಸಿನಂತೆ ಕಾಣುತ್ತಿವೆ' ಎಂದಳು. ಸುತ್ತಲ ನೀರಿನಲ್ಲಿ ಮೂವತ್ತರಷ್ಟು ಹಡಗುಗಳು ಲಂಗರುಹಾಕಿ ನಿಂತಿದ್ದವು. ಅವುಗಳು ದೀಪ ಹೊತ್ತಿಸಿಕೊಂಡು ಬೆಳಗುವ ವಿಧಾನಸೌಧಗಳಂತೆ ತೋರುತ್ತಿದ್ದವು. ವಿಶಾಖಪಟ್ಟಣದ ಹಡಗುಕಟ್ಟೆಯ ಕಡೆಯಿಂದ ಊರು ಸುಡುತ್ತಿದೆಯೇನೋ ಎಂಬಂತೆ ಕೆಂಪನೆಯ ಬೆಳಕು ಜಗಿದು ಮೇಲಿನ ಮೋಡಗಳನ್ನೆಲ್ಲ ಕೆಂಪಾಗಿಸಿತ್ತು.

'ನಮ್ಮ ಗವರ್ಮೆಂಟ್ ಕೆಂಪುಬಸ್ಸುಗಳು ಬಸ್‌ಸ್ಟ್ಯಾಂಡಿನೊಳಗೆ ಗೂಳಿಗಳಂತೆ ನುಗ್ಗುವ ಹಾಗೆ ಹಡಗು ಬಂದರನ್ನು ಪ್ರವೇಶಿಸುತ್ತದೆ. ಮೂರು ದಿನದಿಂದ ದಣಿದು ಬಂದಿರುವ ಸಾವಿರಾರು ಜನರನ್ನು ಹೊತ್ತು ಬಂದಿರುವ ಹಡಗನ್ನು, ಬಂದರಿನವರು ಆದರದಿಂದ ಸ್ವಾಗತಿಸುತ್ತಾರೆ' - ಎಂದು ನಾವೆಲ್ಲ ನಿರೀಕ್ಷಿಸಿದ್ದೆವು. ಈ ಊಹೆಗೆ ಕಾರಣ ಅಂಡಮಾನಿನಲ್ಲಿ ನಾನ್‌ಕೌರಿಗೆ ದೊರಕಿದ

---

ಸಾಮಾನ್ಯರ ಸಂದರ್ಶನ

## ನವಿಲುಗರಿಯ ಬೀಸಣಿಗೆ ಬೇಕೆ?

ಶ್ರೀರಂಗಪಟ್ಟಣದ ದರಿಯಾ ದೌಲತ್ ದಾರಿಯಲ್ಲಿ ಹತ್ತಾರು ನವಿಲುಗರಿ ಬೀಸಣಿಗೆಗಳ ಸಹಿತ ನನ್ನ ಕಣ್ಣಿಗೆ ಬಿದ್ದ ಯುವಕ ಭರತ್ ಸಿಂಗ್. ಆತನ ಸುತ್ತಲೂ ನಿಂತವರ ಪೈಕಿ ಬೀಸಣಿಗೆ ಖರೀದಿಯಲ್ಲಿ ಆಸಕ್ತರಾದವರು ಒಬ್ಬಿಬ್ಬರಿದ್ದರೆ ಕುತೂಹಲಕ್ಕಾಗಿ ನೆರೆದವರೇ ಹೆಚ್ಚು. ಅಂದವಾಗಿ ತಯಾರಾಗಿರುವ ನವಿಲುಗರಿ ಬೀಸಣಿಗೆಗಳು ಗಾಳಿ ಹಾಕಿಕೊಳ್ಳಲು ಹೆಚ್ಚು ಬಳಕೆಯಾಗದಿದ್ದರೂ ಜನರು ಅಲಂಕಾರಕ್ಕಾಗಿ ಅವನ್ನು ಖರೀದಿಸುತ್ತಾರೆ.

ಗುಂಪಿನಲ್ಲಿದ್ದವರೊಬ್ಬರು ''ಎಷ್ಟಪ್ಪಾ ಇದರ ಬೆಲೆ ?'' ಎಂದಾಗ ಆತ ಮಿಕಿಮಿಕಿ ನೋಡಿದ. ಹಿಂದಿ-ಉರ್ದುವಾದರೆ ಚಲ್ತಾ ಹೈ. ಇಂಗ್ಲಿಷಾದರೂ ಓಕೆ ! ಆದರೆ ಹಳ್ಳಿಯ ಕನ್ನಡದವರಿಗೆ ಬೆಲೆ ಹೇಳುವಾಗ ಕೈ ಬೆರಳ ಸಹಾಯ ಪಡೆದ. ''ಏನು ? ಮೂವತ್ತು ರೂಪಾಯೆ ? ಸಾಧ್ಯವೇ ಇಲ್ಲ'' ಎಂದು ಮುಖ ತಿರುಗಿಸಿದವರಿಗೆ, ಎಷ್ಟು ಕಡಿಮೆ ಮಾಡಬಹುದು ಎಂಬುದನ್ನು ಬೆರಳ ಮೂಲಕವೇ ಸೂಚಿಸಿದ.

ಬದುಕು ಅರಸುತ್ತಾ ಆಗ್ರಾದ ತಾಜಮಹಲಿನಿಂದ ಇಲ್ಲಿಯ ದರಿಯಾ ದೌಲತ್ ತಲುಪಿರುವ ಭರತ್ ಸಿಂಗ್ ಓದಿದ್ದು ಪ್ರಾಥಮಿಕ ಒಂದನೇ ತರಗತಿಯವರೆಗೆ ಮಾತ್ರ ಎಂಬುದನ್ನು ಕೇಳಿದಾಗ ನನಗೆ ಆಶ್ಚರ್ಯವಾಗದೆ ಇರಲಿಲ್ಲ. ಆದರೆ ತನ್ನ ಊರಿನ ಬಗ್ಗೆ ಹೇಳಿಕೊಳ್ಳುವಾಗ 'ನಿಮ್ಮ ಬೆಂಗಳೂರು, ಮುಂಬೈ, ಚೆನ್ನೈ ನಮ್ಮ ಆಗ್ರಾದ ಮುಂದೆ ಏನೇನೂ ಅಲ್ಲ' ಎನ್ನುವ ಧಾಟಿ. ''ತಾಜ್‌ಮಹಲ್ ನೋಡಿದ್ದೀರಾ ಸಾಬ್ ?'' ಎಂಬ ಆತನ ಪ್ರಶ್ನೆಗೆ ''ಹೌದಪ್ಪ ನೋಡಿದ್ದೀನಿ ಸಿನಿಮಾದಲ್ಲಿ !'' ಎಂದು ಹೇಳಬೇಕಾಯಿತು.

ನಾನು ಆತನ 'ಮಯೂರ ಪಂಖ' ಖರೀದಿಸುವ ಗಿರಾಕಿ ಎಂಬ ನಂಬಿಕೆಯಿಂದ ಆತ ಚೌಕಾಶಿ ಮಾಡತೊಡಗಿದ. ಆತ ಮೊದಲು ಹೇಳಿದ ಬೆಲೆಗಿಂತ ಅರ್ಧದಷ್ಟಕ್ಕೆ ಕೊಡುವುದಾಗಿ ಪಿಸುಗುಟ್ಟಿದ. ನಾನು ಆತನ ಒಂದು ಫೋಟೋ ತೆಗೆಯುವೆನೆಂದಾಗ, ದಿನದ ವರಮಾನ ಇತ್ಯಾದಿ ಕುರಿತು ತಿಳಿದುಕೊಳ್ಳುವ ಆಶಯ ವ್ಯಕ್ತಪಡಿಸಿದಾಗ, ಇದು ಬಾಯಿಮಾತಿನ ಆಸಾಮಿ ಎಂಬುದನ್ನು ಅರ್ಥಮಾಡಿಕೊಂಡ.



*ಭರತ್ ಸಿಂಗ್*

ಭರತ್ ತನ್ನ ಇನ್ನಿಬ್ಬರು ಮಿತ್ರರ ಸಹಿತ ಬಾಡಿಗೆ ಕೋಣೆಯಲ್ಲಿ ತಂಗಿದ್ದಾನೆ. ಶ್ರೀರಂಗಪಟ್ಟಣದ ಅನ್ನ, ಸಾರು ಏನೇನೂ ರುಚಿಸುವುದಿಲ್ಲ. ಮುಂಜಾನೆ ಅವರೇ ರೊಟ್ಟಿ ಮಾಡಿಕೊಳ್ಳುತ್ತಾರೆ. ಊರಿನಿಂದ ಬರುವಾಗ ಮೂರು ನಾಲ್ಕು ಹೊರೆಯಷ್ಟು ನವಿಲುಗರಿ ತಂದಿದ್ದಾರೆ. ಬಿಡುವಿನ ವೇಳೆ ಅವರೇ ಬೀಸಣಿಗೆ ತಯಾರಿಸುತ್ತಾರೆ. ಮೂವರೂ ಬೇರೆ ಬೇರೆ ದಿಕ್ಕಿನಲ್ಲಿ ವ್ಯಾಪಾರಕ್ಕೆ ಹೊರಡುತ್ತಾರೆ.

''ಮೂರು ಜನ ಬಾಡಿಗೆ ಕೋಣೆಯಲ್ಲಿ ತಂಗಿದ್ದೀರಿ. ಖರ್ಚು ಕಳೆದು ಏನಾದರೂ ಗಿಟ್ಟುತ್ತೋ ಹೇಗೆ ?''

''ಏನೋ ನಡೆಯುತ್ತೆ ಸಾಬ್. ಜೀವನ ಸಾಗಬೇಕಲ್ಲ.'' ಆಗ್ರಾದಲ್ಲಿ ಈತನ ಮಾವನದು ಒಂದು ದೊಡ್ಡ ಬೀಸಣಿಗೆ ಅಂಗಡಿ ಇದೆಯಂತೆ. ತನ್ನ ಫೋಟೋವನ್ನು ಮರೆಯದೆ ಆ ವಿಳಾಸಕ್ಕೆ ಕಳಿಸಿಕೊಡುವಂತೆ ವಿನಂತಿಸಿಕೊಂಡ. ಗರಿಯ ತುಣುಕೊಂದನ್ನು ನೀಡುತ್ತ 'ಇದು ನಿಮಗೆ ಗಿಫ್ಟ್' ಎಂದ.

ಕಾರಿನಲ್ಲಿ ಬಂದವರು ಆತನ ಕೈಯಿಂದ ಬೀಸಣಿಗೆ ತೆಗೆದುಕೊಂಡು ಪರೀಕ್ಷಿಸತೊಡಗಿದರು. ಶ್ರೀರಂಗಪಟ್ಟಣದ ಹುಡುಗನೊಬ್ಬ ತಾಜ್‌ಮಹಲ್ ಮುಂದೆ ಸೀಬೆ ಹಣ್ಣು ಮಾರುವ ದೃಶ್ಯವನ್ನು ಕಲ್ಪಿಸಿಕೊಳ್ಳುತ್ತಾ ನನ್ನ ದಾರಿ ಹಿಡಿದೆ.

- ಕೆ. ಪಿ. ಸ್ವಾಮಿ

ಗತವನ್ನು ಕಂಡಿದ್ದು. ನಾವೆಲ್ಲ ಹಡಗಿನ ಭಾರಿ ಇಂಜಿನ್ನು ನಗಳ ಗೊರಕೆಯಂತೆ ಲಯಬದ್ಧವಾಗಿ ಹೊರಡಿಸುವ ದ್ದಿಗೆ ನಿದ್ದೆ ಹೋಗಿದ್ದೆವು. ಸರಿರಾತ್ರಿಯ ಯಾವುದೋ ಾತ್ತಿನಲ್ಲಿ ನಾನ್‌ಕೌರಿ ಹಡಗು ಪೋರ್ಟ್ ಬ್ಲೇರಿಗೆ ಬಂದು ಂತಿತ್ತು. ಬಾನುವಿಗೆ ಎಚ್ಚರವಾಗಿ ನನ್ನನ್ನು ತಿವಿದು ಯಾಕೋ ಹಡಗು ನಿಂತಂತಿದೆ ಕಣೋ' ಎಂದಳು. ದಡಕ್ಕನೆ ದ್ದು ಹೊರಗೆ ಬಂದು ನೋಡಿದೆವು. ಇನ್ನೂ ಕತ್ತಲು ತ್ತಲು. ಆ ಕತ್ತಲ ಕಂಬಳಿಯನ್ನು ಸುತ್ತಿಕೊಂಡು ಕೂತಂತಹ ್ಯರಿಯಟ್ ಬೆಟ್ಟ, ಪೋರ್ಟ್ ಬ್ಲೇರ್ ಬಂದರು ಹಾಗೂ ಟ್ಟಣಗಳು ಮಬ್ಬಿನಲ್ಲಿ ಸೆಣಸಾಟ ಮಾಡುತ್ತಿರುವ ಂಕುದೀಪಗಳ ಮಾಲೆ ಹಾಕಿಕೊಂಡು, ಕನಸಲ್ಲಿವೆ ಂಬಂತೆ ಅಸ್ಪಷ್ಟವಾಗಿ ಕಂಡವು. 'ಅಂಡಮಾನ್ ಬಂದಿದೆ' ಂಬ ಒಂದು ಕೂಗಿಗೆ ಎಲ್ಲರೂ ಎದ್ದು ಡೆಕ್ಕಿನ ಮೇಲೆ ರೆಯುತ್ತಿದ್ದಂತೆ, ಬೆಳಕು ಹರಿಯುತ್ತಾ ಬಂದು, ಬಂದರಿನ ಾಸ್ಟರನು ಬಂದು ಲಗುಬಗೆಯಿಂದ ಹಡಗನ್ನು ಒಳಗೆ ಡೆಸಿಕೊಂಡು ಹೋದ. ಇದಕ್ಕೆ ಮೊದಲ ಕಾರಣ, ೋರ್ಟ್ ಬ್ಲೇರಿನಲ್ಲಿ ಹಡಗು ಟ್ರಾಫಿಕ್ ಹೆಚ್ಚು ರದಿರುವುದು. ಎರಡನೆಯದು ಹಡಗಿನ ಒಳಗಿರುವ ೂರಾರು ವಸ್ತುಗಳಿಗೆ ಇಡೀ ದ್ವೀಪಸಮೂಹವೇ ವೃದ್ಧಾಪ್ಯ ೇತನಕ್ಕೆ ಮುದುಕರು ಕಾಯುವಂತೆ ಕಾಯುತ್ತಿರುವುದು ನಾವು ಅಂಡಮಾನಿಗೆ ಹೋದ ಮೂರು ದಿನಗಳವರೆಗೆ ಾನ್‌ಕೌರಿಯ ಹೊಟ್ಟೆಯೊಳಗಿಂದ ಸಾಮಾನುಗಳನ್ನು ಗೆಯುತ್ತಲೇ ಇದ್ದುದನ್ನು ನಾವು ನೋಡಿದೆವು).

ಆದರೆ ವಿಶಾಖಪಟ್ಟಣದಲ್ಲಿ ಹಾಗಾಗಲಿಲ್ಲ. ಹಡಗು ಳಿಯುವವರ ನಿರೀಕ್ಷೆಯನ್ನು ಹುಸಿಗೊಳಿಸಿ, ಸಿಗ್ನಲ್ ಸಿಗದ ಲಿನಂತೆ, ಬಂದರಿನಿಂದ ಒಂದು ಮೈಲು ದೂರದ ಡಲಿನಲ್ಲಿ ಲಂಗರುಹಾಕಿ ನಿಂತುಬಿಟ್ಟಿತು. ಯಾಕೆಂದು ಡಗಿನ ಅಧಿಕಾರಿಗಳನ್ನು ಕೇಳಲಾಗಿ 'ಇಲ್ಲಿಯವರೆಗೆ ಡಗನ್ನು ತರುವುದು ಮಾತ್ರ ನಮ್ಮ ಕರ್ತವ್ಯ. ಇನ್ನು ಒಳಗೆ ಯ್ಯುವುದು ಬಂದರಿನವರ ಕೆಲಸ' ಎಂದು ಹೇಳಿ ಕೈ ಲ್ಲಿದರು. 'ಯಾವಾಗ ಪ್ರವೇಶ ಸಿಗಬಹುದು ?' ಎಂದು ೇಳಲು 'ಅದನ್ನು ಹೇಳಲು ನಮಗೆ ಸಾಧ್ಯವಿಲ್ಲ' ಎಂಬ ುತ್ತರ ನಿರ್ಲಿಪ್ತವಾಗಿ ಬಂತು. ನಮಗೆ ಗೌಹಾತಿ- ಂಗಳೂರು ರೈಲನ್ನು ಹಿಡಿಯಬೇಕಿತ್ತು. ನಮ್ಮ ಮಾಸಿದ ುಖ ಕಂಡು ಪಾಪ ಅನಿಸರಬೇಕು, 'ಇಗೋ ನೋಡಿ. ೂರದೂರಕ್ಕೆ ನಿಂತಿರುವ ಇಷ್ಟೊಂದು ಸರಕು ಹಡಗು ಳಿವೆಯಲ್ಲಾ, ಇವೆಲ್ಲ ಬಂದರಿನ ಒಳಪ್ರವೇಶಕ್ಕೆ ಅನುಮತಿ ಗದೆ ಒಂದು ತಿಂಗಳಿನಿಂದ ಕಾಯುತ್ತಿವೆ' ಎಂದು ೇಳಿದರು. ಹಡಗು ಬಂದರಿಗೆ ಹೋಗುವುದು ತಡವಾದರೆ, ಲಕ್ಕೆ ಜಿಗಿದು ಹೋಗುವೆವು ಎಂಬಂತೆ ಅವಸರ ಮಾಡಿ ಂತಿದ್ದವರ ಸೊಲ್ಲು ಅಲ್ಲಿಗೆ ಅಡಗಿತು.

ಹಡಗನ್ನು ಒಳಗೆ ಕರೆದುಕೊಂಡು ಹೋಗಲು ಬರುವ ೋರ್ಟ್‌ಮಾಸ್ಟರನ ಆಗಮನಕ್ಕೆ ಜನಸ್ತೋಮ ಸಹಾಯಕನಾಗಿ ಕಾಯತೊಡಗಿತು. ದಣಿದ ಜೀವಗಳಿಗೆ ಷ್ಟು ದಿನ ಸಂಗಾತಿಯಾಗಿದ್ದ ಹರ್ಷವರ್ಧನವು ಇದ್ದಕ್ಕಿದ್ದಂತೆ ಃಖವರ್ಧನವಾಗತೊಡಗಿತು. ನಿಲ್ದಾಣಗಳಲ್ಲಿ ನಿಂತು ಲಿಗೋ ಬಸ್ಸಿಗೋ ಕಾಯುವುದು ನಮಗೆ ಗೊತ್ತು. ಆದರೆ ಾಹನದಲ್ಲಿ ಕೂತು ನಿಲ್ದಾಣದೊಳಗೆ ಹೋಗಲು ಗಂಟೆಗಟ್ಟಲೆ ಕಾಯುವುದು ಹೊಸ ಅನುಭವ. ಇಷ್ಟಕ್ಕೂ ಕಡಲ ಪಯಣ ಯಾರಿಗಾದರೂ ಪ್ರಚಂಡ ಸಹನೆಯನ್ನು ಕಲಿಸಿರುತ್ತದೆ. ನಮಗೆ ಬಿಲ್ಲಿನಂತೆ ಬಳಕುವ ಒಬ್ಬ ನೌಕಾಪಡೆಯ ತರುಣ ಅಧಿಕಾರಿ ಪರಿಚಿತನಾಗಿದ್ದ. ಅವನು ಹೇಳಿದ ಪ್ರಕಾರ, ವಿಳಂಬಕ್ಕೆ ಮೊದಲ ಕಾರಣ ಈಗಾಗಲೇ ನಿಂತಿರುವ ಸರಕುಸಾಗಾಣಿಕೆ ಹಡಗುಗಳನ್ನು ದೂರಸರಿಸಿ, ನಮ್ಮ ಭಾರಿ ಹಡಗಿಗೆ ಜಾಗ ಮಾಡಬೇಕಾಗಿತ್ತು. ಎರಡನೆಯದಾಗಿ ವಿಶಾಖಪಟ್ಟಣದ ಬಂದರಿನ ರಚನೆಯೇ ವಿಶಿಷ್ಟವಾಗಿದ್ದು, ಇಕ್ಕಟ್ಟಾದ ನೀರ ಓಣಿಗಳ ಮೂಲಕ ಈ ಭಾರಿ ಹಡಗನ್ನು ಕರೆದುಕೊಂಡು ಹೋಗುವ ಕೆಲಸವನ್ನು ಹುಷಾರಾಗಿ ಮಾಡಬೇಕಿತ್ತು. 'ವಿಶಾಖಪಟ್ಟಣದ ಬಂದರು ಇಡೀ ಭಾರತದಲ್ಲಿಯೇ ಸ್ವಾಭಾವಿಕವಾದ ಸುಂದರ ಬಂದರು. ಅದನ್ನು ನೀವು ನೋಡಲೇಬೇಕು' ಎಂದು ಅವನು ತಾಕೀತು ಮಾಡಿದ.

ರಾತ್ರಿ ಹತ್ತರ ಸುಮಾರಿಗೆ ಬಂದರಿನ ಕಡೆಯಿಂದ ಪ್ರಖರವಾದ ಬೆಳಕು ಬಿಟ್ಟುಕೊಂಡು ಒಂದು ದೋಣಿ ಬರುತ್ತಿರುವುದನ್ನು ಕಂಡು ಜನ ನಿಟ್ಟುಸಿರುಬಿಟ್ಟರು. ಅದು ಹಾರ್ಬರ್ ಮಾಸ್ಟರನ ಯಾಂತ್ರಿಕ ದೋಣಿ. ಅದಕ್ಕೆ ಮೈತುಂಬ ಹೆಡ್‌ಲೈಟುಗಳು. ಮಾಸ್ಟರನ ದೋಣಿ ಹಡಗಿನ ಕೋಟೆಗೋಡೆಯಂತಹ ಕಬ್ಬಿಣದ ಮೈಯ ಕೆಳಗೆ ಬಂದು ನಿಂತಿತು. ನಮ್ಮ ಹಡಗಿನಿಂದ ಒಂದು ನೂಲೇಣಿಯನ್ನು ಬಿಡಲಾಯಿತು. ಅದನ್ನು ಹಿಡಿದು ಚಕಚಕ ಹತ್ತಿ ಮಾಸ್ಟರನು ಹಡಗಿನೊಳಕ್ಕೆ ಬಂದ. ಪುರೋಹಿತನಂತೆ ಬಂದ ಅವನನ್ನು ಹಡಗಿನವರು ಬಹಳ ಆದರದಿಂದ ಸೆಟೆದು ನಮಸ್ಕಾರ ಮಾಡಿ ಬರಮಾಡಿಕೊಂಡರು. ಹಾರ್ಬರ್ ಮಾಸ್ಟರ್‌ನ ವಶಕ್ಕೆ ಹಡಗನ್ನು ಒಪ್ಪಿಸುವುದು ಒಂದು ವಿಧ್ಯುಕ್ತ ಆಚರಣೆಯಂತೆ ಇತ್ತು. ಈಗ ಹಡಗು ಒಂದು ಸಲ ಮಿಲ್ಲಿನ ಸೈರನ್ನಿನಂತೆ ವಿಕಾರವಾದ ಕೂಗು ಹಾಕಿ ಬಂದರಿನತ್ತ ನಿಧಾನವಾಗಿ ಚಲಿಸತೊಡಗಿತು.

ವಿಶಾಖಪಟ್ಟಣದ ಬಂದರು ಮೈಸೂರು ಅರಮನೆಯಂತೆ ನಸುಗೆಂಪು ದೀಪಗಳಿಂದ ಝಗಝಗಿಸುತ್ತಿತ್ತು. ಅದೊಂದು ಭಾರತೀಯ ಇಂಜಿನಿಯರಿಂಗ್. ಅದ್ಭುತವಾಗಿ ತೋರಿತು. ಬಂದರಿಗೆ ತೆರೆದ ಕಡಲಿನಿಂದ ಒಳಹೋಗಲು ಒಂದು ಸಣ್ಣ ದಾರಿಯಿದೆ. ಅದರ ಮೂಲಕ ಹಡಗನ್ನು ಸರಿಯಾದ ಕೋನದಲ್ಲಿ ಅಡ್ಡಕ್ಕೆ ತಿರುಗಿಸಿ, ಖೆಡ್ಡಾದಲ್ಲಿ ಸಿಕ್ಕ ಕಾಡಾನೆಯನ್ನು ಒಬ್ಬ ಸಣಕಲು ಮಾವುತ ನಡೆಸಿಕೊಂಡು ಹೋಗುವಂತೆ, ಒಂದು ಸಣ್ಣ ಎಳೆದೋಣಿ ಕರೆದುಕೊಂಡು ಹೋಯಿತು. ಒಳಗೆ ಅಕ್ಟೋಪಸ್ಸಿನ ಹತ್ತಾರು ಬಾಹುಗಳಂತೆ ಅಲೆಗಳಿಲ್ಲದೆ ಪ್ರಶಾಂತವಾಗಿ ದೂರದೂರಕ್ಕೆ ಚಾಚಿಕೊಂಡ ಹಿನ್ನೀರು. ಕೈಯ ಬೆರಳುಗಳಂತಿದ್ದ ಪ್ರತಿಯೊಂದು ನೀರಸೀಳಿನಲ್ಲಿ ಹಡಗು ಕಟ್ಟುವ ಕಾರ್ಖಾನೆಗಳು. ನೀರಿನ ಮೇಲೆ ನಸುಗೆಂಪು ದೀಪಗಳ ಬೆಳಕು ಬಿದ್ದು, ಇಡೀ ನೀರೇ ಕೆಂಪಗೆ ರಗರಗ ಹೊಳೆಯುತ್ತಿತ್ತು. ಅದೊಂದು ಕತೆಗಳಲ್ಲಿ ಬರುವ ಮಾಯಾಸಮುದ್ರದಂತಿತ್ತು. ಬಂದರಿನ ಒಂದು ಕಡೆ ಇಂಡಿಯನ್ ಆಯಿಲ್ಲಿನ ದೆವ್ವದಂತಹ ಟ್ಯಾಂಕುಗಳು. ಬಂದರಿನ ಮೇಲೆ ಇರುವೆಗಳಂತೆ ಓಡಾಡುತ್ತಿರುವ ಸಾವಿರಾರು ಜನ ಅಧಿಕಾರಿಗಳು ಕೆಲಸಗಾರರು. ಅದೊಂದು ಭಾರಿ ಗಜಿಬಿಜಿಯ ಸಂತೆ.

ಎಷ್ಟೋ ಹೊತ್ತು ಕಾಯಿಸಿದ ಮೇಲೆ ಏಣಿಯನ್ನು ತಂದು ಜೋಡಿಸಲಾಯಿತು. ಈಗ ಗಂಟುಮೂಟೆಗಳು ಕೈಕಾಲು ಬಂದು ಇಳಿಯುತ್ತಿವೆ ಎಂಬಂತೆ ಜನರ ಹೆಗಲು ತಲೆಗಳು ಲಗೇಜುಗಳಿಂದ ತುಂಬಿ, ಅವರು ಅವುಗಳ ಭಾರದಿಂದ ತತ್ತರಿಸುತ್ತ ಇಳಿಯುವ ಹೊತ್ತಿಗೆ ಮತ್ತಷ್ಟು ಹೊತ್ತಾಯಿತು. ಎಲ್ಲವನ್ನು ಮೇಲಿನ ಉಪ್ಪರಿಗೆಯಿಂದ ನಮ್ಮ ಹಡಗಿನ ನಾವಿಕರು ತಮಾಷೆಯಿಂದ ನೋಡುತ್ತಿದ್ದರು.

**ಇಳಿದೊಡನೆ ಮತ್ತೆ ಕಾಡಿದ ಅಂಡಮಾನ್**

'ಅಬ್ಬಾ! ಕೊನೆಗೂ ನೆಲಸಿಕ್ಕಿತು' ಎಂದು ಇಳಿದು ಹೊರಗೆ ಬಂದೊಡನೆ, ಹರಕು ಸಮವಸ್ತ್ರ ಹಾಕಿದ್ದ ಬಂದರಿನ ಹಮಾಲಿಗಳ, ರಿಕ್ಷಾವಾಲಿಗಳ ಭಯಾನಕ ಜಗಳ. ಗಿರಾಕಿಗಳಿಗಾಗಿ ಕಾದುಕೂತ ಸೈಕಲ್ ರಿಕ್ಷಾಗಳನ್ನು ಕಂಡಾಗ ಹೊಸಪೇಟೆಗೆ ಬಂದಂತೆ ಭಾಸವಾಯಿತು. ಆಂಧ್ರ, ಒರಿಸ್ಸಾ, ಪಶ್ಚಿಮಬಂಗಾಳ, ಬಾಂಗ್ಲಾದೇಶದವರೆಗೆ ಹಬ್ಬಿರುವ ಸೈಕಲ್‌ರಿಕ್ಷಾಗಳ ಸಂಸ್ಕೃತಿ ದಕ್ಷಿಣ - ಪಶ್ಚಿಮದಲ್ಲಿ (ನೈರುತ್ಯ) ಶುರುವಾಗುವ ಮೊದಲ ಬಿಂದುವೇ ಹೊಸಪೇಟೆ. ಹಂಪಿಗೆ ಬಂದ ಹೊಸತರಲ್ಲಿ ಮನುಷ್ಯರು ತುಳಿಯುವ ಸೈಕಲ್ ರಿಕ್ಷಾಗಳಲ್ಲಿ ಕೂತಾಗ ಎಂಥದೋ ಮುಜುಗರವಾಗುತ್ತಿತ್ತು. ಆದರೆ ನಮ್ಮ ಮಾನವೀಯ ಮುಜುಗರಕ್ಕಾಗಿ ಆಟೋದಲ್ಲಿ ಹೋದರೆ ರಿಕ್ಷಾಗಳ ಹೊಟ್ಟೆಮೇಲೆ ಹೊಡೆದ ಪಾಪ ಸುತ್ತಿಕೊಳ್ಳುತ್ತಿತ್ತು.

ಮೇನ್‌ಲ್ಯಾಂಡ್ ಬಿಟ್ಟು ಹೋಗುವಾಗ ನಮಗಿದ್ದ ಭಾವನೆ, 'ಯಾವಾಗ ಈ ನಗರವನ್ನು ಬಿಟ್ಟು ಹೊರಟೇವಪ್ಪಾ' ಎಂಬುದಾಗಿತ್ತು. ಮದರಾಸ್ ಬಂದರಿನಿಂದ ಹಡಗು ಬಿಡುವಾಗ ಸಂಜೆಯಾಗಿತ್ತು. ಕೆಲವು ಮೈಲು ದೂರ ಹೋದಾಗ ಇಡೀ ನಗರದ ಬೆಳಗುವ ದೀಪಗಳು ದೊಂದಿ ಹಿಡಿದು ನಿಂತ ಸೈನ್ಯದಂತೆ ತೋರಿದ್ದವು. ಇದಕ್ಕೆ ಅಂಡಮಾನಿಗೆ ಹೋಗುವ ನಮ್ಮ ಕನಸು ಕೈಗೂಡಿದ್ದು ಒಂದು ಕಾರಣವಾದರೆ, ಮದರಾಸಿನ ಬಿಸಿಲುಸೆಖೆಗಳು ನಾಲ್ಕು ದಿನ ಉಬ್ಬೆಗೆ ಹಾಕಿದಂತೆ ಉಸಿರುಗಟ್ಟಿಸಿದ್ದು ಇನ್ನೊಂದು. ಆದರೆ ಈಗ ವಿಶಾಖಪಟ್ಟಣದ ಅಂತಹವೇ ದೀಪಗಳು ಅದೇ ಗಜಿಬಿಜಿ ಕೈ ಬೀಸಿ ಕರೆದು ಅಪ್ಪಿಕೊಳ್ಳುವ ಗೆಳೆಯರಂತೆ ಭಾಸವಾಗುತ್ತಿವೆ. ಕೇವಲ ಎರಡು ಮೂರು ವಾರಗಳಲ್ಲಿ ನಮ್ಮಲ್ಲಾದ ನಾಟಕೀಯ ಪರಿವರ್ತನೆ ನಮ್ಮನ್ನೇ ಅಣಕಿಸುತ್ತಿತ್ತು. ನೆಲದಲ್ಲಿದ್ದಾಗ ಕಡಲು ಸೆಳೆಯುತ್ತದೆ. ಕಡಲ ಮೇಲೆ ತೇಲುವಾಗ ನೆಲ ಸಿಕ್ಕರೆ ಸಾಕಪ್ಪ ಅನಿಸುತ್ತದೆ. ನೀರು ಮುತ್ತಿಕೊಂಡ ನಡುಗಡ್ಡೆಯಲ್ಲಿದ್ದಾಗ ನೆಲದ ಬಯಲಿಗೆ ಹರಿಯಬೇಕೆನಿಸುತ್ತದೆ. ಈಗ ಹಡಗು ಬಿಟ್ಟು ನೆಲಕ್ಕೆ ಇಳಿದೆವೋ ಮತ್ತೆ ಕಡಲು ಕನಸಾಗಿ ಕರೆದಂತಾಗುತ್ತಿದೆ. ಇದೆಂಥ ಆಟ ? ಈಗಲೂ ಅನಿಸುತ್ತಿದೆ - ಸಾಯುವುದರೊಳಗೆ ಮತ್ತೊಮ್ಮೆ ಅಂಡಮಾನಿಗೆ ಹೋಗಬೇಕು, ನಾವು ನೋಡದೆ ಬಿಟ್ಟುಬಂದ ನಿಕೋಬಾರ್, ಲಿಟ್ಲ್ ಅಂಡಮಾನ್, ಹ್ಯಾವಲಾಕ್ ನೀಲ್ ದ್ವೀಪಗಳಿಗೆ ಹೋಗಬೇಕು, ಅಲ್ಲಿನ ಜನರ ಜತೆ ಮತ್ತಷ್ಟು ಆಪ್ತವಾಗಿ ಬೆರೆಯುವಂತಾಗಬೇಕು ಎಂದು. ಇದು ಸಾಧ್ಯವಾಗುತ್ತೋ ಇಲ್ಲವೋ ಗೊತ್ತಿಲ್ಲ, ಆದರೆ ಕನಸು ಕಟ್ಟುವುದನ್ನು ಯಾರು ತಡೆಯುತ್ತಾರೆ ?

**ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ - ಹಂಪಿ, ವಿದ್ಯಾರಣ್ಯ - ೫೮೩೨೭೬

# ವಿಶ್ವಸಂಸ್ಥೆ ಎತ್ತ ಸಾಗಿದೆ?

*ಸೆಪ್ಟೆಂಬರ್ ಮೊದಲ ವಾರದಲ್ಲಿ ಸಂಯುಕ್ತರಾಷ್ಟ್ರ ಮಹಾಸಂಸ್ಥೆಯ ಪೂರ್ಣಾಧಿವೇಶನವನ್ನು ಹೊಸ ಸಹಸ್ರಮಾನದ ಸ್ವಾಗತಕ್ಕಾಗಿ ಕರೆಯಲಾಗಿತ್ತು. ಈ ಪೂರ್ಣಾಧಿವೇಶನದಲ್ಲಿ ಭಾರತದ ಪ್ರಧಾನ ಮಂತ್ರಿಗಳು ಭಾಗವಹಿಸಿದ್ದರು. ನಮ್ಮ ಪ್ರಧಾನಿಯವರು ನಮ್ಮ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಸಾಮ್ರಾಜ್ಯಶಾಹಿ ವಿರೋಧಿ ನೆಲೆಯಲ್ಲಿ ನಿಂತು ವಿಶ್ವಸಂಸ್ಥೆಯ ಸದಸ್ಯರನ್ನುದ್ದೇಶಿಸಿ ಮಾತನಾಡುವರೆಂದು ನಿರೀಕ್ಷಿಸಲಾಗಿತ್ತು. ನೂರಕ್ಕಿಂತ ಹೆಚ್ಚಿನ ಬಡರಾಷ್ಟ್ರಗಳ ನೇತಾರನಾಗಿ, ವಕ್ತಾರನಾಗಿ, ಬರುವ ಶತಮಾನದ, ಸಹಸ್ರಮಾನದ, ಸಮಸ್ಯೆಗಳನ್ನು ಎತ್ತಬೇಕಾಗಿತ್ತು. ಆದರೆ ಅವರು ಅಲ್ಲಿ ಪಾಕಿಸ್ತಾನದ ಭೂತಕ್ಕೆ ಅಂಜಿದ ಬಾಲಕನ ತೆರದಲ್ಲಿ ಆಲ್ಪರಿದದ್ದು, ಮಾಲಿಕ ದೇಶಗಳ ಎದುರು ದುಂಬಾಲು ಬಿದ್ದದ್ದು ಜಾಗತಿಕ ರಾಜಕೀಯದ ಆಸಕ್ತರೆಲ್ಲ ತಿಳಿದ ಮಾತಾಗಿದೆ.*

*ತನ್ನನ್ನು ಇಂದಿಗೂ ಸಮಾಜವಾದಿ ಎಂದು ಕರೆದುಕೊಳ್ಳುತ್ತಿರುವ ಚೀನ ದೇಶವಾದರೂ ವಿಶ್ವಸಂಸ್ಥೆಯ ಹೊಸ ಸಹಸ್ರಮಾನದ ಪ್ರಥಮ ಸಭೆಯಲ್ಲಿ ಪ್ರಪಂಚದ ಶೋಷಿತ ಪೀಡಿತ ದಲಿತ ಜನತೆಯ ಮುಖವಾಣಿಯಾಗಿ ಹೊರಹೊಮ್ಮಬೇಕಾಗಿತ್ತು. ಅದು ಹಾಗೆ ಮಾಡಿದಂತಿಲ್ಲ.*

*ಆದರೆ ಜಗತ್ತಿನ ಎಲ್ಲ ಆಕ್ರಮಣಕಾರಿ ಮೂಲಭೂತವಾದಿ ಶೋಷಕ ದೇಶಗಳಿಂದ ಎಲ್ಲ ರೀತಿಯಿಂದಲೂ ಬಹಿಷ್ಕೃತಗೊಂಡಿರುವ ಒಂದು ಕೋಟಿಗಿಂತ ಹೆಚ್ಚಿನ ಜನಸಂಖ್ಯೆಯಿರುವ ಪುಟ್ಟ ದೇಶ, ಸಾಧನ ಹೀನ, ನಿಷ್ಠ ಸಿದ್ಧಾಂತವಾದಿ ದೇಶ ಕ್ಯೂಬಾ ಮಾತ್ರ ಮನುಕುಲದ ಮುಂದಿನ ದಿನಗಳ ಆಶೋತ್ತರಗಳ ತೂರ್ಯವಾಣಿಯನ್ನು ವಿಶ್ವಸಂಸ್ಥೆಯಲ್ಲಿ ಮೊಳಗಿಸಿದೆ. ಕ್ಯೂಬಾದ ಅಧ್ಯಕ್ಷ ಡಾ|| ಫಿಡೆಲ್ ಕ್ಯಾಸ್ಟ್ರೋರವರು ಸೆಪ್ಟೆಂಬರ್ ೬ರಂದು ಸಂಯುಕ್ತ ರಾಷ್ಟ್ರ ಸಂಸ್ಥೆಯಲ್ಲಿ ಮಾಡಿದ ಭಾಷಣ ಇದು.*



ಇಂದಿನ ನಮ್ಮ ವಿಶ್ವದಲ್ಲಿ ಆದ್ಯಂತವಾಗಿ ಅವ್ಯವಸ್ಥೆ, ಅರಾಜಕತೆಗಳು ದಟ್ಟಣಿಸಿವೆ. ಕುರುಡು ಕಾಯ್ದೆಗಳಿಗೆ ದೈವೀ ಸ್ವರೂಪಕೊಟ್ಟು ನಮ್ಮೆಲ್ಲರ ಮೇಲೆ ಹೇರಲಾಗುತ್ತಿದೆ. ಇವು ಜಗತ್ತಿನಲ್ಲಿ ಕಲ್ಯಾಣ, ಶಾಂತಿ, ಸುವ್ಯವಸ್ಥೆಗಳನ್ನು ತರುತ್ತಿವೆಯೆಂದು, ಇವುಗಳ ಬಗ್ಗೆ ವಿಶ್ವಾಸದಿಂದ ಇರಬೇಕೆಂದು, ಹೇಳಲಾಗುತ್ತಿದೆ.

ಸಮೃದ್ಧವಾಗಿ ವಿಕಾಸಗೊಂಡ ಮೂವತ್ತು ಬಲಿಷ್ಠ ಶ್ರೀಮಂತ ದೇಶಗಳು ಜಗತ್ತಿನ ಉಳಿದ ಎಲ್ಲ ದೇಶಗಳ ಆರ್ಥಿಕ, ತಾಂತ್ರಿಕ, ರಾಜಕೀಯ ಶಕ್ತಿಗಳ ಮೇಲೆ ಏಕಾಧಿಕಾರವನ್ನು ಹೊಂದಿವೆ. ಇದರಿಂದಾಗಿ ಜಗತ್ತಿನ ನೂರಕ್ಕಿಂತ ಹೆಚ್ಚಿನ ದೇಶಗಳಲ್ಲಿಯ ಬಡತನ, ಶೋಷಣೆ, ಪರಾವಲಂಬನೆಗಳು ಇನ್ನಷ್ಟು ಹೆಚ್ಚಾಗತೊಡಗಿವೆ. ಇದರಿಂದಾಗಿ ವಿಶ್ವಸಂಸ್ಥೆಯನ್ನು ಇನ್ನಷ್ಟು ಲೋಕಕಲ್ಯಾಣಕಾರಿಯಾದ, ಪ್ರಜಾತಾಂತ್ರಿಕವಾದ, ಷಡ್ಯಂತ್ರರಹಿತವಾದ ಸಂಸ್ಥೆಯನ್ನಾಗಿಸುವ ಕಾರ್ಯವು ಆಗುತ್ತಿಲ್ಲ. ಈ ಸಂಸ್ಥೆಯು ಈಗಿನ ಸ್ಥಿತಿಯಲ್ಲಿ ವಾಸ್ತವಿಕವಾದ ಜನಪ್ರತಿನಿಧಿತ್ವದ ಸಂಘವಾಗಬೇಕಿದೆ. ವಿಶ್ವಸಂಸ್ಥೆಯ 'ವ್ಹಿಟೋ'ದ ಪ್ರಯೋಗವು ಪ್ರಜಾತಂತ್ರ ವಿರೋಧಿಯಾಗಿ, ಆಕ್ರಮಣಶೀಲವಾಗಿ, ಕ್ಷೋಭಕಾರಿಯಾಗಿ ಬಳಕೆಯಾಗಬಾರದಾಗಿದೆ. ಬಲ ಪ್ರಯೋಗಾತ್ಮಕ ಮಧ್ಯಪ್ರವೇಶಗಳನ್ನು ತಡೆಯುವಂತಹ ಕಾರ್ಯಗಳಿಗೆ ಸರ್ವಸಮ್ಮತವಾಗುವಂತಹ ನಿರ್ಣಯಗಳನ್ನು ಕೈಗೊಳ್ಳುವ ಹಾಗೆ ಈ ಸುರಕ್ಷಾ ಸಾಧನೆಯನ್ನು ರೂಪಾಂತರಿಸಬೇಕಾಗಿದೆ.

ಆಕ್ರಮಣಕಾರಿ ಬೃಹತ್ ಶಕ್ತಿ ರಾಷ್ಟ್ರವೊಂದು ತನ್ನೆಲ್ಲ ಮೂಲ ಬಲಗಳ ಕಾರಣದಿಂದಾಗಿ ಈ ಸಂಸ್ಥೆಯ ಚಟುವಟಿಕೆಗಳ ಪ್ರತಿಯೊಂದು ನಿರ್ಣಾಯಕ ಹಂತದಲ್ಲೂ ದೊಣೆನಾಯಕನ ಪಾತ್ರ ವಹಿಸುತ್ತದೆ. ಇತರ ರಾಷ್ಟ್ರಗಳ ಸಾರ್ವಭೌಮಕತೆಯ ಸಿದ್ಧಾಂತವನ್ನು ಬಲಿತೆಗೆದುಕೊಳ್ಳುವುದಕ್ಕಾಗಿ ಪ್ರಯಾಸಪಡುತ್ತಿರುತ್ತದೆ. ಇದರ ಈ ದುರ್ವರ್ತನೆಯನ್ನು ಕ್ಯೂಬಾ ಎಂದಿಗೂ ಸಹಿಸುವುದಿಲ್ಲ, ಒಪ್ಪುವುದಿಲ್ಲ.

ನಮ್ಮ ಜಗತ್ತಿನ ಇಂದಿನ ಈ ತಿಕ್ಕಾಟ ಸೆಣಸಾಟಗಳ ಕಾರಣಗಳನ್ನು ಕಡು ಬಡತನ ಹಾಗೂ ದೇಶಗಳ ಹಿಂದುಳಿದಿರುವಿಕೆಗಳಲ್ಲಿ ಹುಡುಕಬೇಕಾಗಿದೆ. ಜಗತ್ತಿನಲ್ಲಿರುವ ಎಲ್ಲ ಬಗೆಯ ಅಪಾರ ಸಂಪತ್ತು ಅಸಮಾನವಾಗಿ ಹಂಚಿಕೆಯಾಗುವ ಪದ್ಧತಿಯಲ್ಲಿ ಇಂದಿನ ಪರಿಸ್ಥಿತಿಗೆ ಕಾರಣಗಳನ್ನು ನಾವು ಹುಡುಕಬೇಕಾಗಿದೆ. ಈಗಿನ ಹಿಂದುಳಿಯುವಿಕೆ, ಬಡತನಗಳು ವಸಾಹತುಗಳಾಗಿದ್ದ ದೇಶಗಳ ನವವಸಾಹತೀಕರಣದ ಪ್ರಕ್ರಿಯೆಯಲ್ಲಿ ಕಾಣಬಹುದಾಗಿದೆ. ಇವುಗಳ ಗುಲಾಮಗಿರಿ ಭೂಮಿಯ ಬಹುಭಾಗದ ಲೂಟಿಗಳಿಂದಾಗಿದೆ. ಸಾಮ್ರಾಜ್ಯಶಾಹಿಯ ಏಳಿಗೆಯಿಂದಾಗಿ ಈ ಭೂಮಿಯ ಮೇಲೆ ಒಂದಲ್ಲ ಒಂದು ಕಡೆಯಲ್ಲಿ ರಕ್ತರಂಜಿತ ಯುದ್ಧಗಳಾಗತೊಡಗಿವೆ. ನಮ್ಮಂತಹ ಅನೇಕ ದೇಶಗಳನ್ನು ನೂರಾರು ವರ್ಷಗಳಿಂದ ಯಾವ ದೇಶಗಳು ಹಾಳು ಮಾಡಿವೆಯೋ ಅವೇ ದೇಶಗಳು ಶೋಷಿತ ರಾಷ್ಟ್ರಗಳ ಕೊರತೆಯನ್ನು ಕಂದರವನ್ನು ತುಂಬಿಕೊಡಬೇಕಾಗಿದೆ. ಇದು ಈ ದೇಶಗಳ ನೈತಿಕ ಕರ್ತವ್ಯವಾಗಿದೆ.

ಇಂದು ನಮ್ಮ ಇಡೀ ಮನುಕುಲಕ್ಕೆ ತಾವು ಏನಾಗಿದ್ದೇವೆ ಹಾಗೂ ಏನಾಗಬೇಕಾಗಿದೆ ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ. ವಿಶ್ವಸಂಸ್ಥೆಯ ಹೊಣೆಗಾರರು ಇದನ್ನು ಎಲ್ಲರಿಗೂ ತಿಳಿಸಬೇಕಾಗಿದೆ. ಇಂದು ಮಾನವ ಜನಾಂಗವು ಬೇಕಾದಷ್ಟು ಜ್ಞಾನ, ನೈತಿಕ ಮೌಲ್ಯ, ವೈಜ್ಞಾನಿಕ ಸಂಸಾಧನಗಳನ್ನು ಪಡೆದುಕೊಂಡಿದೆ. ಇವುಗಳ ಸಹಾಯದಿಂದ ನಿಜವಾದ ನ್ಯಾಯ ಹಾಗೂ ವಿಶುದ್ಧ ಮಾನವತಾವಾದಿ ಹೊಸ ಐತಿಹಾಸಿಕ ಮುನ್ನಡೆ ಸಾಧಿಸುವುದಕ್ಕಾಗಿ ನಾವು ಮುಂದುವರಿಯಬೇಕಾಗಿದೆ.

ಆದರೆ ಈಗಿರುವ ಆರ್ಥಿಕ ಹಾಗೂ ರಾಜಕೀಯ ಜಾಗತಿಕ ವ್ಯವಸ್ಥೆಯಲ್ಲಿ ಮಾನವತೆಗೆ ಸೇವೆ ಸಲ್ಲಿಸತಕ್ಕಂತಹ ಯಾವ ಲಕ್ಷಣಗಳೂ, ಅಂಶಗಳೂ ಇಲ್ಲವೇ ಇಲ್ಲ. ಇದರಿಂದಾಗಿ ಈಗಿರುವ ಈ ವ್ಯವಸ್ಥೆಯು ಹೆಚ್ಚು ದಿನ ಟಿಕಾಯಿಸುವಂಥದಲ್ಲ. ಕಾರಣ ಇದನ್ನು ಬದಲಿಸಲಿಕ್ಕೆ ಬೇಕಾಗಿದೆ.

ನಾನು ಇಲ್ಲಿ ಉಲ್ಲೇಖಿಸಬೇಕಾದ ವಿಷಯವೆಂದರೆ : ನಾವು ೬೦೦ ಕೋಟಿ ಜನರಲ್ಲಿ ೮೦ರಷ್ಟು ಜನರು ಬಡವರಾಗಿದ್ದೇವೆ. ಮೂರನೇ ಜಗತ್ತಿನ ದೇಶಗಳಲ್ಲಿ ನೂರಾರು ವರ್ಷಗಳಿಂದ ಹರಡುತ್ತ ಬಂದಿರುವ ಕ್ಷಯ, ಯಕ್ಷ್ಮಾ, ಮಲೇರಿಯಾ ರೋಗಗಳ ಮೇಲೆ ನಿಯಂತ್ರಣ ಸಾಧಿಸುವುದಾಗಿಲ್ಲ. ಏಡ್ಸ್‌ನಂತಹ ಭಯಂಕರ ರೋಗವು ಜಗತ್ತಿನ ಜನಸಂಖ್ಯೆಯ ಬಹುಪಾಲನ್ನು ನಾಶಮಾಡುವಷ್ಟು ಗಂಡಾಂತರಕಾರಿಯಾಗುತ್ತಿದೆ. ಇಂತಹ ಪರಿಸ್ಥಿತಿಯಲ್ಲಿ ಶ್ರೀಮಂತ ರಾಷ್ಟ್ರಗಳು ತಮ್ಮ ದೇಶದ ಮಿಲಿಟರಿ ವೆಚ್ಚವನ್ನು ಹೆಚ್ಚಿಸುತ್ತಿವೆ, ವಿಲಾಸಗಳಿಗೆ ವೆಚ್ಚ ಮಾಡುತ್ತಿವೆ. ಪ್ರತಿದಿನ ಶೇರುಗಳಲ್ಲಿ, ಸಟ್ಟಾ ವ್ಯವಹಾರಗಳಲ್ಲಿ ಲಕ್ಷ-ಕೋಟಿಗಟ್ಟಲೆ ಹಣವನ್ನು ತೊಡಗಿಸುತ್ತಿದ್ದಾರೆ. ನಿಸರ್ಗವನ್ನು ನಾಶಗೊಳಿಸಲಾಗಿದೆ. ಇದರಿಂದಾಗಿ ಋತುಮಾನ, ಹವಾಮಾನಗಳು ಬದಲಾವಣೆಯಾಗಿವೆ. ಮನುಷ್ಯನಿಗೆ ಮುಂದಿನ ದಿನಗಳಲ್ಲಿ ಉಪಯೋಗಿಸಲು ಶುದ್ಧ ನೀರಿನ ಪೂರೈಕೆಯು ಅಸಾಧ್ಯವಾಗಿದೆ. ಈಗ ಅನೇಕ ದೇಶಗಳಲ್ಲಿ ಜನರು ಬಳಸುತ್ತಿರುವ ಕುಡಿಯುವ ನೀರು ಕೂಡಾ ಅಶುದ್ಧವಾಗಿದೆ.

ನೂರಾರು ವರ್ಷಗಳಿಂದ ಕಡಲನ್ನು ಅವಲಂಬಿಸಿ ಬದುಕುತ್ತಿದ್ದ ಜನರಿಗೆ ಈಗ ಸಾಗರ ಸಂಪತ್ತು ಸಿಗದಾಗಿದೆ. ಕ್ರಮೇಣ ಅದು ಇಲ್ಲವಾಗತೊಡಗುವುದು. ಈ ರೀತಿ ಮಹತ್ವದ ನೈಸರ್ಗಿಕ ಮೂಲಾಧಾರಗಳನ್ನು ಐಷಾರಾಮಿ ವಿಲಾಸಿ ಚಟುವಟಿಕೆಗಳಿಗಾಗಿ ಬಳಸಲಾಗುತ್ತಿದೆ.

ವಿಶ್ವಸಂಸ್ಥೆಯ ಇಂದಿನ ಮೂಲ ಉದ್ದೇಶವು ಕೇವಲ ಯುದ್ಧಗಳನ್ನು ಮಾತ್ರ ತಡೆಯುವುದಲ್ಲ. ಅದರ ಜೊತೆಗೆ ಬಡ ರಾಷ್ಟ್ರಗಳ ಹಿಂದುಳಿದಿರುವಿಕೆ, ಹಸಿವು, ರೋಗಗಳು, ಬಡತನ ಹಾಗೂ ಪರಿಸರ ದುರ್ಬಳಕೆಗಳಿಂದಾಗುವ ನಾಶವನ್ನು ನಿಯಂತ್ರಿಸಬೇಕಾಗಿದೆ. ಇದು ಇಂದಿನ-ನಾಳೆಯ ಮನುಕುಲದ ಉಳಿವಿಗಾಗಿ ಜರೂರಾಗಿ ಮಾಡಬೇಕಾಗಿದೆ. ಇಷ್ಟೇ ಅಲ್ಲ, ಈ ಮಹಾ ಕರ್ತವ್ಯವನ್ನು ತಡಮಾಡದೆ ಮಾಡಿ ಮುಗಿಸಬೇಕಾಗಿದೆ.

ಈ ಎಲ್ಲ ನಮ್ಮ ಆಶಯಗಳನ್ನು ನಾವು ಈಡೇರಿಸಿಕೊಳ್ಳುವುದು, ಮಾನವರ ನಾಳೆಯ ಅಸ್ತಿತ್ವಕ್ಕೆ ಅಗತ್ಯವಾಗಿದೆ. ಇದು ಮನುಕುಲದ ನಿಯತಿಯಾಗಿದೆ. ಇದು ಮನುಕುಲದ ವಿವೇಕದ ಮಾನದಂಡವಾಗಿದೆ.

ಈ ಆಶಯಗಳ ಈಡೇರಿಕೆಯು ಎಂದೂ ಆಗದ ಹೋಗದ ಅಸಂಭವನೀಯ ಸಂಗತಿಯೆಂದು ಅನೇಕರಿಗೆ ಅನಿಸಬಹುದು. ಆದರೆ ಅಸಂಭಾವ್ಯ ಸಂಗತಿಗಳನ್ನು ಸಂಭವನೀಯಗೊಳಿಸುವುದಕ್ಕಾಗಿಯೇ ಈ ನಮ್ಮ ವಿಶ್ವಸಂಸ್ಥೆಯನ್ನು ಸಂಸ್ಥಾಪಿಸಲಾಗಿದೆ. ಈ ಮಹಾ ಸಂಸ್ಥೆಯ ಉದ್ದೇಶಗಳಿಗೆ ಬದ್ಧರಾಗಿ ಸಂಘಟಿತರಾಗಿರುವ ನಾವೆಲ್ಲ ನಮ್ಮ ಧ್ಯೇಯಗಳಿಗಾಗಿ ಹೋರಾಡಬೇಕಾಗಿದೆ. ಅದಕ್ಕಾಗಿ ನಾವೆಲ್ಲ ಸಂಕಲ್ಪಿತರಾಗಬೇಕಾಗಿದೆ.

ಅನುವಾದ : *ಪ್ರಕಾಶ ಹಿಟ್ಟನಹಳ್ಳಿ*

*ಸಿನಿಮಾ ಹೇಗಿರಬೇಕು ? ಅಥವಾ ಹೇಗಿರಬಾರದು ? ಈ ಪ್ರಶ್ನೆ ನಿರಂತರವಾಗಿ ಚರ್ಚೆಗೆ ಬಂದಿದೆ. ಮುಂಬೈ ಮಸಾಲಾ ಚಿತ್ರಗಳ ನಿರ್ದೇಶಕನೊಬ್ಬ ಇದೇ ನವೆಂಬರ್ ಮೊದಲ ವಾರದಲ್ಲಿ ಪತ್ರಿಕೆಯೊಂದಕ್ಕೆ ಸಂದರ್ಶನ ನೀಡುತ್ತಾ ಹೇಳಿದ : ''ಗುಡಿಸಲುಗಳನ್ನು ನೋಡಲು ಜನ ಸಿನಿಮಾಕ್ಕೆ ಬರಬೇಕೆ ?'' ದೇಶವನ್ನೆಲ್ಲಾ ಗುಡಿಸಲು ಕೊಂಪೆಯನ್ನಾಗಿಸಿರುವ ಬಂಡವಳಿಗರ ಪ್ರತಿನಿಧಿಯಿಂದ ಇಂತಹ ಮಾತು ಅನಿರೀಕ್ಷಿತವೇನಲ್ಲ. ಆದರೆ ಅವನು ತೋರಿಸುವ ಝಗಮಗಿಸುವ ಮಹಲ್ಲುಗಳನ್ನು, ಡಿಶುಂ-ಡಿಶುಂ ಅನರ್ಥಗಳನ್ನು, ಮಾಯಾಲೋಕದ ಪ್ರೇಮಪ್ರಸಂಗಗಳನ್ನು ನೋಡಲು ಜನ ಸಿನಿಮಾಕ್ಕೆ ಹೋಗಬೇಕೇ ಎಂಬ ಪ್ರಶ್ನೆಯೂ ಅಷ್ಟೇ ಪ್ರಸ್ತುತವಾದ್ದು. ಹೃಷಿಕೇಶ್ ಮುಖರ್ಜಿಯಂಥವರು ಪ್ರಾಯೋಗಿಕವಾಗಿ ಈ ಪ್ರಶ್ನೆಗಳಿಗೆ ಸಿನಿಮಾಗಳಲ್ಲಿ ಉತ್ತರ ನೀಡಿದ್ದಾರೆ.*

# ಸದಭಿರುಚಿಯ ಚಿತ್ರಗಳ ನಿರ್ದೇಶಕ – 'ಹೃಷಿ ದಾ'

ಅದೊಂದು ಕಾಲವಿತ್ತು. ಆಗ್ಗೆ ತಯಾರಾಗುತ್ತಿದ್ದ ಹಲವು ಹಿಂದಿ ಚಲನಚಿತ್ರಗಳಲ್ಲಿ ಸಶಕ್ತ ಗಳಿರುತ್ತಿದ್ದವು. ಪಾತ್ರಗಳ ಬೆಳವಣಿಗೆ ಸಮರ್ಪಕವಾಗಿರುತ್ತಿತ್ತು. ಸಂಗೀತ ಸುಶ್ರಾವ್ಯ ಗಿರುತ್ತಿತ್ತು. ಕುಟುಂಬದವರೊಡನೆ ಯಾವ ರೀತಿಯ ಮುಜುಗರವೂ ಇಲ್ಲದೆ ಚಿತ್ರಗಳನ್ನು ಕ್ಷಿಸಬಹುದಿತ್ತು. ಈ ರೀತಿಯ ಚಿತ್ರಗಳು ಎಪ್ಪತ್ತರ ದಶಕದ ಮೊದಲ ವರ್ಷಗಳವರೆಗೂ ತೆರೆ ಾಣುತ್ತಿದ್ದವು. ನಂತರ ಬಂದವು ಹಲವು ಅಬ್ಬರದ ಚಿತ್ರಗಳು. ಅವುಗಳ ನಾಯಕ ಪಾತ್ರಗಳು ಿ-ಮಾನುಷ ಶಕ್ತಿ ಸಂಪನ್ನರಾಗಿರುತ್ತಿದ್ದವು. ಅತಿಯಾದ ವೈಭವೀಕರಣಕ್ಕೆ ಪ್ರಾಶಸ್ತ್ಯ ಸಿಗುತ್ತಿತ್ತು. ಯಕಿಯ ಪಾತ್ರಗಳು ಬರೀ ಅಂದ-ಚಂದದ ಪ್ರದರ್ಶನದ ಗೊಂಬೆಗಳಂತಿರುತ್ತಿದ್ದವು. ಗೀತದಲ್ಲೂ ನಾದ ಮಾಧುರ್ಯತೆ ಮಾಯವಾಯಿತು. ವೇಗದ ಹಾಡುಗಳಿಗೆ ಮನ್ನಣೆ ರೆಯಿತು. ಒಟ್ಟಿನಲ್ಲಿ ನೈಜ ಜೀವನಕ್ಕೆ ಒಂದಿಷ್ಟೂ ಸ್ಪಂದಿಸದ ಚಿತ್ರಗಳು ಸಾಲು ಸಾಲಾಗಿ ತೆರೆಕಂಡವು. ಇವುಗಳ ಮಧ್ಯೆ ಯಾವಾಗಲಾದರೂ ಒಮ್ಮೊಮ್ಮೆ ವಾಸ್ತವಿಕ ಜೀವನಕ್ಕೆ ಹತ್ತಿರವಿರುವ ಚಿತ್ರಗಳು ತೆರೆಕಾಣುತ್ತಿದ್ದವು. ಅಂತಹ ಚಿತ್ರಗಳನ್ನು ನಿರ್ದೇಶಿಸುತ್ತಿದ್ದ ದಿಗ್ದರ್ಶಕರಲ್ಲಿ ಒಬ್ಬರು ಹೃಷಿಕೇಶ್ ಮುಖರ್ಜಿ. ಚಲನಚಿತ್ರರಂಗಕ್ಕೆ ಅಮೂಲ್ಯ ಕೊಡುಗೆ



ಯನ್ನು ನೀಡಿ ಅದರ ಅಭಿವೃದ್ಧಿಗಾಗಿ ಶ್ರಮಿಸಿದ ಪ್ರತಿಭಾನ್ವಿತರಿಗೆ ದಾದಾಸಾಹೇಬ್ ಫಾಲ್ಕೆ ಶಸ್ತಿಯನ್ನು ನೀಡಲಾಗುವುದು. ೧೯೯೯ನೇ ಸಾಲಿನ ಈ ಪ್ರಶಸ್ತಿಯು ೭೮ವರ್ಷದ 'ಹೃಷಿ ದಾ' ಂದೇ ಖ್ಯಾತಿಯಾಗಿರುವ ಹೃಷಿಕೇಶ್ ಮುಖರ್ಜಿಯವರಿಗೆ ಲಭಿಸಿರುವುದು ಸಂತಸದ ವಿಷಯ.

ಇವರು ಬಂಗಾಳಿ ಮೂಲದವರು. ಸತ್ಯಜಿತ್ ರಾಯ್, ಋತ್ವಿಕ್ ಘಟಕ್, ಮೃಣಾಲ್ ಸೇನ್, ೌತಮ್ ಘೋಷ್‌ರಂತಹ ಮೇರುಸದೃಶ ನಿರ್ದೇಶಕರನ್ನು ಚಲನಚಿತ್ರರಂಗಕ್ಕೆ ನೀಡಿದೆ ಂಗಾಳ. ರಾಷ್ಟ್ರ ಪ್ರಶಸ್ತಿ ಗಳಿಸುವಲ್ಲಿ ಬಂಗಾಳಿ ಹಾಗೂ ಮಲಯಾಳಂ ಚಿತ್ರಗಳದ್ದೇ ಮೇಲುಗೈ. ಂದಿ ಚಲನಚಿತ್ರರಂಗದಲ್ಲಿ ತಮ್ಮದೇ ವಿಶಿಷ್ಟ ಛಾಪನ್ನು ಮೂಡಿಸಿದವರು ಹೃಷಿ ದಾ.

ಇವರು ೧೯೨೨ರಲ್ಲಿ ಕಲ್ಕತ್ತದಲ್ಲಿ ಜನಿಸಿದರು. ಅಲ್ಲಿನ ವಿಶ್ವವಿದ್ಯಾನಿಲಯದಲ್ಲಿ ಪದವಿ ಶಿಕ್ಷಣ ಡೆದರು. ಶಿಕ್ಷಕರಾಗಿ ವಿದ್ಯಾಕ್ಷೇತ್ರಕ್ಕೆ ಕಾಲಿರಿಸಿದರು. ಕಲ್ಕತ್ತಾದ ಆಕಾಶವಾಣಿಯಲ್ಲಿ ಾವಿದರಾದರು. ಸಿತಾರ್ ವಾದನದಲ್ಲಿ ಪ್ರಾವೀಣ್ಯತೆ ಪಡೆದರು. ನಂತರ ಶಿಕ್ಷಕ ವೃತ್ತಿಯನ್ನು ಜಿಸಿ ೧೯೪೫ರಲ್ಲಿ ಕಲ್ಕತ್ತಾದ ನ್ಯೂ ಥಿಯೇಟರ್ಸ್‌ನಲ್ಲಿ ಪ್ರಯೋಗಾಲಯದ ಸಹಾಯಕನಾಗಿ ಸ ಆರಂಭಿಸಿದರು. ಹೀಗೆ ಹೃಷಿಕೇಶ್ ಸಿನಿಮಾರಂಗಕ್ಕೆ ಅಡಿಯಿಟ್ಟರು, ಸಿನಿಮಾ ತಂತ್ರಜ್ಞಾನದ ಳ ಸುಳಿವುಗಳನ್ನು ಅರಿಯಲು ಪ್ರಯತ್ನಪಟ್ಟರು. ಸಂಕಲನ ಕಾರ್ಯದಲ್ಲಿ ಪ್ರೌಢಿಮೆಯನ್ನು ಸಿದರು. ಒಬ್ಬ ಸಂಕಲನಕಾರ ಅಚ್ಚುಕಟ್ಟಾಗಿ ಕೆಲಸ ಮಾಡಿದಾಗ ಮಾತ್ರ ಚಿತ್ರ ಯಶಸ್ವಿಯಾಗಿ ೀಕ್ಷಕರ ಗಮನ ಸೆಳೆಯುವುದರಲ್ಲಿ ಸಫಲವಾಗುವುದು. ಹೃಷಿ ದಾ ಹಿಂದಿಯಲ್ಲಷ್ಟೇ ಅಲ್ಲದೆ ಬೇರೆ ಷೆಗಳ ಚಿತ್ರಗಳಿಗೆ ಸಂಕಲನಕಾರರಾಗಿ ದುಡಿದಿದ್ದಾರೆ. ರಾಮು ಕಾರಿಯತ್‌ರ ರಾಷ್ಟ್ರ ಪ್ರಶಸ್ತಿ ಜೇತ ಮಲಯಾಳಂ ಚಿತ್ರ ''ಚೆಮ್ಮೀನ್'' ಹಾಗೂ ಪಿ.ಲಂಕೇಶರ ''ಅನುರೂಪ'' ಚಿತ್ರಗಳೂ ವುಗಳಲ್ಲಿ ಸೇರಿವೆ.

ನಂತರ ಬಿಮಲ್ ರಾಯ್‌ರ ಬಳಿ ಸಹಾಯಕ ನಿರ್ದೇಶಕರಾಗಿ ದುಡಿದು, ಅವರ ರಡಿಯಲ್ಲಿ ಪಳಗಿದರು. ಅವರಿಗೆ ಹೃಷಿ ದಾರ ಕಾರ್ಯದಕ್ಷತೆಯ ಬಗ್ಗೆ ಭರವಸೆಯಿತ್ತು. ತಮ್ಮ ಲ್ಲಾ ಚಿತ್ರಗಳ ಸಂಕಲನ ಕಾರ್ಯವನ್ನೂ ಅವರಿಗೇ ವಹಿಸಿದ್ದರು.

ಎಪ್ಪತ್ತರ ದಶಕದ ಆದಿಯಲ್ಲಿ ಸಿನಿಮಾ ಪರಿಭಾಷೆಯಲ್ಲಿ ಹೊಸ ಆವಿಷ್ಕಾರಗಳಾದವು. ಕೆಲವು ಂದಿ ಅಂತಹ ಅಂಶಗಳುಳ್ಳ ಚಿತ್ರಗಳನ್ನು ಪರ್ಯಾಯ ಸಿನಿಮಾವೆಂದು ವ್ಯಾಖ್ಯಾನಿಸಿದರು. ್ಯಂ ಬೆನಗಲ್, ಅಡೂರ್ ಗೋಪಾಲಕೃಷ್ಣನ್, ಅರವಿಂದಂ, ಗಿರೀಶ್ ಕಾರ್ನಾಡ್, ಮಣಿ ಕೌಲ್ ುಂತಾದವರು ಆ ರೀತಿಯ ಚಿತ್ರಗಳನ್ನು ನಿರ್ದೇಶಿಸಿ ಖ್ಯಾತರಾದರು. ಪರ್ಯಾಯ ಚಿತ್ರಗಳ ಾಗೂ ವ್ಯಾಪಾರಿ ಚಿತ್ರಗಳ ಹಾದಿ ಹಿಡಿಯದೆ ಮಧ್ಯದ ಮಾರ್ಗವನ್ನನುಸರಿಸಿದವರು ಹೃಷಿ ದಾ. ವರು ಜನಸಾಮಾನ್ಯರ ಜೀವನದ ಸಂಗತಿಗಳಿಗೆ ಕಲೆಯ, ಲಘು ಮನೋರಂಜನೆಯ ೀಪನವಿತ್ತು ಸಾಮಾಜಿಕ ಸಂದೇಶ ನೀಡುವಂತಹ ಚಿತ್ರಗಳನ್ನು ನಿರ್ದೇಶಿಸಿದರು. ಕೌಟುಂಬಿಕ ಾವಸ್ತುಗಳನ್ನು ಹೆಚ್ಚಾಗಿ ಆಧರಿಸಿವೆ ಅವರ ಬಹುತೇಕ ಚಿತ್ರಗಳು.

ಹೃಷಿ ದಾ ನಿರ್ದೇಶನದ ಚೊಚ್ಚಲ ಚಿತ್ರ ಮುಸಾಫಿರ್. ಅದು ತೆರೆಕಂಡದ್ದು ೧೯೫೭ರಲ್ಲಿ. ಈ ಚಿತ್ರ ರಾಷ್ಟ್ರಪತಿ ರಜತ ಪ್ರಶಸ್ತಿಯನ್ನು ಗಳಿಸಿತು. ಒಬ್ಬ ಸಮರ್ಥ ನಿರ್ದೇಶಕನನ್ನು ಚಲನಚಿತ್ರರಂಗಕ್ಕೆ ನೀಡಿತು. ಐದು ದಶಕಗಳ ತಮ್ಮ ಚಲನಚಿತ್ರರಂಗದ ಜೀವನದಲ್ಲಿ ಅವರು ಸುಮಾರು ೪೦ಕ್ಕೂ ಹೆಚ್ಚು ಚಿತ್ರಗಳನ್ನು ನಿರ್ದೇಶಿಸಿದ್ದಾರೆ. ಅನಾಡಿ, ಆನಂದ್, ಅನುಪಮ, ಅಭಿಮಾನ್, ಅನುರಾಧ, ಆಶೀರ್ವಾದ್, ಬಾವರ್ಚಿ, ಗುಡ್ಡಿ, ಬುಡ್ಡ ಮಿಲ್ಗಯಾ, ಮಿಲಿ, ಸತ್ಯಕಾಮ್, ಬೇಮಿಸಾಲ್, ರಂಗ್‌ಬಿರಂಗಿ, ಗೋಲ್‌ಮಾಲ್, ಚುಪ್ಕೆ ಚುಪ್ಕೆ, ನಮಕ್ ಹರಾಮ್, ಖೂಬ್ ಸೂರತ್, ಖಿಲೋನಾ, ಕಲಿಯುಗ್ ಮುಂತಾದವು ಇವರ ಜನಪ್ರಿಯ ಚಿತ್ರಗಳು. ಇವಲ್ಲದೆ ಹಮ್ ಹಿಂದೂಸ್ತಾನಿ, ರಿಷ್ತೆ, ತಲಾಷ್ ಧಾರವಾಹಿಗಳನ್ನು ಟಿ.ವಿ.ಗಾಗಿ ನಿರ್ದೇಶಿಸಿದ್ದಾರೆ. ಇವರು ರಾಷ್ಟ್ರೀಯ ಚಲನಚಿತ್ರ ಅಭಿವೃದ್ಧಿ ನಿಗಮದ ಅಧ್ಯಕ್ಷರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಚಲನಚಿತ್ರ ರಂಗ ಪ್ರವೇಶಿಸಿದ ಹೊಸತರಲ್ಲೇ 'ನೌಕ್ರಿ' ಚಿತ್ರದ ಇವರ ಸಂಕಲನಾಕಾರ್ಯಕ್ಕೆ ಪ್ರಶಸ್ತಿ ಲಭಿಸಿತು. ಖಿಲೋನಾ (೧೯೭೦), ಖೂಬ್‌ಸೂರತ್ (೧೯೮೦) ಹಾಗೂ ಕಲಿಯುಗ್ (೧೯೮೩) ಆಯಾ ವರ್ಷದ ಉತ್ತಮ ಚಿತ್ರಗಳೆಂದು ಆಯ್ಕೆಯಾಗಿ ಫಿಲ್ಮ್‌ಫೇರ್ ಪ್ರಶಸ್ತಿಗಳನ್ನು ಗಳಿಸಿವೆ. ಗೋಲ್‌ಮಾಲ್ ಹಾಗೂ ಜಮುನಾ ಚಿತ್ರಗಳ ನಿರ್ದೇಶನಕ್ಕಾಗಿಯೂ ಹೃಷಿ ದಾ ಪ್ರಶಸ್ತಿಯನ್ನು ಪಡೆದಿದ್ದಾರೆ.

ಇವರು ಗುರುದತ್, ರಾಜ್‌ಕಪೂರ್, ಬಲರಾಜ್ ಸಾಹ್ನಿ, ದಿಲೀಪ್ ಕುಮಾರ್, ದೇವಾನಂದ್, ಸಂಜೀವ್ ಕುಮಾರ್, ಧರ್ಮೇಂದ್ರ, ರಾಜೇಶ್ ಖನ್ನಾ, ಅಮಿತಾಭ್ ಬಚ್ಚನ್, ಶರ್ಮಿಳಾ ಟಾಗೋರ್, ಜಯಾಭಾದುರಿ, ರೇಖಾ ಮುಂತಾದ ಹೆಸರುವಾಸಿ ತಾರೆಗಳೊಡನೆ ಕೆಲಸ ಮಾಡಿದ್ದಾರೆ.

ಹೃಷಿ ದಾರ ಮತ್ತೊಂದು ವೈಶಿಷ್ಟ್ಯವೆಂದರೆ ಹೊಸಬರನ್ನು ಪರಿಚಯಿಸುವ ಪ್ರಯೋಗಶೀಲ ಮನಸ್ಸು. ಯಾವ ರೀತಿಯ ತಾರಾ ವರ್ಚಸ್ಸಿಗೂ ಒಳಗಾಗದೆ ಅನೇಕ ನವ ಪ್ರತಿಭೆಗಳಿಗೆ ತಮ್ಮ ಚಿತ್ರಗಳಲ್ಲಿ ಕೆಲಸ ಮಾಡಲು ಅವಕಾಶವಿತ್ತಿದ್ದಾರೆ.

೧೯೭೦ರಲ್ಲಿ ತೆರೆಕಂಡ ಆನಂದ್, ರಾಜೇಶ್ ಖನ್ನಾನ ನಟನಾ ಕೌಶಲ್ಯವನ್ನು ಪರಿಚಯಿಸಿತು. ಇದೇ ಚಿತ್ರದಲ್ಲಿ ಅಮಿತಾಭ್ ಸಹ ನಟಿಸಿದ್ದರು. ಹಾಗೆಯೇ 'ಅಭಿಮಾನ್'ನಲ್ಲಿ ಅಮಿತಾಭ್ - ಜಯಾಭಾದುರಿ ಜೋಡಿಯ ನಟನೆ ವೀಕ್ಷಕರ ಗಮನ ಸೆಳೆಯಿತು. ಮುಂದೆ ರಾಜೇಶ್ ಖನ್ನಾ ಹಾಗೂ ಅಮಿತಾಭ್ ಮೆಗಾ ಸ್ಟಾರ್‌ಗಳಾದದ್ದು ತಿಳಿದ ವಿಚಾರವೇ. ಈ ವಿಷಯದಲ್ಲಿ ಅವರು ಕನ್ನಡದ ಪುಟ್ಟಣ್ಣ ಕಣಗಾಲ್ ಹಾಗೂ ತಮಿಳಿನ ಕೆ. ಬಾಲಚಂದರ್‌ರ ಸಾಲಿಗೆ ಸೇರುತ್ತಾರೆ.

೧೯೮೮ರಿಂದ ಹೃಷಿ ದಾ ಯಾವ ಚಿತ್ರವನ್ನೂ ನಿರ್ದೇಶಿಸಿರಲಿಲ್ಲ. ಸುಮಾರು ಎರಡು ವರ್ಷಗಳ ಹಿಂದೆ 'ಝೂಠ್ ಬೋಲೆ ಕವ್ವಾ ಕಾಟೆ' ಚಿತ್ರವನ್ನು ನಿರ್ದೇಶಿಸಿದರು. ಆದರೆ ಅದು ಗಲ್ಲಾಪೆಟ್ಟಿಗೆಯಲ್ಲಿ ಸೋತಿತು.

ಫಾಲ್ಕೆ ಪ್ರಶಸ್ತಿ ಪಡೆದ ನಂತರ ಸಂದರ್ಶನವೊಂದರಲ್ಲಿ ಮಾತನಾಡುತ್ತಾ ಅವರು ತಮ್ಮ ಮಾದರಿಯ ಚಿತ್ರಗಳಿಗೆ ಈಗ ಮನ್ನಣೆ ಸಿಗುವುದಿಲ್ಲವೆಂದೂ ಈಗಿನ ಚಿತ್ರಗಳಲ್ಲಿ ತಾಂತ್ರಿಕತೆಯದೇ ಮೇಲ್ಗೈಯಿದೆಯೆಂದೂ, ಹಾಡುಗಳು ಕರ್ಣಗಳಿಗಿಂತ ಕಂಗಳಿಗೆ ಚಿತ್ರಿಸಲ್ಪಡುತ್ತಿವೆಯೆಂದೂ ನೇರವಾಗಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದರೆ ಅವರಿಗೆ ಇಂದಿನ ಕಲಾವಿದರ ಪ್ರತಿಭೆಯ ಬಗ್ಗೆ ಅಪಾರ ಭರವಸೆಯಿದೆ.

ತಡವಾಗಿಯಾದರೂ ಹೃಷಿ ದಾಗೆ ಈ ಪ್ರಶಸ್ತಿ ಲಭಿಸಿದೆ. ಇದರಿಂದಲಾದರೂ ಸದಾಶಯದ, ಸದಭಿರುಚಿಯ ಚಿತ್ರಗಳ ನಿರ್ಮಾಣಕ್ಕೆ ಇನ್ನೂ ಹೆಚ್ಚಿನ ಪ್ರೇರಣೆ ಸಿಗಲಿ ಎಂದು ಆಶಿಸೋಣ.

**ಮ. ಶ್ರೀ. ಮುರಳಿ ಕೃಷ್ಣ**
ನಂ. ೧೦೦, ೨ನೇ 'ಎ' ಕ್ರಾಸ್, ಗವಿಪುರಂ ಬಡಾವಣೆ, ಬೆಂಗಳೂರು - ೫೬೦ ೦೧೯ (ಆಧಾರ: ವಿವಿಧ ಮೂಲಗಳು)

# 'ರಾಜಕೀಯ'ದ ಅರ್ಥ

ನಮಗೆ ಸ್ವಾತಂತ್ರ್ಯ ದೊರಕಿ ಐವತ್ತು ವರ್ಷಗಳಾಗಿಹೋದವು. ಈ ಐದು ದಶಕಗಳಲ್ಲಿ ರಾಜಕೀಯ, ರಾಜಕಾರಣ ಎಂಬ ಪದಗಳು ಅತ್ಯಂತ ಹೀನವಾದ ಅರ್ಥವನ್ನು ಪಡೆದಿವೆ.

ರಾಜಕೀಯ ಎಂಬ ಪದಕ್ಕೆ ಬ್ರಿಟಿಷರ ಆಳ್ವಿಕೆಯಲ್ಲಿ ಅರ್ಥ ಬೇರೆಯೇ ಆಗಿತ್ತು. ಭಾರತದ ಮಟ್ಟಿಗೆ ಹೇಳುವುದಾದರೆ ಆಗಿನ ಬಹುತೇಕ ರಾಜಕಾರಣಿಗಳ ಮೂಲ ಉದ್ದೇಶ ದೇಶಕ್ಕೆ ಸ್ವಾತಂತ್ರ್ಯ ದೊರಕಿಸಿಕೊಡುವುದಾಗಿತ್ತು. ಸ್ವಾತಂತ್ರ್ಯವನ್ನು ಗಳಿಸಲು ತಮಗೆ ಸೂಕ್ತವೆನಿಸಿದ ಮಾರ್ಗದಲ್ಲಿ ಅವರು ನಡೆದರು. ಗಾಂಧೀಜಿಯಂಥ ನಾಯಕರು ಸತ್ಯಾಗ್ರಹ, ಅಹಿಂಸಾ ಮಾರ್ಗಗಳಲ್ಲಿ ನಡೆದರೆ, ಭಗತ್ ಸಿಂಗ್‌ನಂಥ ಕ್ರಾಂತಿಕಾರಿಗಳು ಹೋರಾಟ, ಪ್ರತೀಕಾರಗಳ ಹಾದಿ ತುಳಿದರು. ಆದರೆ ಎಲ್ಲರಲ್ಲಿಯೂ ನಾವು ಮುಖ್ಯವಾಗಿ ಗಮನಿಸಬೇಕಾದದ್ದು 'ನಿಸ್ವಾರ್ಥ ಭಾವನೆ'.

ಅಂದಿನ ದಿನಗಳಲ್ಲಿ 'ರಾಜಕೀಯ' ಎಂದರೆ ರಾಜ್ಯಕ್ಕಾಗಿ ದುಡಿಯುವ ಕ್ಷೇತ್ರ ಹಾಗೂ 'ರಾಜಕಾರಣಿ' ಎಂದರೆ ರಾಜ್ಯಕ್ಕಾಗಿ ದುಡಿಯುವವನು ಎಂಬರ್ಥಗಳಿದ್ದುವು. ರಾಜಕಾರಣಿ ಎಂಬುದು ನಿಜವಾಗಿರಬೇಕಾದರೆ ಅವನು ದೇಶಭಕ್ತನೇ ಆಗಿರಬೇಕಿತ್ತು.

ಆದರೆ ಕಾಲ ಎಲ್ಲವನ್ನೂ ಮರೆಸಿದೆ. ಈಗ ಎಲ್ಲವೂ ತಿರುವು-ಮುರುವು ಆಗಿದೆ. ಇಂದು ರಾಜಕೀಯವೆಂದರೆ ಸ್ವಾರ್ಥದಿಂದ ತನ್ನ ಬೇಳೆ ಬೇಯಿಸಿಕೊಳ್ಳುವುದಕ್ಕೆ ಸೂಕ್ತವಾದ ಕ್ಷೇತ್ರ ಎಂಬಂತಾಗಿದೆ. ರಾಜಕೀಯವೆಂಬುದು ಪಟಿಂಗರು ಆಶ್ರಯಿಸುವ ಕೊನೆಯ ಸ್ಥಾನ ಎಂಬ ಡಾ|| ಜಾನ್ಸನ್ ಮಾತು ಬಹುತೇಕ ನಿಜವಾಗಹತ್ತಿದೆ. 'ರಾಜಕಾರಣಿ ಎಂದರೆ ಮಹಾಪಟಿಂಗನೇ ಇರಬೇಕು; ಸಂಭಾವಿತನಂತೂ ಇರಲಿಕ್ಕೆ ಸಾಧ್ಯವಿಲ್ಲ' ಎಂದು ಜನರು ಭಾವಿಸುವಂತಾಗಿದೆ. ಆದರೂ ನಮ್ಮ ಅದೃಷ್ಟವೆಂಬಂತೆ ಅಲ್ಲೊಬ್ಬ ಇಲ್ಲೊಬ್ಬ ಸಂಭಾವಿತರು ಸಿಗುತ್ತಾರೆ. ಅವರಿಗೆ ಸೈದ್ಧಾಂತಿಕ ಬದ್ಧತೆಯೂ ಇರುತ್ತದೆ. ಆದರೆ ಪಟಿಂಗರ ಗುಂಪಿನಲ್ಲಿ, ಅವರದೇ ಸರ್ಕಾರದಲ್ಲಿ, ಇವರು ಸಾಧನೆ ಮಾಡುವುದು ಬಹು ಕಷ್ಟಸಾಧ್ಯ. ಜನಸಮುದಾಯವನ್ನು ಜಾಗೃತಗೊಳಿಸುವ ಪ್ರಯತ್ನ ಎಷ್ಟು ಕ್ಲಿಷ್ಟವಾಗುತ್ತದೆಂಬ ಅರಿವು ಈಗ ಸ್ಪಷ್ಟವಾಗತೊಡಗಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ರಾಜಕಾರಣಿಗಳ ಹೆಂಡತಿ ಮಕ್ಕಳೂ ಸಹ ಪಡಬಾರದ ಕಷ್ಟಗಳನ್ನು ಪಟ್ಟರು; ಮನೆ-ಹೊಲಗಳನ್ನು ಕಳೆದುಕೊಂಡು ಬೀದಿಗೆ ಬಂದರು. ಆಗಿನ ರಾಜಕಾರಣಿಗಳ ಕುಟುಂಬದವರು ಒಂದು ವೇಳೆ ಅವರ ಬಗ್ಗೆ ಮುನಿಸು ತೋರಿದರೂ ದೇಶ ಅವರ ಬಗ್ಗೆ ಹೆಮ್ಮೆ ಪಡುತ್ತಿತ್ತು. ಆದರೆ ಇಂದಿನ ಅನೇಕ ರಾಜಕಾರಣಿಗಳು ಸ್ವಂತದ ಕುಟುಂಬ ಮಾತ್ರವೇ ಅವರ ಬಗ್ಗೆ ಹೆಮ್ಮೆ ಪಡುವಂತೆ ಎಲ್ಲವನ್ನೂ ಕುಟುಂಬಕ್ಕಾಗಿಯೇ ಮಾಡುತ್ತಾರೆ; ದೇಶದ ಮುನಿಸನ್ನು ಅವರು ಗಮನಿಸುವುದಿಲ್ಲ. ಮುನಿಸು ತೋರುವ ಜನರೂ ಕಡಿಮೆಯಾಗುತ್ತಿದ್ದಾರೆ.

ಒಂದೆಡೆ ರೂಸೋ ಹೇಳುತ್ತಾನೆ : 'ಪ್ರಜೆಗಳು ಸರ್ಕಾರವನ್ನು ಗೌರವಿಸುವುದು ಆತ್ಮ ಸಂತೋಷದಿಂದಲೇ ಹೊರತು ಅಧಿಕಾರ ಬಲದ ಹೆದರಿಕೆಯಿಂದಲ್ಲ.' ಆದರೆ ಇಂದು ಆತ್ಮ ಸಂತೋಷದಿಂದ ಗೌರವಿಸುವಂಥ ಸರ್ಕಾರವನ್ನು ಪ್ರಜೆಗಳು ಹೊಂದಿದ್ದಾರೆಯೆ ? ಇಂಥ ಸರ್ಕಾರ ಕಟ್ಟಬೇಕಾದರೆ ರಾಜಕಾರಣಿಗಳು ತಮ್ಮ ಸ್ವಾರ್ಥತನವನ್ನು ಹದ್ದುಬಸ್ತಿನಲ್ಲಿ ಇಟ್ಟುಕೊಂಡು ಜನತೆಗಾಗಿ ಕಾರ್ಯತತ್ಪರರಾಗಬೇಕು.

'ರಾಜಕೀಯವೇ ಬೇರೆ, ನೈತಿಕತೆಯೇ ಬೇರೆ' ಎಂದು ಭಾವಿಸುವವನು ಎರಡರಲ್ಲಿ ಒಂದನ್ನೂ ಅರ್ಥಮಾಡಿಕೊಂಡಿರುವುದಿಲ್ಲ ಎಂದು ಒಂದೆಡೆ ಜಾನ್ ಮಾರ್ಲೆ ಹೇಳುತ್ತಾನೆ. ಆದರೆ ಇಂದು ನೈತಿಕವಾದದ್ದನ್ನು ಬಿಟ್ಟು ಉಳಿದದ್ದೆಲ್ಲಾ 'ರಾಜಕೀಯ' ಎಂಬ ಅರ್ಥ ಬಂದುಬಿಟ್ಟಿದೆ. ಅಡ್ಡದಾರಿ ಹಿಡಿದ ವ್ಯಕ್ತಿಯನ್ನು 'ಏನೋ ರಾಜಕೀಯ ಮಾಡುತ್ತಿದ್ದಾನೆ' ಎಂದು ಜನ ಟೀಕಿಸುತ್ತಾರೆ. ಗಾಂಧೀಜಿಯವರೂ ಸಹ ರಾಜಕಾರಣದಿಂದ ಧರ್ಮವನ್ನು ಬೇರ್ಪಡಿಸಿದವರಲ್ಲ. ಇಲ್ಲಿ ನ್ಯಾಯ, ನೀತಿಗಳಿಂದ ಕೂಡಿದ ಸರಿಯಾದ ಜೀವನ ಪಥವೇ ಧರ್ಮ. ಹೀಗೆ ನೈತಿಕ ತಳಹದಿಯ ಮೇಲೆ ನಿಂತ ರಾಜಕೀಯ ನಿಜವಾದ ರಾಜಕೀಯ; ಅದು ಸ್ವಾರ್ಥರಹಿತವಾದದ್ದು, ಸಿದ್ಧಾಂತದ ಪರವಾದದ್ದು. ತಮ್ಮ ಸ್ವಾರ್ಥರಹಿತ ರಾಜಕಾರಣದಿಂದಲೇ ಅಲ್ಲವೆ ಗಾಂಧೀಜಿಯವರು ರಾಜಕೀಯದಲ್ಲಿದ್ದೂ ಮಹಾತ್ಮರೆನಿಸಿಕೊಂಡದ್ದು! ಆ ಹಿರಿಮೆ ಜಗತ್ತಿನ ಯಾವುದೇ ರಾಜಕಾರಣಿಯ ಜೀವಾಳವಾಗಬೇಕು. ಆಗ ನಿಷ್ಕಲ್ಮಶವಾದ ಜನಪರ ರಾಜಕೀಯ ಸಾಧ್ಯವಾಗುತ್ತದೆ, ಜನರು ನೇರವಾಗಿ ಭಾಗಿಗಳಾಗುತ್ತಾರೆ.

**ಡಾ|| ವಿಜಯಕುಮಾರ ಕಮ್ಮಾರ**
ನಂ. ೩೫೬೩, ಎ ಪಿ ಎಂ ಸಿ ಯಾರ್ಡ್ ಬಳಿ, ಶಿಗ್ಗಾಂವ - ೫೮೧೨೦೫ ಜಿಲ್ಲಾ: ಹಾವೇರಿ

# ಹಂಗು

'**ಹಂ**ಗು' ಎನ್ನುವ ಪದಕ್ಕೆ ಆಸೆ, ಹಂಬಲ ಎಂಬ ಒಂದು ಅರ್ಥವಿದ್ದರೂ, ದಾಕ್ಷಿಣ್ಯ, ಋಣ, ಮುಲಾಜು ಎಂಬ ಅರ್ಥದಲ್ಲಿ ಅದನ್ನು ಬಳಸುವುದೇ ಹೆಚ್ಚು. ಸಹಾಯ ಪಡೆದವರಿಂದ ಬೇರೆಯಾಗದಂತೆ ಬಂಧಿಸುವ ಒಂದು ದೌರ್ಬಲ್ಯವೇ ಹಂಗು. ''ದಾಕ್ಷಿಣ್ಯಕ್ಕೆ ಬಸುರಾದಂತೆ'' ಎಂಬ ಮಾತಿನಲ್ಲಿ ಈ ಇಂಗಿತವಿದೆ. ಈ ಬಗೆಯ ಹಂಗಿನಿಂದಾಗಿಯೇ ದುರ್ಯೋಧನ ದುಷ್ಟನೆಂದು ಗೊತ್ತಾದರೂ ಅವನ ಪಕ್ಷಕ್ಕೆ ಕಚ್ಚಿಕೊಂಡು ಭೀಷ್ಮ, ದ್ರೋಣ, ಕರ್ಣ ಮುಂತಾದವರು ಪಾಂಡವರೊಡನೆ ಹೋರಾಡಿ ಪ್ರಾಣ ತೆತ್ತರು.

ಹಂಗಿನ ಬಲೆಯಲ್ಲಿ ಬಿದ್ದಾಗ ಮನುಷ್ಯ ಅಧೀರನಾಗುತ್ತಾನೆ, ಅಧೀನನಾಗುತ್ತಾನೆ. ಇದು ರಾಷ್ಟ್ರಕ್ಕೂ ಸಂಬಂಧಿಸಿದ ವಿಚಾರ. ಒಂದು ಶ್ರೀಮಂತ ರಾಷ್ಟ್ರದಿಂದ ಸಹಾಯ ಪಡೆದ ಬಡರಾಷ್ಟ್ರ ಆ ರಾಷ್ಟ್ರದ ಅನೈತಿಕತೆಯನ್ನು ಎತ್ತಿ ತೋರಿಸಲು ಅಸಮರ್ಥವಾಗುತ್ತದೆ. ಆರ್ಥಿಕ ನೆರವು ನೈತಿಕ ಪತನಕ್ಕೆ ನೆರವಾಗುವ ಸಾಧ್ಯತೆ ಇದೆ. ''ಹಂಗಿನರಮನೆಗಿಂತ ಇಂಗಡದ ಗುಡಿ ಲೇಸು, ಭಂಗಪಟ್ಟುಂಬ ಬಿಸಿಯನ್ನಕ್ಕಿಂತಲೂ ತಂಗಳವೆ ಲೇಸು'' ಎನ್ನುವ ಹಳೆಯ ಸೂಕ್ತಿ ಇಂದಿಗೂ ಪ್ರಸ್ತುತ.

ಹಂಗು ಎನ್ನುವುದೊಂದು ಹಗ್ಗ. ಈ ಹಗ್ಗ ನಮಗೆ ಒಗ್ಗದಿರುವುದನ್ನು ನಮ್ಮಿಂದ ಮಾಡಿಸುತ್ತದೆ. ನಮ್ಮ ಸ್ವಾಭಿಮಾನಕ್ಕೆ ಮಸಿ ಬಳಿಯುತ್ತದೆ. ನಮ್ಮ ಇಚ್ಛೆಯ ವಿರುದ್ಧ ನಾವೇ ವರ್ತಿಸುವಂತೆ ಮಾಡುತ್ತದೆ. ಆದುದರಿಂದ ನಾವು ಯಾರ ಹಂಗಿಗೂ ಒಳಗಾಗಬಾರದು.

ಹಾಗೆಂದ ಮಾತ್ರಕ್ಕೆ ನಮಗೆ ಉಪಕಾರ ಎಸಗಿದವರಿಗೆ ನಾವು ಅಪಕಾರ ಎಸಗಬಹುದೆಂಬ ಅರ್ಥವಲ್ಲ, ನಮ್ಮನ್ನು ನಾವು ಮಾರಿಕೊಳ್ಳುವಂತಹ ಉಪಕಾರಗಳಿಂದ ನಾವು ದೂರ ಸರಿಯಬೇಕು. ಸ್ವಾವಲಂಬಿಗಳಾಗಬೇಕು.

ಜೀವದ ಹಂಗು (ಆಸೆ) ತೊರೆದು ಹೋರಾಡುವ ಸನ್ನಿವೇಶ ಇಂದಿನ ಜನಜೀವನದಲ್ಲಿ ಕಡಿಮೆಯಾಗಿರಬಹುದು. ಆದರೆ ಇಂದು ಹೆಂಡತಿ ಎನ್ನಿಸಿಕೊಂಡವಳು ಹೊರಗೆ ಹೋಗಿ ನಾಲ್ಕು ಕಾಸು ದುಡಿದು ಗಂಡನಿಂದಲ್ಲದಿದ್ದರೂ ಅವನ ಹಂಗಿನಿಂದ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾಳೆ. ಮದುವೆಗೆ ಬಂದ ಹುಡುಗಿ ತನಗಿಷ್ಟ ಬಂದ ಹುಡುಗನ ಕೈ ಹಿಡಿದು ವಿವಾಹದ ದುಬಾರಿ ಖರ್ಚು, ವರದಕ್ಷಿಣೆ ಮುಂತಾದ ಭಾರವನ್ನು ತಂದೆ ತಾಯಿಯ ಮೇಲೆ ಹಾಕದೆ ಅವರಿಂದಲ್ಲದಿದ್ದರೂ ಅವರ ಹಂಗಿಗೆ ಬೀಳದಂತೆ ದೂರವಿರಲು ಪ್ರಯತ್ನಿಸುತ್ತಾಳೆ. ಉಚ್ಚ ಶಿಕ್ಷಣ ಪಡೆಯುವ ಮಕ್ಕಳಿಗೆ ಬ್ಯಾಂಕಿನ ಸಾಲ ಸಿಗುವ ಸೌಲಭ್ಯವಿರುವುದರಿಂದ ತಮ್ಮ ತಂದೆ ತಾಯಿಯರ ಮೇಲೆ ಭಾರ ಹಾಕದೆ ಪ್ರಗತಿ ಸಾಧಿಸುವ ಸಾಧ್ಯತೆ ಇದೆ. ನೌಕರಿಯಲ್ಲಿದ್ದು ನಿವೃತ್ತಿ ಹೊಂದಿದವರು ತಮಗೆ ಬರುವ ಪಿಂಚಣಿಯಿಂದ, ಮಕ್ಕಳ ಆಶ್ರಯಕ್ಕೆ, ಅಲಕ್ಷ್ಯಕ್ಕೆ ತುತ್ತಾಗದಂತೆ ತಮ್ಮ ಕೊನೆಗಾಲದ ಜೀವನ ತಮ್ಮಿಷ್ಟದಂತೆ ಸಾಗಿಸುವ ಸಾಧ್ಯತೆ ಇದೆ.

ಹಂಗಿಗೆ ಒಳಗಾಗದಂತೆ ಬೆಳೆಯುವುದು ವ್ಯಕ್ತಿಗೆ ಎಷ್ಟು ಉಚಿತವೋ, ರಾಷ್ಟ್ರಕ್ಕೂ ಅಷ್ಟೇ ಉಚಿತ.

**ಹಾಲಾಡಿ ಮಾರುತಿರಾವ್**
೩/೪, 'ಮ್ಹಾಳಸಾ ನಿವಾಸ', ಅಬ್ಬಿಗೆರೆ ಬಡಾವಣೆ
ಚಿಕ್ಕಬಾಣಾವರ ರಸ್ತೆ, ಬೆಂಗಳೂರು - ೫೬೦ ೦೯೦

# ೨೦೦೧



ತಿಂಗಳ ಪತ್ರಿಕೆ

**ಹೊಸತು**

ನವಕರ್ನಾಟಕ ಪ್ರಕಾಶನ

## ಜನವರಿ

| | | | | | |
|---|---|---|---|---|---|
| ಭಾನು | | ೭ | ೧೪ | ೨೧ | ೨೮ |
| ಸೋಮ | ೧ | ೮ | ೧೫ | ೨೨ | ೨೯ |
| ಮಂಗಳ | ೨ | ೯ | ೧೬ | ೨೩ | ೩೦ |
| ಬುಧ | ೩ | ೧೦ | ೧೭ | ೨೪ | ೩೧ |
| ಗುರು | ೪ | ೧೧ | ೧೮ | ೨೫ | |
| ಶುಕ್ರ | ೫ | ೧೨ | ೧೯ | ೨೬ | |
| ಶನಿ | ೬ | ೧೩ | ೨೦ | ೨೭ | |

## ಫೆಬ್ರವರಿ

| | | | | | |
|---|---|---|---|---|---|
| ಭಾನು | | ೪ | ೧೧ | ೧೮ | ೨೫ |
| ಸೋಮ | | ೫ | ೧೨ | ೧೯ | ೨೬ |
| ಮಂಗಳ | | ೬ | ೧೩ | ೨೦ | ೨೭ |
| ಬುಧ | | ೭ | ೧೪ | ೨೧ | ೨೮ |
| ಗುರು | ೧ | ೮ | ೧೫ | ೨೨ | |
| ಶುಕ್ರ | ೨ | ೯ | ೧೬ | ೨೩ | |
| ಶನಿ | ೩ | ೧೦ | ೧೭ | ೨೪ | |

## ಮಾರ್ಚ್

| | | | | | |
|---|---|---|---|---|---|
| ಭಾನು | | ೪ | ೧೧ | ೧೮ | ೨೫ |
| ಸೋಮ | | ೫ | ೧೨ | ೧೯ | ೨೬ |
| ಮಂಗಳ | | ೬ | ೧೩ | ೨೦ | ೨೭ |
| ಬುಧ | | ೭ | ೧೪ | ೨೧ | ೨೮ |
| ಗುರು | ೧ | ೮ | ೧೫ | ೨೨ | ೨೯ |
| ಶುಕ್ರ | ೨ | ೯ | ೧೬ | ೨೩ | ೩೦ |
| ಶನಿ | ೩ | ೧೦ | ೧೭ | ೨೪ | ೩೧ |

## ಏಪ್ರಿಲ್

| | | | | | |
|---|---|---|---|---|---|
| ಭಾನು | ೧ | ೮ | ೧೫ | ೨೨ | ೨೯ |
| ಸೋಮ | ೨ | ೯ | ೧೬ | ೨೩ | ೩೦ |
| ಮಂಗಳ | ೩ | ೧೦ | ೧೭ | ೨೪ | |
| ಬುಧ | ೪ | ೧೧ | ೧೮ | ೨೫ | |
| ಗುರು | ೫ | ೧೨ | ೧೯ | ೨೬ | |
| ಶುಕ್ರ | ೬ | ೧೩ | ೨೦ | ೨೭ | |
| ಶನಿ | ೭ | ೧೪ | ೨೧ | ೨೮ | |

## ಮೇ

| | | | | | |
|---|---|---|---|---|---|
| ಭಾನು | | ೬ | ೧೩ | ೨೦ | ೨೭ |
| ಸೋಮ | | ೭ | ೧೪ | ೨೧ | ೨೮ |
| ಮಂಗಳ | ೧ | ೮ | ೧೫ | ೨೨ | ೨೯ |
| ಬುಧ | ೨ | ೯ | ೧೬ | ೨೩ | ೩೦ |
| ಗುರು | ೩ | ೧೦ | ೧೭ | ೨೪ | ೩೧ |
| ಶುಕ್ರ | ೪ | ೧೧ | ೧೮ | ೨೫ | |
| ಶನಿ | ೫ | ೧೨ | ೧೯ | ೨೬ | |

## ಜೂನ್

| | | | | | |
|---|---|---|---|---|---|
| ಭಾನು | | ೩ | ೧೦ | ೧೭ | ೨೪ |
| ಸೋಮ | | ೪ | ೧೧ | ೧೮ | ೨೫ |
| ಮಂಗಳ | | ೫ | ೧೨ | ೧೯ | ೨೬ |
| ಬುಧ | | ೬ | ೧೩ | ೨೦ | ೨೭ |
| ಗುರು | | ೭ | ೧೪ | ೨೧ | ೨೮ |
| ಶುಕ್ರ | ೧ | ೮ | ೧೫ | ೨೨ | ೨೯ |
| ಶನಿ | ೨ | ೯ | ೧೬ | ೨೩ | ೩೦ |





## ಜುಲೈ

| | | | | | |
|---|---|---|---|---|---|
| ಭಾನು | ೧ | ೮ | ೧೫ | ೨೨ | ೨೯ |
| ಸೋಮ | ೨ | ೯ | ೧೬ | ೨೩ | ೩೦ |
| ಮಂಗಳ | ೩ | ೧೦ | ೧೭ | ೨೪ | ೩೧ |
| ಬುಧ | ೪ | ೧೧ | ೧೮ | ೨೫ | |
| ಗುರು | ೫ | ೧೨ | ೧೯ | ೨೬ | |
| ಶುಕ್ರ | ೬ | ೧೩ | ೨೦ | ೨೭ | |
| ಶನಿ | ೭ | ೧೪ | ೨೧ | ೨೮ | |

## ಆಗಸ್ಟ್

| | | | | | |
|---|---|---|---|---|---|
| ಭಾನು | | ೫ | ೧೨ | ೧೯ | ೨೬ |
| ಸೋಮ | | ೬ | ೧೩ | ೨೦ | ೨೭ |
| ಮಂಗಳ | | ೭ | ೧೪ | ೨೧ | ೨೮ |
| ಬುಧ | ೧ | ೮ | ೧೫ | ೨೨ | ೨೯ |
| ಗುರು | ೨ | ೯ | ೧೬ | ೨೩ | ೩೦ |
| ಶುಕ್ರ | ೩ | ೧೦ | ೧೭ | ೨೪ | ೩೧ |
| ಶನಿ | ೪ | ೧೧ | ೧೮ | ೨೫ | |

## ಸೆಪ್ಟೆಂಬರ್

| | | | | | |
|---|---|---|---|---|---|
| ಭಾನು | ೩೦ | ೨ | ೯ | ೧೬ | ೨೩ |
| ಸೋಮ | | ೩ | ೧೦ | ೧೭ | ೨೪ |
| ಮಂಗಳ | | ೪ | ೧೧ | ೧೮ | ೨೫ |
| ಬುಧ | | ೫ | ೧೨ | ೧೯ | ೨೬ |
| ಗುರು | | ೬ | ೧೩ | ೨೦ | ೨೭ |
| ಶುಕ್ರ | | ೭ | ೧೪ | ೨೧ | ೨೮ |
| ಶನಿ | ೧ | ೮ | ೧೫ | ೨೨ | ೨೯ |

## ಅಕ್ಟೋಬರ್

| | | | | | |
|---|---|---|---|---|---|
| ಭಾನು | | ೭ | ೧೪ | ೨೧ | ೨೮ |
| ಸೋಮ | ೧ | ೮ | ೧೫ | ೨೨ | ೨೯ |
| ಮಂಗಳ | ೨ | ೯ | ೧೬ | ೨೩ | ೩೦ |
| ಬುಧ | ೩ | ೧೦ | ೧೭ | ೨೪ | ೩೧ |
| ಗುರು | ೪ | ೧೧ | ೧೮ | ೨೫ | |
| ಶುಕ್ರ | ೫ | ೧೨ | ೧೯ | ೨೬ | |
| ಶನಿ | ೬ | ೧೩ | ೨೦ | ೨೭ | |

## ನವೆಂಬರ್

| | | | | | |
|---|---|---|---|---|---|
| ಭಾನು | | ೪ | ೧೧ | ೧೮ | ೨೫ |
| ಸೋಮ | | ೫ | ೧೨ | ೧೯ | ೨೬ |
| ಮಂಗಳ | | ೬ | ೧೩ | ೨೦ | ೨೭ |
| ಬುಧ | | ೭ | ೧೪ | ೨೧ | ೨೮ |
| ಗುರು | ೧ | ೮ | ೧೫ | ೨೨ | ೨೯ |
| ಶುಕ್ರ | ೨ | ೯ | ೧೬ | ೨೩ | ೩೦ |
| ಶನಿ | ೩ | ೧೦ | ೧೭ | ೨೪ | |

## ಡಿಸೆಂಬರ್

| | | | | | |
|---|---|---|---|---|---|
| ಭಾನು | ೩೦ | ೨ | ೯ | ೧೬ | ೨೩ |
| ಸೋಮ | ೩೧ | ೩ | ೧೦ | ೧೭ | ೨೪ |
| ಮಂಗಳ | | ೪ | ೧೧ | ೧೮ | ೨೫ |
| ಬುಧ | | ೫ | ೧೨ | ೧೯ | ೨೬ |
| ಗುರು | | ೬ | ೧೩ | ೨೦ | ೨೭ |
| ಶುಕ್ರ | | ೭ | ೧೪ | ೨೧ | ೨೮ |
| ಶನಿ | ೧ | ೮ | ೧೫ | ೨೨ | ೨೯ |



